# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ತನು, ವಿ. ಗೋಪಾಲ್, ರಾಂಚಂದ್ರ ಕೊಪ್ಪಲು, ವಿಆರ್‌ಸಿ ಶೇಖರ್, ಜಿಎಂಬೊ

**ಮುಖಪುಟ :** ವೀರಣ್ಣ ಕರಡಿ ಅವರ ಕಲಾಕೃತಿ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಈ ತಿಂಗಳ ವಿಶೇಷಗಳಿಗೆ ನ್ಯಾಯಾಲಯಗಳೇ ಕರ್ತೃ. ಅವುಗಳ ಘನತೆ ಹೆಚ್ಚಾಗಿದೆಯೋ ಇಲ್ಲವೋ ತಿಳಿಯದು, ಆದರೆ ಅದರ ಅಧಿಕಾರದ ವ್ಯಾಪ್ತಿ ಹೆಚ್ಚಿರುವುದಂತೂ ನಿಜ. ಸರ್ಕಾರದ ಜಾಹಿರಾತುಗಳಲ್ಲಿ ಸರ್ವೋಚ್ಚ ನ್ಯಾಯಾಲಯದ ಪ್ರಧಾನ ನ್ಯಾಯಮೂರ್ತಿಯಲ್ಲದೆ ಬೇರಿನ್ನಾರ ಭಾವಚಿತ್ರಗಳಿರಬಹುದೆಂಬುದನ್ನು ಸಹ ನ್ಯಾಯಾಲಯವು ತೀರ್ಮಾನಿಸುತ್ತದೆ. ಅದಕ್ಕಿಂತಲೂ ಮುಖ್ಯವಾಗಿ ಸಲ್ಮಾನ್ ಖಾನ್ ಮತ್ತು ಜಯಲಲಿತಾ ಬಗೆಗಿನ ತೀರ್ಪುಗಳು ನ್ಯಾಯಾಲಯಗಳನ್ನು ಪ್ರಚಂಡ ಬೆಳಕಿನಲ್ಲಿ ತಂದು ನಿಲ್ಲಿಸಿವೆ. ಈ ಇಬ್ಬರೂ ಸಿನಿಮಾ ತಾರೆಯರು. ಜೊತೆಗೆ ಜಯಮ್ಮನವರು ಮಾಜಿ ಮುಖ್ಯಮಂತ್ರಿ. ಸಿನಿಮಾ ತಯಾರಕರು ಅವರ ಮೇಲೆ ೫೦೦ ಕೋಟಿ ರೂಪಾಯಿಗಳನ್ನು ತೊಡಗಿಸಿಲ್ಲ, ಆದರೆ ಸಲ್ಮಾನ್ ಮೇಲೆ ತೊಡಗಿಸಿದ್ದಾರೆ. ಆದ್ದರಿಂದ ಇವರಿಬ್ಬರು “ಮಾಜಿ ಅಪರಾಧಿ”ಗಳಲ್ಲಿ ಯಾರು ಶ್ರೇಷ್ಠರೆಂದು ತೀರ್ಮಾನಿಸುವುದು ಕಷ್ಟ. ಇಬ್ಬರೂ ಅತಿಸುಲಭವಾಗಿ ‘ಬೇಲ್’ ಪಡೆಯಲು ಸಮರ್ಥರೆಂದು ಈಗ ಸಾಬೀತಾಗಿದೆ. ಬೇಲ್ ಪಡೆಯುವುದು ಹೇಗೆ, ಅದಕ್ಕೆ ಹಣ ತರುವುದೆಲ್ಲಿಂದ, ಎಂಬ ಪ್ರಶ್ನೆಗಳಿಗೆ ಉತ್ತರ ತಿಳಿಯದ ಲಕ್ಷ ಮಂದಿ ಯುವಕರು–ಯುವತಿಯರು ನಮ್ಮ ಜೈಲುಗಳಲ್ಲಿ ಹತ್ತು ವರ್ಷಕ್ಕಿಂತಲೂ ಹೆಚ್ಚು ಕಾಲ ಅಲ್ಲೇ ತೊಳಲುತ್ತಿದ್ದಾರೆ. ಆದರೆ ಸಲ್ಮಾನ್ ೧೦ ನಿಮಿಷಗಳಲ್ಲಿ ಬೇಲ್ ಪಡೆದಿದ್ದಾನೆ. ಬೆಳಗಿನ ವೇಳೆ ಪಾರ್ಕೊಂದರಲ್ಲಿ ಅಡ್ಡಾಡಿ ವ್ಯಾಯಾಮ ಮಾಡುವ ಒಂದು ತಂಡದ ವ್ಯಕ್ತಿ ಸಲ್ಮಾನ್ ಬೇಲ್ ಪಡೆದ ನಂತರ ಹೇಳಿದ್ದಿದು : “ಅವನಿಗೇನು ಬಿಡಿ. ನಾವು ಅಂಗಡಿಗೆ ಹೋಗಿ ಬೇಲ್‌ಪುರಿ ಕೊಳ್ಳುವಂತೆ ಅವನು ಬೇಲ್ ಪಡೆದುಕೊಂಡು ಬಿಡುತ್ತಾನೆ.” ಇನ್ನೂ ಕೆಳಗಿನ ಕೋರ್ಟು ತೀರ್ಪನ್ನು ಓದಿ ಮುಗಿಸುವ ಮೊದಲೇ ಸಲ್ಮಾನ್‌ನ ವಕೀಲ ಹೈಕೋರ್ಟಿನಲ್ಲಿ ಬೇಲ್‌ಗೆ ಅರ್ಜಿ ಸಲ್ಲಿಸಬಲ್ಲ. ಹೈಕೋರ್ಟ್ ತೀರ್ಪು ನೀಡುವ ದಿನ ಆಗಲೇ ಅವನ ಇನ್ನೊಬ್ಬ ವಕೀಲ ಸುಪ್ರೀಂ ಕೋರ್ಟಿನಲ್ಲಿ ಬೇಲ್‌ಗೆ ಅರ್ಜಿ ಸಲ್ಲಿಸಲು ಸಿದ್ಧನಾಗಿ ಕುಳಿತಿರುತ್ತಾರೆ. ಕಣ್ಣಿಗೆ ಬಟ್ಟೆ ಕಟ್ಟಿಕೊಂಡ ನ್ಯಾಯದೇವತೆಗೆ ಎಲ್ಲರೂ ಸಮಾನರು ಮತ್ತು ನ್ಯಾಯಾಲಯವು ಸ್ವತಂತ್ರ ಮತ್ತು ಸ್ವಾಯತ್ತ ವಿಭಾಗ. ಹಾಗೆಂದು ಡಂಗುರ ಕೇಳಿಸುತ್ತಿರುತ್ತದೆ. ಡಂಗೂರ ಬರಿ ಢಮಢಮ, ಅದರಲ್ಲಿ ಸತ್ವವಿಲ್ಲವೆಂದು ಅನಿಸಿಬಿಡುತ್ತದೆ. ಕಾರಿನ ಚಕ್ರಕ್ಕೆ ಒಂದು ನಾಯಿಮರಿಯೂ ಸಿಕ್ಕಿ ಸಾಯಬಹುದು, ಅದೇಕೆ ಕಾರಿಗೆ ಅಡ್ಡ ಬರಬೇಕಿತ್ತು, ಎನ್ನುತ್ತಾನೆ ಯಾವನೋ ಕಲ್ಕತ್ತಾ ಬಾಬು. ಅವನು ಸಿನಿಮಾ ಸಂಗೀತಗಾರನಂತೆ. ಮುಂಬೈನ ಫುಟ್‌ಪಾತ್ ಇರುವುದು ನಿರ್ಗತಿಕರು ಮಲಗುವುದಕ್ಕಲ್ಲ, ಆ ಮೂರ್ಖ ಅಲ್ಲಿ ಮಲಗಿ ಸಲ್ಮಾನ್ ಮಹಾರಾಜನ ಕಾರಿನ ಚಕ್ರದಡಿ ಏಕೆ ಬರಬೇಕಾಗಿತ್ತು, ಎನ್ನುತ್ತಾನೆ ಈ ಸಲ್ಮಾನ್ ಭೃತ್ಯ. ಇದು ನಮ್ಮ ದೇಶದ ನೈತಿಕತೆ, ಮೌಲ್ಯ ಮತ್ತು ಸಂಸ್ಕೃತಿ. ಕೋಟಿಗಟ್ಟಲೆ ಖರ್ಚು ಮಾಡಿ ತನಗೆ ಬೇಕಾದ ತೀರ್ಪು ಪಡೆದುಕೊಳ್ಳಲು ತಾನು ಸಮರ್ಥನೆಂದು ಸಲ್ಮಾನ್ ಸವಾಲು ಹಾಕುತ್ತಿದ್ದಾನೆ. ನಾಲ್ಕು ದಿನವೋ ನಾಲ್ಕು ವರ್ಷವೋ ಅವನು ಜೈಲಿನಲ್ಲಿದ್ದರೆ ಪರಿತಪಿಸಬೇಕಾದ್ದೇನಿದೆ ? ಆದರೆ ಕೊಲೆ ಮಾಡಿದ ಆರೋಪಕ್ಕೆ ಗುರಿಯಾಗಿರುವ ಸಲ್ಮಾನ್ ಬೇಲ್ ಪಡೆದರೆ ಮುಂಬೈನ ರಸ್ತೆಗಳಲ್ಲಿ ಸಾವಿರಾರು ಜನ ಕುಣಿದು ಆನಂದಿಸುತ್ತಾರೆ. ಸಲ್ಮಾನ್ ಸಾಯಿಸಿದ ವ್ಯಕ್ತಿ ಅವರ ನೆನಪಿಗೆ ಬರುವುದಿಲ್ಲ. ಇದೇ ಏನು ‘ಮಹಾನ್ ಭಾರತ ದೇಶ ?’

ಜಯಮ್ಮನವರ ಕೀರ್ತಿ ಮತ್ತು ಪ್ರಭಾವ ಇದನ್ನು ಮೀರಿಸುತ್ತದೆ. ಇಂಥದೇ ತೀರ್ಪು ಬರಲೆಂದು ತಮಿಳುನಾಡಿನ ಅಮ್ಮಾ ಭಕ್ತರು ಯಜ್ಞ ಮಾಡಿದರಂತೆ, ಆ ಯಜ್ಞದ ಶಾಖವು ಬೆಂಗಳೂರಿನ ನ್ಯಾಯಾಲಯದವರೆಗೆ ಹಬ್ಬಿತು. ಸ್ವತಂತ್ರ, ವಸ್ತುನಿಷ್ಠ ನ್ಯಾಯಾಲಯವು “ಆಕೆ ಅಷ್ಟೇನೂ ಭ್ರಷ್ಟಳಲ್ಲ, ಏನೋ ಕಿಂಚಿತ್ ಭ್ರಷ್ಟತ್ವವನ್ನು ಪ್ರದರ್ಶಿಸಿರಬಹುದು ಆದರೆ ಅದು

*(೭ನೇ ಪುಟಕ್ಕೆ )*






ತಿಂಗಳ ಪತ್ರಿಕೆ

**ಹೊಸತು**

ನಿಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೬ ಸಂಚಿಕೆ-೧೧ ಜೂನ್ ೨೦೧೫

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೯೭ ಮತ್ತು ೧೯೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೬೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**


೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
hosathu.nkp@gmail.com
URL : www.navakarnataka.com
http : //navakarnataka.blogspot.in
http : //hosathumonthly.blogspot.in


# ಸಂಪಾದಕೀಯ

## ವಾರ್ಷಿಕೋತ್ಸವಗಳು

ಕರ್ನಾಟಕದಲ್ಲಿ ಕಾಂಗ್ರೆಸ್ ಸರ್ಕಾರಕ್ಕೆ ಎರಡು ವರ್ಷ ಮತ್ತು ಕೇಂದ್ರದಲ್ಲಿ ಮೋದಿ – ಭಾಜಪ ಸರ್ಕಾರಕ್ಕೆ ಒಂದು ವರ್ಷ. ಎರಡೂ ಸಂಭ್ರಮದ ಆಚರಣೆಯಲ್ಲಿ ತೊಡಗಿವೆ. ಅಧಿಕಾರ ನಡೆಸುತ್ತಿರುವವರ ಸಂಭ್ರಮಕ್ಕೆ ಸಮನಾದ ಸಂಭ್ರಮವು ರಾಜ್ಯ ಮತ್ತು ದೇಶಗಳಲ್ಲಿ ಎಲ್ಲೂ ಕಾಣುತ್ತಿಲ್ಲ. ಅದು ಸಹಜವಾದದ್ದೇ, ಏಕೆಂದರೆ ಆಡಳಿತಗಾರರ ತೃಪ್ತಿಯು ಆಳ್ವಿಕೆಗೊಳಪಟ್ಟವರಿಗೆ ನಂಜು ಎನಿಸಿದೆ. "ನಂಜು" ಎಂಬ ಪದಕ್ಕೆ ವಿಷ, ದ್ವೇಷ, ಮತ್ತು ಸೇಡು ಎಂಬ ಮೂರು ಅರ್ಥಗಳನ್ನು 'ಕನ್ನಡ ರತ್ನಕೋಶವು' ದಾಖಲಿಸಿದೆ. ಇವುಗಳ ಪ್ರಮಾಣದಲ್ಲಿ ವ್ಯತ್ಯಾಸವಿರಬಹುದು, ಆದರೆ ಸಾಮಗ್ರಿಯಲ್ಲಿ ಅಷ್ಟೊಂದು ವ್ಯತ್ಯಾಸವಿಲ್ಲ. ತಮ್ಮ ಸರ್ಕಾರದ ಹುಟ್ಟುಹಬ್ಬವನ್ನು ಮೋದಿ ವಿದೇಶದಲ್ಲಿ ಆಚರಿಸಿಕೊಂಡರು ಮತ್ತು ನಮ್ಮ ರಾಜ್ಯದ ಕಾಂಗ್ರೆಸ್ ಸರ್ಕಾರವು ದಾವಣಗೆರೆಯ ಸ್ವಾಗತಾರ್ಹ ಮಳೆಯಲ್ಲಿ ತೋಯಿಸಿಕೊಂಡು ಎರಡನೆಯ ವರ್ಷವನ್ನು ಪೂರೈಸಿತು. ಮಳೆಯಿಂದ ರಕ್ಷಣೆ ಪಡೆಯಲು ಜನ ಕುರ್ಚಿಗಳನ್ನು ಛತ್ರಿಗಳನ್ನಾಗಿ ಬದಲಿಸಿಕೊಂಡು ಓಡಿದರಂತೆ. ಅದು ಕಾಂಗ್ರೆಸ್ ಪಕ್ಷದ ಆಂತರಿಕ ಅವ್ಯವಸ್ಥೆಯನ್ನು ಸಂಕೇತಿಸುತ್ತದೆ. ಕುರ್ಚಿಗಳಿಗಾಗಿ ಹೊಡೆದಾಟ ಮುಸುಕಿನಲ್ಲಿ ಇಡೀ ಎರಡು ವರ್ಷ ನಡೆಯುತ್ತಾ ಬಂದಿದೆ. ದೇಶಪಾಂಡೆಯಂಥವರು ಫಲವತ್ತಾದ ಭೂಮಿ ಸಿಕ್ಕಿಲ್ಲವೆಂದು ತಮಗೆ ವಹಿಸಿರುವ ವಿಭಾಗವನ್ನು ಅಸಡ್ಡೆಯಿಂದ ಕಾಣುತ್ತಾರೆ. ಹೀಗಾಗಿ ಆಡಳಿತವು ನಿರೀಕ್ಷಿತ ಮಟ್ಟಕ್ಕೇರಿಲ್ಲ. ಯೋಜನೆಗಳು ಹತ್ತಾರು ಪ್ರಕಟಗೊಂಡಿವೆ, ಆದರೆ ಫಲಾನುಭವಿಗಳು ಅವುಗಳಿಂದ ಎಷ್ಟು ಸಂತಸ ಪಡೆದಿದ್ದಾರೆಂಬುದು ಅನುಮಾನಾಸ್ಪದ. ಅತಿ ಸಾಮಾನ್ಯವಾದ ವಿಷಯಗಳಲ್ಲಿ ಜನರ ಸೌಲಭ್ಯಗಳಿಗೆ ಮೀರಿದಷ್ಟು ಹೊರೆಗಳನ್ನು ಹೇರಲಾಗಿದೆ. ಒಂದು ಚಿಕ್ಕ ಉದಾಹರಣೆ ಇದು: ಪದವಿಪೂರ್ವ ಪರೀಕ್ಷೆಯಲ್ಲಿ ತೇರ್ಗಡೆಯಾದವರು ಬಿ.ಇ. ವ್ಯಾಸಂಗ ಮಾಡಹೋಗಬೇಕಾದರೆ ಕಂಪ್ಯೂಟರ್‌ಗಳನ್ನು ಬಳಸಿ ಅರ್ಜಿ ಸಲ್ಲಿಸಬೇಕು. ಗಣಕಯಂತ್ರ ಇಲ್ಲದವರ ಪಾಡೇನು? ನೂರಾರು ರೂಪಾಯಿ ಖರ್ಚಿನ ಬಾಬ್ತು ಇದು. ಜೊತೆಗೆ ಅಸಹನೀಯವಾದಷ್ಟು ಕಿರುಕುಳ. ಇದನ್ನು ಸಹ ಅರ್ಥ ಮಾಡಿಕೊಳ್ಳದ ಸರ್ಕಾರವು ದೊಡ್ಡ ಸಮಸ್ಯೆಗಳನ್ನು ಬಗೆಹರಿಸೀತೆ? ರಾಜ್ಯದ ಉತ್ಪಾದಕ ಶಕ್ತಿಯನ್ನು ಹೆಚ್ಚಿಸುವ, ದುಡಿಯುವ ಕೈಗಳಿಗೆ ಉದ್ಯೋಗ ಕಲ್ಪಿಸಿಕೊಡುವ, ಯೋಜನೆಗಳೇ ಇಲ್ಲ. ಎರಡು ವರ್ಷಗಳಲ್ಲಿ ಯಾವ ಅಹಿತ ಸಂದರ್ಭಗಳನ್ನು ಮೂಲಭೂತವಾಗಿ ಬದಲಾಯಿಸಲಾಗಿದೆ, ಅಥವಾ ಆ ದಿಸೆಯಲ್ಲಿ ದಿಟ್ಟ ಪ್ರಯತ್ನ ನಡೆದಿದೆ? ನೀರಾವರಿ, ಗೊಬ್ಬರ, ಕಬ್ಬು ಬೆಲೆ, ಬಿತ್ತನೆ ಬೀಜ, ಹಳ್ಳಿಗಳಲ್ಲಿ ರಸ್ತೆ ಮತ್ತು ವಸತಿ ಸೌಕರ್ಯ, ಸರ್ಕಾರಿ ಶಾಲೆಗಳು, ಹೀಗೆ ಯಾವುದನ್ನು ಗಮನಿಸಿದರೂ ಎರಡು ವರ್ಷಗಳಲ್ಲಿ ಎಳ್ಳಷ್ಟು ಸಮರ್ಪಕ ಬೆಳವಣಿಗೆ ಇಲ್ಲ. ಮರಳು ದಂಧೆ, ಅಕ್ರಮ ಭೂಮಿ ಆಕ್ರಮಣ, ಕಚೇರಿಗಳಲ್ಲಿ ಭ್ರಷ್ಟಾಚಾರ, ಅಧಿಕಾರಿಗಳ ಪೊಗರು, ಅಪರಾಧಿಗಳಲ್ಲದೆಯೂ ಕಾರಾಗೃಹಗಳಲ್ಲಿ ನರಳುತ್ತಿರುವವರು, ಸರ್ಕಾರಿ ಆಸ್ಪತ್ರೆಗಳಲ್ಲಿ ಅಸಹ್ಯ ಕಿರುಕುಳ, ದಲಿತರ ಮೇಲಿನ ದೌರ್ಜನ್ಯ, ಮಹಿಳೆಯ ಮೇಲಿನ ಅತ್ಯಾಚಾರ ಇವುಗಳಲ್ಲಿ ಯಾವುದನ್ನು ಸಮರ್ಥವಾಗಿ ನಿಯಂತ್ರಿಸ ಲಾಗಿದೆ? ನಿಯಂತ್ರಿಸುವುದಿರಲಿ, ಆ ಬಗ್ಗೆ ಎರಡು ಹೆಜ್ಜೆ ಇಟ್ಟಿದ್ದು ಕಾಣುತ್ತಿಲ್ಲ. ಇವು ಕೇವಲ ಕಾನೂನು – ಸುವ್ಯವಸ್ಥೆಯ ಪ್ರಶ್ನೆಗಳಲ್ಲ. ಅವಕ್ಕೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಬೇರುಗಳಿವೆ, ಆಯಾಮಗಳಿವೆ. ಎರಡು ವರ್ಷಗಳ ಹಿಂದೆ ಇದ್ದ ಸರ್ಕಾರವು ತನ್ನ "ಸಿದ್ಧಾಂತ"ದ ಕುರುಡು ಪೂಜಾರಿಗಳನ್ನು ಶಿಕ್ಷಣ ಇಲಾಖೆಯಲ್ಲಿ ಹೇರಳವಾಗಿ ತುಂಬಿತ್ತು. ಅಂತಹ ಪ್ರಶ್ನಾರ್ಹ ವ್ಯಕ್ತಿಗಳು ಯಥಾಪ್ರಕಾರ ಮುಂದುವರಿದಿದ್ದಾರೆ, ತಮ್ಮ ಕೈಚಳಕ ತೋರಿಸುತ್ತಿದ್ದಾರೆ. ಮಾನವ ಘನತೆಗೆ ಕುಂದು ತರುವ, ಹಿಂಸೆ ಮತ್ತು ಶೋಷಣೆಗೆ ಹಾದಿ ಮಾಡಿಕೊಡುವ ಮೂಢನಂಬಿಕೆಗಳ ಆಚರಣೆಯ ವಿರುದ್ಧದ ಕಾನೂನು ಈಗಿನ ಸರ್ಕಾರದ ಉಳಿದ ಮೂರು ವರ್ಷಗಳಲ್ಲಿ ಯಾದರೂ ಜಾರಿಗೆ ಬರುತ್ತದೇನೋ ಕಾದುನೋಡಬೇಕು. ನೈತಿಕ ಪೊಲೀಸುಗಿರಿಯ ಉಪಟಳದಿಂದ ಕರಾವಳಿಯ ಜನರಿಗೆ, ವಿಶೇಷವಾಗಿ ಯುವಕ – ಯುವತಿಯರಿಗೆ, ರಕ್ಷಣೆ ನೀಡಲು ಸರ್ಕಾರ ಮುಂದಾಗಲಿಲ್ಲ. ನೈತಿಕತೆಯ ಸೋಗಿನಲ್ಲಿ ಗೂಂಡಾಗಿರಿ ಹೆಚ್ಚುತ್ತಿದೆ, ಅಭಿವ್ಯಕ್ತಿಗೆ ಅಡಚಣೆಗಳನ್ನೊಡ್ಡ ಲಾಗುತ್ತಿದೆ. ನಕ್ಸಲೀಯರನ್ನು ಸಮಾಜಮುಖಿ ಜೀವನಕ್ಕೆ ಆಹ್ವಾನಿಸುತ್ತಲೇ ವಿದ್ಯಾರ್ಥಿ ವಿಠಲ ಮಲೆಕುಡಿಯನ ವಿರುದ್ಧ ಮೊಕದ್ದಮೆ ಹೂಡುವ ಸರ್ಕಾರಕ್ಕೆ ಏನೆನ್ನಬೇಕು? ಮೋದಿಯವರಿಗೆ ೧೦ಕ್ಕೆ ೭ ಅಂಕ ನೀಡುವ ಮಂದಿಯನ್ನು ಅವರು ಸೃಷ್ಟಿಸಿಕೊಂಡಿದ್ದಾರೆ. ಸಿದ್ದರಾಮಯ್ಯನವರಿಗೆ ೩.೫ ಅಂಕ ನೀಡುವ ಮಂದಿ ಎಲ್ಲಿದ್ದಾರೋ ತಿಳಿಯುತ್ತಿಲ್ಲ. ಅವರ ಕೆಲವು ಯೋಜನೆಗಳು ಗಮನಾರ್ಹವಾಗಿವೆ, ಆದರೆ ಅವಷ್ಟೇ ಎರಡು ವರ್ಷದ ಅವಧಿಯ ಆಡಳಿತಕ್ಕೆ ಮೇರುಪ್ರಾಯವಾಗುವುದಿಲ್ಲ. ಕಾಂಗ್ರೆಸ್ ಪಕ್ಷವು ಸಿದ್ಧಾಂತವೊಂದನ್ನು ಗಟ್ಟಿಗೊಳಿಸಿಕೊಳ್ಳುವುದು ಬೇಡ, ಇನ್ನುಳಿದ ಮೂರು ವರ್ಷಗಳಲ್ಲಿ ಕಡೇ ಪಕ್ಷ ಜನರ ವಿವಿಧ ವಿಭಾಗಗಳಿಗೆ ಆಸರೆ ನೀಡುವಂತಹ ಕೆಲವಾದರೂ ಜೀವಂತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಿ.

ಅದಕ್ಕೆ ದೆಹಲಿಯ ಪರವಾನಗಿಗೆ ಕಾಯುವುದು ಬೇಡ, ಅಂಗಲಾಚುವುದೂ ಬೇಡ.

ಏನೂ ಮಾಡದೆಯೂ ಎಲ್ಲವನ್ನೂ ಮಾಡಿಯಾಗಿದೆ ಎಂಬ ಭ್ರಾಂತಿಯನ್ನು ಬಿತ್ತುವುದರಲ್ಲಿ ಭಾರತೀಯ ಜನತಾ ಪಕ್ಷವು ಅಸ್ತಿತ್ವಕ್ಕೆ ಬಂದಾಗಿನಿಂದಲೂ ವಿಶೇಷವಾಗಿ ಯಶಸ್ಸು ಗಳಿಸಿದೆ. ಅದು ಹುಟ್ಟಿದ್ದೇ ಮನೆಯಲ್ಲಿ ಒಡಕುಂಟುಮಾಡಿ ಎಂಬುದನ್ನು ನೆನಪಿನಲ್ಲಿಡಬೇಕು. ಒಡಕಿಗೆ ಮೂಲ ಆರೆಸ್ಸೆಸ್‌ನ ತಥಾಕಥಿತ ಶ್ರೇಷ್ಠತೆ ಮತ್ತು ಯಜಮಾನಿಕೆ. ಮೇ ೧೫-೧೬ರಲ್ಲಿ ಭಾಜಪದ ಅಧ್ಯಕ್ಷ ಅಮಿತ್ ಷಾ ಆರೆಸ್ಸೆಸ್‌ನ ಮುಖ್ಯಸ್ಥ ಮೋಹನ್ ಭಾಗವತ್ ಅವರನ್ನು "ಕೇಂದ್ರದ ಕೇಂದ್ರಾಡಳಿತ ಕಚೇರಿ" ಇರುವ ನಾಗಪುರದಲ್ಲಿ ಭೇಟಿ ಮಾಡಿ ಮಾರ್ಗದರ್ಶಕ ನೀತಿಸೂತ್ರಗಳನ್ನು ಪಡೆದರು. ನ್ಯಾಯಾಲಯಗಳು ಚುರುಕಿನಿಂದ ಕೆಲಸ ಮಾಡಿ ಒಂದು ದಶಕಕ್ಕೂ ಹೆಚ್ಚು ಕಾಲ ನಡೆದ ಎಲ್ಲ ಮೊಕದ್ದಮೆಗಳಲ್ಲೂ ಆಪಾದಿತರನ್ನು ಖುಲಾಸೆ ಮಾಡಿ, "ಸಿ.ಬಿ.ಐ. ಕೋರ್ಟ್" ಎಂದರೆ ಆಳುವ ಪಕ್ಷದ ಆಪಾದಿತರಿಗೆ ಸನ್ಮಾರ್ಗಿಗಳೆಂಬ ಬಿರುದು ನೀಡುವ ನ್ಯಾಯಾಲಯ ಎಂಬ ಹೆಮ್ಮೆಗೆ ತವರಾಗಿದೆ. ಮನಮೋಹನ ಸಿಂಗ್ ಸರ್ಕಾರವು ಈ ಆಪಾದಿತರನ್ನು ತನ್ನ ಅಧಿಕಾರಾವಧಿಯಲ್ಲಿ ತುರ್ತು ವಿಚಾರಣೆಗೆ ಗುರಿಪಡಿಸದಿದ್ದುದು ಇವರಿಗೆಲ್ಲಾ ವರವಾಗಿ ಪರಿಣಮಿಸಿದೆ. ಅಯೋಧ್ಯಾ ಪ್ರಕರಣದ ಆಪಾದಿತರ ವಿರುದ್ಧದ ಮೊಕದ್ದಮೆಗಳು ಇನ್ನೂ ನಿರ್ಣಾಯಕ ಹಂತವನ್ನು ಮುಟ್ಟಿಲ್ಲದಿರುವಾಗ ಇದೇನೂ ಅಚ್ಚರಿ ತರುವ ವಿಷಯವಲ್ಲ. ಮೋದಿ ಸರ್ಕಾರವು ಬೌದ್ಧಿಕತೆಯ ದ್ವೇಷಿ ಮತ್ತು ವಿದೇಶಗಳ ಮೋಹಿ. ಮುಂಬೈನಲ್ಲಿ ಜರುಗಿದ ವಿಜ್ಞಾನ ಸಮ್ಮೇಳನ, ಸ್ಮೃತಿ ಇರಾನಿಯವರ ಅಧೀನದಲ್ಲಿರುವ ಸಂಶೋಧನಾ ಸಂಸ್ಥೆಗಳು, ರಾಜನಾಥ ಸಿಂಗ್ ಬರೆಯಲಪೇಕ್ಷಿಸುವ ಭಾರತದ ಚರಿತ್ರೆ, ಶೈಕ್ಷಣಿಕ ಕ್ಷೇತ್ರದಲ್ಲಿ ಮೊಳಕೆಯೊಡೆಯುತ್ತಿರುವ ಅಧ್ವಾನ, ಇವೆಲ್ಲಾ ಅದರ ಸೂಚಕಗಳು. ದೇಶದ ಅತ್ಯಂತ ಹಿರಿಯ ವಿಜ್ಞಾನಿಯೊಬ್ಬರು ಈಚೆಗೆ ಹೇಳಿದಂತೆ, "ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ಎಂದೂ ವೈಜ್ಞಾನಿಕ ಶಿಸ್ತುಗಳಿಗೆ ಇಷ್ಟು ಬಲವಾದ ಪೆಟ್ಟು ಬಿದ್ದಿರಲಿಲ್ಲ." ನಮ್ಮ ದೇಶವು ಎಲ್ಲದರಲ್ಲೂ ಬಹು ಹಿಂದೆಯೇ ಅಮೋಘ ಸಾಧನೆಗಳನ್ನು ಮಾಡಿದ್ದುದರಿಂದ ನಾವು ನಾಳೆ ಮಾಡಬೇಕಾದ್ದೇನೂ ಇಲ್ಲ, ಕೇವಲ ಪ್ರತಿನಿತ್ಯ ಹಿಂದುಹಿಂದಕ್ಕೆ ವೇಗವಾಗಿ ಹಿನ್ನಡೆಯಬೇಕು! "ಹಿನ್ನಡೆಯಿಂದ ಮುನ್ನಡೆ" ಎಂಬ ಹೊಸಸೂತ್ರ ನಮ್ಮ ದೇಶದ್ದು. ಹಿಂದಿನ ಅದ್ಭುತ ಸಾಧನೆಗಳನ್ನು ನಾವು ಖಂಡಿತ ಹೀಗಳೆಯಕೂಡದು, ಆದರೆ ಅಂದಿನ ವಿಧಾನಗಳನ್ನು ಇಂದಿನ ವಿದ್ಯಾರ್ಥಿಗಳಿಗೆ ಮತ್ತು ಸಂಶೋಧಕರಿಗೆ ಹೇಳಿಕೊಡಲು ಸಾಧ್ಯವಾಗುವುದಿಲ್ಲ. ಇಂದಿನ ಪದ್ಧತಿಯಲ್ಲಿ ಮುನ್ನಡೆಯದೆ ಹಿಂದಿನ ಕಿರೀಟವನ್ನು ಧರಿಸಿ ನಾವು ಶೋಭಿಸಲಾರೆವು. ಹಿಂದಿನ ವೈಜ್ಞಾನಿಕ ಸಾಧನೆಗಳನ್ನು ಶ್ಲಾಘಿಸುತ್ತಾ ಅಂದಿನ ವೈಜ್ಞಾನಿಕ ಮನೋಭಾವ ಮತ್ತು ವಿಧಾನಗಳನ್ನು ಒತ್ತಟ್ಟಿಗಿಡುವುದು ಸರ್ವಥಾ ಸಾಧುವಲ್ಲ. ಚರಕ-ಆರ್ಯಭಟ-ಭಾಸ್ಕರ ಮುಂತಾದವರ ವೈಚಾರಿಕ ನೆಲೆ ನಮ್ಮದಾಗಬೇಕು. ಅದನ್ನು ಗೌಣವಾಗಿಸಿ ಒಂದು ವರ್ಷದ ಅವಧಿಯಲ್ಲಿ ಮೋದಿ ಸರ್ಕಾರವು ಬೌದ್ಧಿಕವಾಗಿ ನಮ್ಮ ದೇಶವನ್ನು ಹಲವು ದಶಕಗಳ ಹಿಂದಕ್ಕೆ ತಳ್ಳಿದೆ. ಆದರೆ ಅದು ಸಾಧನೆ ಎನಿಸಿಕೊಳ್ಳಲು ಯೋಗ್ಯವಲ್ಲ. ೧೯೭೫ರ ಮುಂಚಿನ ಎರಡು-ಮೂರು ವರ್ಷಗಳಲ್ಲಿ ಸಂಜಯ ಗಾಂಧಿ "ಸಂವಿಧಾನೇತರ ಪ್ರಾಧಿಕಾರ" ಎಂಬ ಸ್ಥಾನವನ್ನು ಪಡೆದಿದ್ದರೆ, ೨೦೧೪-೧೫ರ ಅವಧಿಯಲ್ಲಿ ಕೇಂದ್ರ ಸರ್ಕಾರದ ವ್ಯಾಪ್ತಿಯಲ್ಲಿ ಹಲವು ಸಂವಿಧಾನೇತರ ಪ್ರಾಧಿಕಾರಗಳು ಕಾರ್ಯಮಗ್ನವಾಗಿವೆ. ಆದರೆ ಮಾಧ್ಯಮಗಳು ಅದನ್ನು ಹೇಳಲು ತಮ್ಮದೇ ಕಾರಣಗಳಿಂದಾಗಿ ಹಿಂಜರಿಯುತ್ತಿವೆ. ಅಮಿತ್ ಷಾ ಅವರು ಮೋಹನ್ ಭಾಗವತರನ್ನು ಸಂಧಿಸಲು ಸ್ವತಂತ್ರರು, ಆದರೆ ಭಾಗವತರು ಅಧಿಕೃತವಾಗಿಯೋ ಅನಧಿಕೃತವಾಗಿಯೋ ಕೇಂದ್ರ ಸರ್ಕಾರದ ಲಗಾಮನ್ನು ತಮ್ಮ ಕೈಯ್ಯಲ್ಲಿ ಹಿಡಿಯಲು ಸಾಧ್ಯವಾಗುವುದು ಅವರ ಸ್ವಾತಂತ್ರ್ಯದ ಪ್ರಶ್ನೆಯಲ್ಲ; ಅದು ಕೇಂದ್ರ ಸರ್ಕಾರದ ಸಂವಿಧಾನ ಬಾಹಿರ ಕೃತ್ಯ. ಇದನ್ನು ಕೇವಲ ಒಂದು ವರ್ಷದಲ್ಲಿ ಮೋದಿ ಸರ್ಕಾರವು ಸಾಧಿಸಿದೆ, ಆದರೆ ಅದು ಶ್ರೇಯಸ್ಕರವಲ್ಲ. ರಿಸರ್ವ್ ಬ್ಯಾಂಕ್ ಗವರ್ನರರಿಗೆ ಅರ್ಥ ಸಚಿವ ಅರುಣ್ ಜೇಟ್ಲಿ ಪದೇ ಪದೇ ಬೃಹತ್ ಬಂಡವಳಿಗರ ಪರವಾಗಿ ಪರೋಕ್ಷ ನಿರ್ದೇಶನಗಳನ್ನು ನೀಡುತ್ತಿರುತ್ತಾರೆ. ಎಷ್ಟು ಜಾಗ್ರತೆ ರಘುರಾಮ ರಾಜನ್ ನಿರ್ಗಮಿಸುತ್ತಾರೆಂಬುದನ್ನು ಕಾದುನೋಡಲಾಗುತ್ತಿದೆ. ಸ್ವದೇಶಿ ಮತ್ತು ವಿದೇಶಿ ಬಂಡವಾಳದ ರೌದ್ರ ನೃತ್ಯವು ನಮ್ಮ ದೇಶದಲ್ಲಿ ನಡೆಯುತ್ತಿದೆ. ಅದಕ್ಕೆ ಪುರಾವೆಗಳು ಅನಗತ್ಯ. ವಿದೇಶಿ ಬಂಡವಳಿಗರು ಕಾನೂನುರೀತ್ಯಾ ಕೊಡಬೇಕಾದ ತೆರಿಗೆಯನ್ನು ಕೊಡಲು ಒತ್ತಾಯಿಸಿದರೆ ವಿದೇಶಿ ಬಂಡವಾಳದ ಹರಿವು ಸ್ಥಗಿತಗೊಳ್ಳುತ್ತದೆಯೆಂಬ ಆತಂಕ ನಮ್ಮ ವಿತ್ತ ಮಂತ್ರಿಯದು. ಇಂತಹ ನಿಲುವೊಂದು ಸಾಧ್ಯವೆಂದು ನಂಬುವುದೇ ಕಷ್ಟ. ಪಾರ್ಲಿಮೆಂಟಿನಲ್ಲಿ ಮೋದಿಯವರ ಕಾರ್ಯವೈಖರಿಯನ್ನು ಟೀಕಿಸಿದರೆ ಅಧ್ಯಕ್ಷೆ ಸುಮಿತ್ರಾ ಮಹಾಜನ್ ಮುನಿಸಿಕೊಂಡು ಅದನ್ನು ಕಡತದಿಂದ ಕಿತ್ತುಹಾಕುತ್ತಾರೆ. ಪ್ರಜಾಪ್ರಭುತ್ವದ ಹಿನ್ನಡೆಗೆ ಇದೊಂದು ದೃಷ್ಟಾಂತ. ಭೂಸ್ವಾಧೀನ ತಂತ್ರದ ಶಾಸನದ ಬಗ್ಗೆ ಹೇಳುವುದೇ ಬೇಡ. ಅಷ್ಟು ಘನಘೋರವಾಗಿದೆ ಅದು. "ಭಾರತದಲ್ಲಿ ಮಾಡಿ" ಎನ್ನುವ ಘೋಷಣೆಗಿಂತಲೂ "ಭಾರತದಲ್ಲಿ ಮಾಡಿದ್ದು, ಭಾರತೀಯರಿಗಾಗಿ ಮಾಡಿದ್ದು" ಎಂಬ ಘೋಷಣೆಗಳು ಉಪಯುಕ್ತ ಮತ್ತು ಪ್ರಸ್ತುತ. ಹೊರದೇಶದವರಿಗಾಗಿ ನಾವು ಮಾಡುತ್ತೇವೆ ಎಂದರೆ ವಿದೇಶಿ ಕಂಪನಿಗಳು ನಮ್ಮಿಂದ ಮಾಡಿಸುತ್ತವೆ, ಉತ್ಪನ್ನಗಳನ್ನು ಹೊರದೇಶಗಳಲ್ಲಿ ಮಾರುತ್ತವೆ. ಇಲ್ಲಿ ದುಡಿಮೆಯ ಬೆಲೆ ಅಗ್ಗ ಎಂಬ ಕಾರಣದಿಂದ ಆ ಕಂಪನಿಗಳು ಧಾವಿಸುತ್ತವೆ. ಅವು ಭಾರತದಲ್ಲಿ ಏನೇ ಮಾಡಿಸಲಿ, ಅವೆಲ್ಲಾ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧೆಗೆ ಇಳಿಯಬೇಕು. ಲಾಭ ಮತ್ತು ನಷ್ಟ ಕಂಪನಿಗಳಿಗೆ,



ತಿಂಗಳ ಪತ್ರಿಕೆ

**ಹೊಸತು**

ನಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





■ **ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

■ **ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ - ೫೮೫ ೧೦೨
✆ : ೦೮೪೭೨-೨೨೪೩೦೨

ನಮಗಲ್ಲ. ಆದ್ದರಿಂದ ಭಾರತದಲ್ಲಿ ಭಾರತೀಯರು ಭಾರತೀಯರಿಗಾಗಿ ಉತ್ಪಾದನೆ ಮಾಡಬೇಕು. ಸ್ವದೇಶಿ, ರಾಷ್ಟ್ರೀಯತೆ, ದೇಶಪ್ರೇಮ, ಇವಕ್ಕೆಲ್ಲಾ ಅರ್ಥ ಬರುವುದು ಆಗ ಮಾತ್ರ. ಮೋದಿಯವರ "ಸಾಧನೆ"ಗಳನ್ನು ಫ್ರಾನ್ಸ್, ಅಮೆರಿಕಾ, ಚೀಣಾ ಗುರುತಿಸುತ್ತವೆ; ನಾವು ಅಪಸಾಧನೆಗಳನ್ನು ಮಾತ್ರ ಗುರುತಿಸುವ ಹೀನಸ್ಥಿತಿಗೆ ತಳ್ಳಲ್ಪಟ್ಟಿದ್ದೇವೆ. ಮೋದಿಯವರಿಗೆ ೧೦ಕ್ಕೆ ೯ ಕೊಡಬಹುದು, ಸಾಧನೆಗಳಿಗಲ್ಲ ಬದಲಾಗಿ ಅಪಸಾಧನೆಗಳಿಗೆ; ವಿದೇಶಿ ಬಂಡವಳಿಗರು ಅವರ "ಸಾಧನೆ"ಗಳಿಗೆ ೧೦ಕ್ಕೆ ೬ ಕೊಟ್ಟರೆ ಅದರಲ್ಲಿ ಆಶ್ಚರ್ಯ ಇಲ್ಲ, ಅದರಿಂದ ಕುತ್ತು ಕಟ್ಟಿಟ್ಟ ಬುತ್ತಿ. ಮೋದಿಯವರ ಸರ್ಕಾರವು ಮುಂದಿನ ನಾಲ್ಕು ವರ್ಷಗಳಲ್ಲಿ ಯಾವ ಜಾಡನ್ನು ಹಿಡಿಯಬೇಕೆಂಬುದನ್ನು ದೇಶದ ದುಡಿಯುವ ಜನ ತೀರ್ಮಾನಿಸಬೇಕು.

## ಮಕ್ಕಳ ದುಡಿಮೆಗೆ ಹಸಿರು ನಿಶಾನೆ

**ಮೋ**ದಿ ಸರಕಾರ ಅಧಿಕಾರಕ್ಕೆ ಬಂದಾಗಿನಿಂದ ಬಂಡವಾಳಶಾಹಿ ವರ್ಗಗಳಿಗೆ, ಅಂದರೆ ಕಾರ್ಪೊರೇಟ್ ವಲಯಕ್ಕೆ ಅನುಕೂಲವಾಗುವಂಥ ಕ್ರಮಗಳನ್ನೇ ಕೈಗೊಳ್ಳುವುದಕ್ಕೆ ಮುಂದಾಗುತ್ತಿದೆ. ಹೇಳಿಕೇಳಿ ಭಾಜಪ ಅಧಿಕವಾಗಿ ವ್ಯಾಪಾರಸ್ಥರನ್ನು, ಉದ್ದಿಮೆದಾರರನ್ನು ಒಳಗೊಂಡಿರುವ ಪಕ್ಷ. ಕಾಂಗ್ರೆಸ್ ಬಂಡವಾಳಶಾಹಿ, ಜಮೀನುದಾರರ ಪಕ್ಷವಾದರೆ ಭಾಜಪ ಅದಕ್ಕಿಂತ ಒಂದು ಹೆಜ್ಜೆ ಮುಂದೆ ಇದೆ. ಜನಪರ ನೀತಿಗಿಂತ ಈ ಪಕ್ಷಗಳಿಗೆ ತಮ್ಮನ್ನು ಅಧಿಕಾರಕ್ಕೆ ತಂದ ವರ್ಗವನ್ನು ತೃಪ್ತಿಗೊಳಿಸುವುದೇ ಮುಖ್ಯವಾಗುತ್ತದೆ. ಮೋದಿ ಸರಕಾರ ಅಧಿಕಾರಕ್ಕೇರಿದ್ದು ಯಾರ ಬೆಂಬಲದಿಂದ ಎನ್ನುವುದು ಎಲ್ಲರಿಗೂ ತಿಳಿದಿರುವ ವಿಷಯ. ಈಗ ಮೋದಿ ಸರಕಾರಕ್ಕೆ ಋಣ ತೀರಿಸುವ ಕಾಲ ಬಂದಿದೆ. ಅದಕ್ಕೇ ಅದು ಇರುವ ಕಾನೂನುಗಳನ್ನು ಕಾರ್ಪೊರೇಟ್ ವಲಯಕ್ಕೆ ಅನುವಾಗುವಂತೆ ತಿದ್ದುಪಡಿ ಮಾಡಲು ಹೊರಟಿದೆ. ರೈತರಿಗೆ ಮಾರಕವಾಗುವ ಭೂಸ್ವಾಧೀನ ತಿದ್ದುಪಡಿ, ಕಾರ್ಮಿಕ ಕಾಯಿದೆಗಳಿಗೆ ತರುತ್ತಿರುವ ತಿದ್ದುಪಡಿ, ಮುಂತಾದವು ಅದಕ್ಕೆ ಉದಾಹರಣೆ.

ಉತ್ತಮ ಆಡಳಿತದ ಭರವಸೆ ನೀಡಿ ಅಧಿಕಾರಕ್ಕೆ ಬಂದಿರುವ ಭಾಜಪ ಸರಕಾರ ಇರುವ ಕಾನೂನುಗಳನ್ನು ಸಮರ್ಪಕವಾಗಿ ಜಾರಿಗೆ ತರುವ ಬದಲು, ಅವನ್ನು ಕಾರ್ಪೊರೇಟ್ ವಲಯಕ್ಕೆ ಹೆಚ್ಚು ಉಪಯೋಗವಾಗುವಂತೆ ತಿದ್ದಲು ಹೊರಟಿದೆ. ಮೊದಲೇ ನಮ್ಮ ದೇಶದಲ್ಲಿ ಕಾನೂನು ಉಲ್ಲಂಘನೆಯ ಪರಿಪಾಠ ಎಂಥದ್ದು ಎಂಬುದು ತಿಳಿದಿದೆ. ಕಾನೂನು ಇರುವುದೇ ಮುರಿಯುವುದಕ್ಕೆ ಎನ್ನುವ ಮನೋಭಾವ ಬಲವಾಗಿರುವ ಈ ದೇಶದಲ್ಲಿ ಕಾನೂನು ಮಾಡುವವರೇ ಅದನ್ನು ಉಲ್ಲಂಘಿಸುವುದರಲ್ಲಿ ನಿರತರಾಗಿರುತ್ತಾರೆ. ಇದ್ದಾಗ ಕೋಟಿಗಟ್ಟಲೆ ಹಣ ಮಾಡುವುದೇ ನಮ್ಮ ಶಾಸಕರ ವೃತ್ತಿಯಾಗುತ್ತಿದೆ. ಹಾಗಿರುವಾಗ ಇತರರು ಯಾರಿಗೇನು ಕಮ್ಮಿ. ಇದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ.

ಇಷ್ಟೆಲ್ಲ ಪೀಠಿಕೆ ಏಕೆಂದರೆ ಕೇಂದ್ರ ಸರಕಾರ ಈಗ ಹದಿನಾಲ್ಕು ವರ್ಷಗಳಿಗಿಂತ ಕಡಿಮೆ ವಯಸ್ಸಿನ ಮಕ್ಕಳ ದುಡಿಮೆಯನ್ನು ಸಂಪೂರ್ಣವಾಗಿ ನಿಷೇಧಿಸುವ ಬಾಲಕಾರ್ಮಿಕ ಕಾಯಿದೆಗೆ ತಿದ್ದುಪಡಿ ತರಲು ಹೊರಟಿದೆ. ಈಗಿರುವ ಕಾಯಿದೆ ಅನ್ವಯ ಹಾನಿಕಾರಕ ಅಥವಾ ಅಪಾಯಕಾರಿ ಕ್ಷೇತ್ರಗಳಲ್ಲಿ ಮಾತ್ರ ಮಕ್ಕಳ ದುಡಿಮೆಗೆ ನಿಷೇಧವಿದೆ. ಬಹಳ ಬುದ್ಧಿವಂತಿಕೆಯಿಂದ ಕೇಂದ್ರ ಸಚಿವ ಸಂಪುಟ ಎಲ್ಲ ಉದ್ಯೋಗಗಳಲ್ಲೂ ಮಕ್ಕಳ ದುಡಿಮೆಗೆ ನಿಷೇಧ ವಿಧಿಸಲು ತೀರ್ಮಾನಿಸಿದೆ. ಇದು ಸ್ವಾಗತಾರ್ಹವಾದ್ದೆ. ಆದರೆ ಅದಕ್ಕೆ ನೀಡಿರುವ ವಿನಾಯಿತಿಗಳು ಮಾತ್ರ ಆ ಉದ್ದೇಶಕ್ಕೆ ಮಾರಕವಾಗಿದೆ. ಕುಟುಂಬದ ಉದ್ಯಮಗಳಲ್ಲಿ, ಮನರಂಜನಾ ಕ್ಷೇತ್ರದಲ್ಲಿ, ಕ್ರೀಡಾ ಕ್ಷೇತ್ರದಲ್ಲಿ ಶಾಲೆಬಿಟ್ಟನಂತರ, ರಜಾದಿನಗಳಲ್ಲಿ ಮಕ್ಕಳ ದುಡಿಮೆಗೆ ಅವಕಾಶವಿರುತ್ತದೆ ಎನ್ನುವುದೇ ತಿದ್ದುಪಡಿ. ಅಪಾಯ ನಿಜವಾಗಿ ಇರುವುದು ಇಲ್ಲಿಯೆ. ಇದು ಒಂದು ರೀತಿಯಲ್ಲಿ ಮಕ್ಕಳ ದುಡಿಮೆಯನ್ನು ಕಾನೂನುಬದ್ಧವಾಗಿಸುವ ಏರ್ಪಾಟಾಗುತ್ತದೆ. ಈಗಲೇ ೧೯೮೬ರ ಬಾಲ ಕಾರ್ಮಿಕ ಕಾಯಿದೆಯನ್ನು ಉಲ್ಲಂಘಿಸಿ ಮಕ್ಕಳನ್ನು ದುಡಿಮೆಗೆ ಅಟ್ಟುವುದನ್ನು ನಾವು ನೋಡಿದ್ದೇವೆ. ನಿಜ, ಬಡಜನರು ವಿಧಿಯಿಲ್ಲದೆ ಮಕ್ಕಳನ್ನು ದುಡಿಮೆಗೆ ಉಪಯೋಗಿಸಿಕೊಳ್ಳುತ್ತಾರೆ. ಕೃಷಿ ಕ್ಷೇತ್ರದಲ್ಲಿ ನಾನಾಬಗೆಯ ಕಸಬುಗಳಲ್ಲಿ, ಮನೆಗೆಲಸದಲ್ಲಿ ಮಕ್ಕಳು ದುಡಿಮೆಗೆ ಒಳಗಾಗುತ್ತಿದ್ದಾರೆ. ಈಗಿರುವ ಕಾನೂನನ್ನು ಬಲಪಡಿಸಿ ಇದನ್ನು ತಡೆದು ಬೇರೆ ಅವಕಾಶ ಕಲ್ಪಿಸುವ ಬದಲಾಗಿ ಸರಕಾರ ಪರವಾನಗಿ ನೀಡಲು ಹೊರಟಿದೆ. ಸರಕಾರ ತರಲು ಬಯಸಿರುವ ಈ ತಿದ್ದುಪಡಿ ಈಗಾಗಲೇ ಸಾಕಷ್ಟು ವಿವಾದ ಸೃಷ್ಟಿಸಿದೆ. ಮಕ್ಕಳ ತಜ್ಞರು, ಮಕ್ಕಳ ಹಕ್ಕುಗಳನ್ನು ಪ್ರತಿಪಾದಿಸುವ ಕಾರ್ಯಕರ್ತರು ಇದನ್ನು ವಿರೋಧಿಸಿದ್ದಾರೆ.

ಕುಟುಂಬದ ಉದ್ಯಮಗಳಲ್ಲಿ ಮಾತ್ರ ಮಕ್ಕಳ ದುಡಿಮೆಗೆ ಅವಕಾಶವಿರುತ್ತದೆ, ಶಾಲಾಶಿಕ್ಷಣಕ್ಕೆ ಬಾಧಕವಾಗದಂತೆ, ಎನ್ನುವುದನ್ನು ದುರುಪಯೋಗಪಡಿಸಿಕೊಳ್ಳುವುದನ್ನು ತಡೆಯುವವರು ಯಾರು? ಈಗಿರುವ ಕಾನೂನೇ ಸರಿಯಾಗಿ, ಸಮರ್ಪಕವಾಗಿ ಕಾರ್ಯಗತವಾಗುತ್ತಿಲ್ಲ. ಹಾಗಿರುವಾಗ ಸರಕಾರ ನೀಡುವ ರಿಯಾಯಿತಿಯ ಪಾಡೇನು. ಈಗಲೇ ಬೇಕಾದಷ್ಟು ಉದ್ಯಮಗಳಲ್ಲಿ ಬಾಲ ಕಾರ್ಮಿಕರನ್ನು ದುಡಿಸಿಕೊಳ್ಳಲಾಗುತ್ತಿದೆ. ಪ್ರಮುಖವಾಗಿ ಇದನ್ನು ಅಸಂಘಟಿತ ಉದ್ಯಮಗಳಲ್ಲಿ ಕಾಣಬಹುದು. ಉದಾಹರಣೆಗೆ ಬೀಡಿ ಕೈಗಾರಿಕೆ, ಪಟಾಕಿ ತಯಾರಿಕೆ, ಉಡುಪು ತಯಾರಿಕೆ ಮುಂತಾದ ಉದ್ಯಮಗಳಲ್ಲಿ, ಮನೆಗೆಲಸ, ಕಟ್ಟಡ ನಿರ್ಮಾಣ, ಕೃಷಿ ಇವುಗಳಲ್ಲಿ ಮಕ್ಕಳ ದುಡಿಮೆ ಅವ್ಯಾಹತವಾಗಿ ನಡೆದಿದೆ. ಇದು ಸರಕಾರಕ್ಕೂ ಗೊತ್ತು, ಸಾರ್ವಜನಿಕರಿಗೂ ಗೊತ್ತು. ಹಾಗಿರುವಾಗ ಸರಕಾರ ಉದ್ದೇಶಿಸಿರುವ ತಿದ್ದುಪಡಿ ತೂಕಡಿಸುವವನಿಗೆ ಹಾಸಿಗೆ ಹಾಸಿದಂತಾಗುತ್ತದೆ. ಕಡ್ಡಾಯ ಶಿಕ್ಷಣ, ಶಾಲೆಗಳಲ್ಲಿ ಮಧ್ಯಾಹ್ನದ ಊಟ ಮೊದಲಾದವು ಇದ್ದರೂ ಶಾಲೆ ಸೇರುವ ಮಕ್ಕಳ ಸಂಖ್ಯೆ ಕುಸಿಯುತ್ತಿದೆ. ೫ರಿಂದ ೧೪ ವಯಸ್ಸಿನ ದುಡಿಯುವ ಮಕ್ಕಳ ಪ್ರಮಾಣ ಹಿಂದೆ ೧.೨೬ ಕೋಟಿ ಇದ್ದದ್ದು ೨೦೧೧ರ ವೇಳೆಗೆ ೪೦.೫೩ ಲಕ್ಷಕ್ಕೆ ಇಳಿದಿದೆ. ಜನಗಣತಿ ಅಂಕಿ–ಅಂಶಗಳ ಪ್ರಕಾರ ಬಾಲಕಾರ್ಮಿಕ ಪದ್ಧತಿ ನಿರ್ಮೂಲನವಾಗುವುದು ಬಡಜನರ ಆರ್ಥಿಕ ಸ್ಥಿತಿ ಸುಧಾರಣೆಯಾದಾಗ ಮಾತ್ರ. ಅದಕ್ಕೆ ಬೇಕಾದ ಕ್ರಮ ಕೈಗೊಳ್ಳುವ ಬದಲು ಸರಕಾರ ಬಾಲಕಾರ್ಮಿಕ ಪದ್ಧತಿಯನ್ನು ಊರ್ಜಿತಗೊಳಿಸಲು ಹೊರಟಿದೆ, ಮಕ್ಕಳ ಹಕ್ಕನ್ನು ಸಂಪೂರ್ಣವಾಗಿ ಕಸಿದುಕೊಳ್ಳಲು ನೋಡುತ್ತಿದೆ.

ಮನರಂಜನೆ, ಜಾಹೀರಾತು ಉದ್ಯಮಗಳಲ್ಲಿ ಮಕ್ಕಳನ್ನು ಬಳಸಿಕೊಳ್ಳುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಟೆಲಿವಿಷನ್ ಬಂದಮೇಲೆ ಇದು ವಿಪರೀತವಾಗಿ ಬೆಳೆದಿದೆ. ಹೆಚ್ಚಾಗಿ ಶ್ರೀಮಂತರು ಮಧ್ಯಮವರ್ಗದ ಮಕ್ಕಳನ್ನು ಶೋಷಣೆ ಮಾಡುವ ಈ ಉದ್ಯಮಕ್ಕೆ ಇನ್ನಷ್ಟು ಪ್ರೋತ್ಸಾಹ ನೀಡಲು ಬಾಲಕಾರ್ಮಿಕ ಕಾಯಿದೆಗೆ ತಿದ್ದುಪಡಿ ತರಲಾಗುತ್ತಿದೆಯೇನೋ. ಏಕೆಂದರೆ ನಮ್ಮ ದೇಶದ ಬಹುತೇಕ ಟೆಲಿವಿಷನ್ ಚಾನೆಲ್‌ಗಳು ಅಂಬಾನಿ ಹಾಗೂ ಇತರ ಬಂಡವಳಿಗರ ಕೈಯ್ಯಲ್ಲಿದೆ ಎನ್ನುವುದನ್ನು ಗಮನಿಸಬೇಕು. ಬಾಲಕಾರ್ಮಿಕ ನಿಷೇಧ ಕಾಯಿದೆಯನ್ನು ೧೯೮೬ರಲ್ಲಿ ತಂದಿದ್ದೂ ಕೂಡ ಅಂತರರಾಷ್ಟ್ರೀಯ ಒತ್ತಾಯದ ಮೇಲೆಯೇ. ಬಾಲಕಾರ್ಮಿಕರನ್ನು ಶೋಷಣೆ ಮಾಡಿ ಭಾರತದಲ್ಲಿ ತಯಾರಿಸುತ್ತಿದ್ದ ಕಾಶ್ಮೀರ ಶಾಲು, ಕಂಬಳಿ, ಹಾಗೂ ಇತರ ವಸ್ತುಗಳ ಆಮದನ್ನು ಹಲವು ಮುಂದುವರಿದ ರಾಷ್ಟ್ರಗಳು ನಿಷೇಧಿಸಿದ್ದುವು ಎನ್ನುವುದನ್ನು ನೆನಪು ಮಾಡಿಕೊಳ್ಳಬೇಕು. ಜೀತಪದ್ಧತಿ ನಿಷೇಧ, ವರದಕ್ಷಿಣೆ ನಿಷೇಧ ಕಾಯಿದೆ, ಬಾಲ್ಯವಿವಾಹ ಕಾಯಿದೆ ಮುಂತಾದವು ಜಾರಿಯಲ್ಲಿದ್ದರೂ ಅವು ಉಲ್ಲಂಘನೆಯಾಗುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಅಂಥದ್ದರಲ್ಲಿ ಇರುವ ಕಾನೂನನ್ನೇ ಇನ್ನಷ್ಟು ಸಡಿಲಗೊಳಿಸಿದರೆ ಗತಿ ಏನು.

ಅಂತೂ ಮೋದಿ ಸರಕಾರ ಬಂದ ಒಂದು ವರ್ಷದಲ್ಲಿ ಅದರ ಬಣ್ಣ ಬಯಲಾಗಿದೆ. ಮಕ್ಕಳ ದುಡಿಮೆಗೆ ಪರವಾನಗಿ ನೀಡಲು ಕಾನೂನಿಗೆ ತಿದ್ದುಪಡಿ ಒಂದು ಕಡೆಯಾದರೆ, ಬಡಕಾರ್ಮಿಕರ ಹೊಟ್ಟೆಯ ಮೇಲೆ ಹೊಡೆಯಲು ಕಾರ್ಮಿಕ ಕಾಯಿದೆಗಳು ತಿದ್ದುಪಡಿಯಾಗಲಿದೆ. ಸರಕಾರದ ಈ ಜನವಿರೋಧಿ ನೀತಿಯನ್ನು ವಿರೋಧಿಸಲು ಜನಸಂಘಟಿತ ಹೋರಾಟ ನಡೆಸಲು ಮುಂದಾಗಬೇಕಿದೆ. ಹಾಗಿಲ್ಲದೆ ಹೋದರೆ ಮುಂದಿನ ವರ್ಷಗಳಲ್ಲಿ ಭಾಜಪ ಸರಕಾರ ನಡೆದದ್ದೇ ದಾರಿಯಾಗುತ್ತದೆ. ರೈತರು, ಕಾರ್ಮಿಕರು, ಮಕ್ಕಳು ಈಗಾಗಲೇ ಗುರಿಯಾಗಿದ್ದಾರೆ. ಮುಂದಿನ ಸರದಿ ಯಾರದು?

*(ಈ ತಿಂಗಳು : ೩ನೇ ಪುಟದಿಂದ)*

ಶಿಕ್ಷಾರ್ಹವಲ್ಲ" ಎಂಬ ಘನವಾದ ಹಾಯೆನಿಸುವ ತೀರ್ಪು ನೀಡಿದೆ. ಭೂಮಿಯು ಸೂರ್ಯನ ಸುತ್ತಲೂ ತಿರುಗಲು ಅಡ್ಡಿಯಿಲ್ಲ! ಅಂತಹ ಶೀಲವಂತೆ ಎಂಬ ಅರ್ಹತಾ ಪತ್ರ ಪಡೆದ ಜಯಲಲಿತಾ ಧನ್ಯಳು. "ನಾನು ಅಷ್ಟು ಶುಭ್ರ ಳಾಗಿದ್ದರೂ ನನ್ನನ್ನೇಕೆ ೧೫ ವರ್ಷ ಪರಿತಾಪಕ್ಕೆ ಗುರಿಮಾಡಿ ನನ್ನ ಮಾನನಷ್ಟ ಮಾಡಿದಿರಿ?" ಎಂದು ಜಯಲಲಿತಾ ಮಾನನಷ್ಟ ಮೊಕದ್ದಮೆ ಹೂಡಬೇಕು. "ಸಾಕ್ಷ್ಯಾಧಾರಗಳನ್ನು ಪರೀಕ್ಷಿಸಲು ನಿಮಗೆ ಇಷ್ಟು ವರ್ಷ ಬೇಕಿತ್ತೆ?" ಎಂದು ನ್ಯಾಯಾಲಯವನ್ನು ಕೇಳುವಂತಿಲ್ಲ. ತೀರ್ಪು ನೀಡಿದವರು ಆ ತೀರ್ಪಿಗೆ ಕಾರಣಗಳನ್ನೂ ತಿಳಿಸಿದ್ದಾರೆ. ಹಿರಿಯ ವಕೀಲ ಶ್ರೀ. ಆಚಾರ್ಯ ಹೇಳುತ್ತಾರೆ, ನ್ಯಾಯಾಧೀಶರು ಸರಳ ಅಂಕ ಗಣಿತದ ಲೆಕ್ಕ ಮಾಡುವುದರಲ್ಲಿ ಫೇಲ್ ಆಗಿದ್ದಾರೆ, ಎಂದು. ಆಚಾರ್ಯರು ಲೆಕ್ಕ ಬಾರದಿರುವವರಿಗೆ ಒಂದು 'ಕ್ರ್ಯಾಷ್ ಕೋರ್ಸ್' ಏರ್ಪಡಿಸಬಹುದು. ಅಮೇರಿಕಾದ ಒಬ್ಬ ಪ್ರಾಧ್ಯಾಪಕರು ಹೇಳುತ್ತಾರೆ, "ಲೆಕ್ಕದ ಪಾಠದ ಜೊತೆ ಒಂದೆರಡು ಇಂಗ್ಲಿಷ್ ವ್ಯಾಕರಣದ ತರಗತಿಗಳನ್ನು ನಡೆಸಿಬಿಡಿ," ಎಂದು. ಇನ್ನೊಬ್ಬ ಮಹನೀಯರು ಛೇಡಿಸುತ್ತಾರೆ, "ಏನೇನೋ ಮಾತನಾಡಬೇಡಿ, ನಮ್ಮ ದೇಶದ ತೀರ್ಪುಗಳು ಯಾವುವೂ ರಾಜಕಾರಣದ ಪ್ರಭಾವದಿಂದ ಬರುವುದಿಲ್ಲ" ಎಂದು. ನಿಜವೇ ಇರಬೇಕು, ಆದರೆ ನಮ್ಮ ನ್ಯಾಯ ವ್ಯವಸ್ಥೆಯ ನಿಗೂಢತೆ ಸುಲಭವಾಗಿ ಅರ್ಥವಾಗುವುದಿಲ್ಲ. "ನ್ಯಾಯಮೂರ್ತಿಗಳ ಆಯ್ಕೆಯಲ್ಲಿ ತಪ್ಪುಗಳೇ ನಾದರೂ ಆಗಿದ್ದರೆ ತಿಳಿಸಿ, ನಮ್ಮ ದೇಶದ ಕೊಲಿಜಿಯಂ ಸ್ಫಟಿಕದಂತೆ ಶುಭ್ರ" ಎಂಬರ್ಥದ ಮಾತನ್ನು ನ್ಯಾಯಮೂರ್ತಿ ಖೇಹರ್ ಅವರು ಇತ್ತೀಚೆಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಹೇಳಿದ್ದಾರೆ. ಒಂದಂತೂ ನಿಜ: ತಮ್ಮನ್ನು ತಾವೇ ಆಯ್ಕೆ ಮಾಡಿಕೊಳ್ಳುವ ಸೌಲಭ್ಯವು ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಲಯಗಳಲ್ಲಿ ಮಾತ್ರವೇ ಉಂಟು. ಕರ್ನಾಟಕ ಸರ್ಕಾರವು ಜಯಲಲಿತಾ ಅವರ ವಿರುದ್ಧ ಸರ್ವೋಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆ ದಾಖಲಿಸಿದರೆ ತಮಿಳುನಾಡಿನಲ್ಲಿ ಇನ್ನೊಂದು ಗಲಭೆಯ ಪರ್ವ ಆರಂಭ ಆದೀತೇನೊ!

✶ ✶ ✶

ಅಂದ ಹಾಗೆ, ವಿಶೇಷ ಸಿ.ಬಿ.ಐ. ನ್ಯಾಯಾಲಯ ಇತ್ತೀಚೆಗೆ ಮುಂಬೈನಲ್ಲಿ ಒಂದು ತೀರ್ಪು ನೀಡಿತು. ಗುಜರಾತಿನಲ್ಲಿ ಸೊಹ್ರಾಬುದ್ದೀನ್ ಶೇಕ್ ಮತ್ತು ತುಲಸಿರಾಂ ಪ್ರಜಾಪತಿ ಹತ್ಯೆ ನಡೆದಿದ್ದಾಗ ಪೊಲೀಸ್ ಅಧಿಕಾರಿ ಅಭಯ್ ಚೂಡಸಾಮ ಅದರಲ್ಲಿ ಶಾಮೀಲಾಗಿದ್ದರೆಂಬ ಆಪಾದನೆ ಇತ್ತು. ಆಪಾದನೆಯಲ್ಲಿ ಹುರುಳಿಲ್ಲ ಎಂದು ಸಿ.ಬಿ.ಐ. ಕೋರ್ಟು ತೀರ್ಪು ನೀಡಿದೆ. ಗುಜರಾತ್ ಹತ್ಯಾಕಾಂಡದಲ್ಲಿ ಆಪಾದನೆಗಳನ್ನು ಹೊತ್ತಿದ್ದವರಲ್ಲಿ ಬಹುತೇಕ ಎಲ್ಲರೂ ಕಳೆದ ಆರು ತಿಂಗಳಲ್ಲಿ ಪೂರ್ತಿ ನಿರ್ದೋಷಿಗಳೆಂಬ ತೀರ್ಪು ಪಡೆದಿದ್ದಾರೆ. ಅವರಲ್ಲಿ ಭಾಜಪ ಅಧ್ಯಕ್ಷ ಅಮಿತ್ ಷಾ, ರಾಜಸ್ತಾನದ ಮಾಜಿ ಗೃಹಮಂತ್ರಿ ಗುಲಾಬ್‌ಚಂದ್ ಕಟಾರಿಯಾ, ಗುಜರಾತಿನ ಮಾಜಿ ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ಪಿ. ಸಿ. ಪಾಂಡೆ ಮತ್ತು ಅಡಿಷನಲ್ ಡೈರೆಕ್ಟರ್ ಜನರಲ್ ಗೀತಾ ಜೋಹ್ರಿ, ಎಲ್ಲಾ ಸೇರಿದ್ದಾರೆ. ಸೊಹ್ರಾಬುದ್ದೀನ್ ಶೇಕ್ ಕೊಲ್ಲಲ್ಪಟ್ಟಿದ್ದು ನವಂಬರ್ ೨೦೦೫ರಲ್ಲಿ ಮತ್ತು ತುಲಸಿರಾಂ ಪ್ರಜಾಪತಿ ಕೊಲ್ಲಲ್ಪಟ್ಟಿದ್ದು ನವಂಬರ್ ೨೦೦೬ರಲ್ಲಿ. "ನ್ಯಾಯ" ದೊರಕಿದ್ದು ಒಂದು ದಶಕದ ನಂತರ. ಆಪಾದನೆ ಹೊರಿಸಿದ್ದ ಸಿ.ಬಿ.ಐ. ಅದಿನ್ನೆಷ್ಟು ಚೆಂದವಾಗಿ ಕೆಲಸ ಮಾಡುತ್ತಿದೆಯೆಂಬುದನ್ನು ಊಹಿಸಿಕೊಳ್ಳಬಹುದು. ಅದು ಸಹ "ಸ್ವತಂತ್ರ ಸ್ವಾಯತ್ತ ತನಿಖಾ ಸಂಸ್ಥೆ" ಎಂದು ಹೇಳಲಾಗುತ್ತದೆ.

✶ ✶ ✶

ಇತ್ತೀಚಿನ ಒಂದು ವರದಿಯಂತೆ ತಾಲಿಬಾನ್ ಗಳು ಭಾರತದಲ್ಲಿ ಕೆಲವು ಕಲಾಕೃತಿಗಳನ್ನು ಧ್ವಂಸ ಮಾಡಿದ್ದಾರೆ. ಹಾಗೆಂದು "ದಿ ಹಿಂದು" ಪತ್ರಿಕೆಯು ಮೇ ೩ರಂದು ವರದಿಯೊಂದನ್ನು ಪ್ರಕಟಿಸಿತ್ತು. ಕಲಾ ಕ್ಷೇತ್ರದಲ್ಲಿ ಎಂದೂ 'ಸಹೃದಯ' ಎಂಬ ನಾಮಾಂಕಿತ ಪಡೆಯದ ಈ ತಾಲಿಬಾನ್‌ಗಳ ಪಿಡುಗು ಅಸಹ್ಯವನ್ನು ಉಂಟುಮಾಡುತ್ತದೆ. ಆಫ್ಘಾನಿಸ್ತಾನದಲ್ಲಿ ಪ್ರಾಚೀನ ಬಾಮಿಯಾನ್ ಬುದ್ಧ ವಿಗ್ರಹಗಳನ್ನು ಪುಡಿಮಾಡಿದ ಭಂಡರು ಇವರು. ಈಗ ನಮ್ಮ ದೇಶದಲ್ಲಿ ತಮ್ಮ ಕೊಳಕು ಪ್ರವೃತ್ತಿಯನ್ನು ಹಬ್ಬಿಸಹೊರಟಿದ್ದಾರೆ. ಇದನ್ನು ಕೂಡಲೆ ನಿಗ್ರಹಿಸುವ ಅವಶ್ಯಕತೆ ಇದೆ. ತಾಲಿಬಾನ್ ಗಳಿಗೆ ಪೂರಕವಾಗಿ ಸ್ವದೇಶಿ ತಾಲಿಬಾನ್‌ಗಳು ಆಗ್ರಾದಲ್ಲಿರುವ ತಾಜಮಹಲನ್ನು ಹಿಂದುಗಳ ಪೂಜಾಮಂದಿರವನ್ನಾಗಿ ಪರಿವರ್ತಿಸಬೇಕೆಂದು ಆಗ್ರಹಿಸುತ್ತಿದ್ದಾರೆ. ಅದನ್ನು "ಪ್ರಾಚೀನ" ಕಾಲದಲ್ಲಿ "ತೇಜೋ ಮಹಾಲಯ" ಎನ್ನಲಾಗುತ್ತಿತ್ತು, ಅದು ಮಹೇಶ್ವರನ ಆಲಯವಾಗಿತ್ತು, ಎಂಬ ಸಂಶೋಧನೆ ಮಾಡಿ ಅದಕ್ಕೆ ಕಾಯಕಲ್ಪ ಮಾಡಬೇಕೆಂದು ನ್ಯಾಯಾಲಯದ ಮೆಟ್ಟಿಲು ಹತ್ತುತ್ತಿದ್ದಾರಂತೆ. ಮತೀಯ ದುರ್ಭಾವನೆಗಳಿಂದ ಪ್ರೇರಿತರಾಗಿ ಪರಸ್ಪರರ ಕಲಾಕೃತಿಗಳನ್ನು ಎರಡು ತಾಲಿಬಾನ್ ಧರ್ಮೀಯ ಬಣಗಳೂ ಧ್ವಂಸಮಾಡಿದರೆ ಖಾಲಿ ಫಲಕ ಹಿಡಿದು ನಮ್ಮ ದೇಶವು ನವನವೋನ್ಮೇಷ ಶಾಲಿನೀ ಪ್ರತಿಭೆಯಿಂದ ಹೊಚ್ಚಹೊಸ ಕಲಾಕೃತಿಗಳ ಸೃಷ್ಟಿಯಲ್ಲಿ ತೊಡಗಬಹುದು! ಈ "ತೇಜೋ ಮಹಾಲಯ" ಕಟ್ಟಿದ್ದು ಯಾರು ಮತ್ತು ಯಾವಾಗ ಎಂಬುದನ್ನು ಭಾಜಪ ಸರ್ಕಾರದ ಇತಿಹಾಸತಜ್ಞ, ಭಾರತೀಯ ಇತಿಹಾಸ ಸಂಶೋಧನಾ ಮಂಡಲಿಯ ಅಧ್ಯಕ್ಷ, ಆಂಧ್ರಕೇಸರಿ ಅನಾಮಧೇಯ ಇತಿಹಾಸಕಾರರು ಸದ್ಯದಲ್ಲೇ ತಿಳಿಸಿಕೊಟ್ಟಾರು. ಬೌದ್ಧಿಕ ಚಟುವಟಿಕೆಗಳಿಗೆ ಯಾವ ಬೆಲೆ ನಿಗದಿ ಗೊಳಿಸಬೇಕೆಂದು ಸನ್ಮಾನ್ಯ ಸ್ಮೃತಿ ಇರಾನಿಯವರು ದಯಮಾಡಿ ಗಂಭೀರವಾಗಿ ಪರ್ಯಾಲೋಚನೆ ಮಾಡುತ್ತಾರೆಂದು ಆಶಿಸೋಣವೆ?

✶ ✶ ✶

ಕರ್ನಾಟಕ ಸರ್ಕಾರವು ಮಾನ್ಯ ಡಾ॥ ಕೋ. ಚೆನ್ನಬಸಪ್ಪ ಅವರ ಅಧ್ಯಕ್ಷತೆಯಲ್ಲಿ ನಮ್ಮ ರಾಜ್ಯಕ್ಕೆ ಒಬ್ಬ 'ರಾಷ್ಟ್ರಕವಿ'ಯನ್ನು ಆಯ್ಕೆ ಮಾಡಲು ೧೪ ಮಂದಿಯ ಸಮಿತಿಯೊಂದನ್ನು ರಚಿಸಿತ್ತು. ಅದು ನಡೆದದ್ದು ನವಂಬರ್ ೨೦೧೪ರ ಅಂತ್ಯದಲ್ಲಿ. ಇದೇ ಮೇ ೫ರಂದು ಸಮಿತಿಯು ತನ್ನ ವರದಿ ಸಲ್ಲಿಸಿದೆ. "ಭಾರತ ಸಂವಿಧಾನ ಜಾರಿಯಲ್ಲಿ ಬಂದಮೇಲೆ ಇಂಥ 'ರಾಷ್ಟ್ರಕವಿ' ಅಭಿಧಾನ, ಇತ್ಯಾದಿ ಪುರಸ್ಕಾರಗಳನ್ನು ಗಣತಂತ್ರ ರಾಜ್ಯದಲ್ಲಿ ನೀಡಬಾರದು. ಆದ್ದರಿಂದ ಸಮಿತಿಯು 'ರಾಷ್ಟ್ರಕವಿ' ಸ್ಥಾನಕ್ಕೆ ಯಾರನ್ನೂ ಶಿಫಾರಸು ಮಾಡಿಲ್ಲ" ಎಂದು ಆಯ್ಕೆ ಸಮಿತಿಯು ನಿರ್ಧಾರವನ್ನು ಪ್ರಕಟಿಸಿದೆ. ವರದಿಯ ಪ್ರಕಾರ ಸಮಿತಿಯು ಮೊದಲಿಗೆ "ರಾಷ್ಟ್ರಕವಿ ಎಂಬುದು ರಾಜ್ಯ ಸರ್ಕಾರ ಪ್ರದಾನ ಮಾಡುವ ಒಂದು ಬಿರುದಾವಳಿಯೆ?" ಎಂಬ ಪ್ರಶ್ನೆಯನ್ನು ಹಾಕಿಕೊಂಡು "ಪುರಸ್ಕಾರ, ಮನ್ನಣೆ, ಗೌರವ, ಸನ್ಮಾನ, ಬಹುಮಾನ" ಎಂಬ ಹೆಸರುಗಳಿಂದ ಅದನ್ನು ಕೊಡಮಾಡಿರಬಹುದೆಂಬ ತೀರ್ಮಾನಕ್ಕೆ ಬಂದಿದೆ. "ರಾಷ್ಟ್ರಕವಿ ಎಂಬ ಮಾತಿನ ಅರ್ಥವನ್ನು ಹಿಂದಿನ ಆಸ್ಥಾನ ಕವಿಗಳಿಗೆ ಸಮಾನವಾದ ಒಂದು ಅರಸೊತ್ತಿಗೆಯ ಕಾಲದಲ್ಲಿದ್ದ ಪಂಡಿತ, ಆಸ್ಥಾನ ಕವಿ, ಆಸ್ಥಾನ ವಿದ್ವಾಂಸ" ಮುಂತಾದ ಬಿರುದುಗಳೊಂದಿಗೆ ಸಮೀಕರಿಸಿ ಅಂತಹ ಬಿರುದಾಂಕಿತರಿಗೆ "ಪ್ರಜಾಸತ್ತಾತ್ಮಕ ಗಣರಾಜ್ಯದಲ್ಲಿ ಯಾವುದೇ ಸ್ಥಾನವಿಲ್ಲ" ಎಂದು ಸಮಿತಿಯು ನಿರ್ಧರಿಸಿದೆ. ಸಂವಿಧಾನದ ೧೮ನೆಯ ಆರ್ಟಿಕಲ್ ಇಂತಹ ಬಿರುದುಗಳನ್ನು ನಿಷೇಧಿಸಿದೆ ಎಂದು ಸಮಿತಿಯು ಅಭಿಪ್ರಾಯಪಟ್ಟಿದೆ. ಹೀಗಿರುವಾಗ "ರಾಷ್ಟ್ರಕವಿ ಎಂಬುದು ಅಂಥ ಬಿರುದಾವಳಿಯಾದರೆ ಅದನ್ನು ರಾಜ್ಯ / ಕೇಂದ್ರ ಸರ್ಕಾರ ಯಾರಿಗೂ ಇಂಥ ಬಿರುದಾವಳಿಗಳನ್ನು ಕೊಡುವುದು ಸಂವಿಧಾನೋಲ್ಲಂಘನೆಯಾಗುತ್ತದೆ" ಎಂದು ಸಮಿತಿಯು ಅಭಿಪ್ರಾಯಪಟ್ಟಿದೆ. ಮುಂದುವರಿದು ವರದಿಯು ಹೀಗೆ ಹೇಳಿದೆ: "ಒಂದು ವೇಳೆ 'ರಾಷ್ಟ್ರಕವಿ' ಎಂಬುದು 'ಪೊಯೆಟ್ ಲಾರಿಯೇಟ್' (ಎಂಬ ಬ್ರಿಟನ್ನಿನ ಸಂಪ್ರದಾಯದ್ದು) ಎಂದು ಭಾವಿಸುವುದಾದರೆ ಅದು ಕೂಡ ಸಂವಿಧಾನದ ವಿರೋಧಿಯಾಗುತ್ತದೆ. ಒಂದು ವೇಳೆ ಈ ರಾಷ್ಟ್ರಕವಿ ಬಿರುದು ಕೊಡುವುದು ಸಂವಿಧಾನ ಬಾಹಿರವಾದರೆ ಆ ಸ್ಥಾನದ ವ್ಯಕ್ತಿಯೊಬ್ಬರು ರಾಜ್ಯ ಸರ್ಕಾರಕ್ಕೆ ಅಗತ್ಯವೇ?" ಪದ್ಮಶ್ರೀ, ಮುಂತಾದ ಬಿರುದಾವಳಿಗಳು ಸಂವಿಧಾನದ ಆರ್ಟಿಕಲ್ ೧೮ಕ್ಕೆ ವಿರೋಧವಲ್ಲವೆಂದು ೧೯೪೮ರಲ್ಲಿ ಡಾ॥ ಬಿ. ಎನ್. ರಾವ್ ಸಮಿತಿಯು ತಿಳಿಸಿತ್ತೆಂಬುದನ್ನು ದಾಖಲಿಸಿರುವ ಪ್ರಸ್ತುತ ಸಮಿತಿಯು 'ರಾಷ್ಟ್ರಕವಿ' ಎಂಬುದು ಪದ್ಮ ಪುರಸ್ಕಾರಗಳಿಗಿಂತಲೂ ಭಿನ್ನವೆಂದು ತಿಳಿಸಿದೆ.

ಈ ತೀರ್ಮಾನಕ್ಕೆ ಬರುವ ಮುನ್ನ ಆಯ್ಕೆಯ ಪ್ರಕ್ರಿಯೆಯ ಭಾಗವಾಗಿ 'ರಾಷ್ಟ್ರಕವಿ' ಆಯ್ಕೆಗೆ ಏಳು ಸೂತ್ರಗಳ ಮಾನದಂಡವೊಂದನ್ನು ಸಮಿತಿಯು ರೂಪಿಸಿ ಅಂಗೀಕರಿಸಿತ್ತು. ಆ ಸೂತ್ರಗಳಲ್ಲಿ ಆರು ಹೀಗಿವೆ :

೧. "ಅಸಾಧಾರಣ, ಗುಣ-ಗಾತ್ರದಲ್ಲಿ ಗಣನೀಯ ಶಾಶ್ವತ ಕಾವ್ಯ-ಗದ್ಯ ವಿವಿಧ ಪ್ರಕಾರಗಳ ಸಾಹಿತ್ಯಸೃಷ್ಟಿ.
೨. ದೇಶ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗ ವಹಿಸಿದ ತ್ಯಾಗಿಗಳು ಆ ಸಂಗ್ರಾಮಕ್ಕೆ ಸ್ಪಂದಿಸಿ ಸಾಹಿತ್ಯ ರಚಿಸಿದವರು, ಕರ್ನಾಟಕ ಏಕೀಕರಣಕ್ಕೆ ಕನ್ನಡ ಹಿತರಕ್ಷಣೆಗೆ ಕರ್ನಾಟಕ ಅಭಿವೃದ್ಧಿಗಾಗಿ ಶ್ರಮಿಸಿದವರು ಮತ್ತು ಸಂಸ್ಕೃತಿ ಉನ್ನತಿಗಾಗಿ ದುಡಿದವರು, ಗಡಿನಾಡು, ಹೊರನಾಡು ಕನ್ನಡದ ಕನ್ನಡಿಗರಿಗೆ ಸಹಾಯ ಮಾಡಿದವರು.
೩. ಮೇರುಸದೃಶ ವ್ಯಕ್ತಿತ್ವ, ಲೌಕಿಕ ಪಾರಮಾರ್ಥಿಕ ಆದರ್ಶ ಜೀವನ, ಇಡೀ ಜನಾಂಗ ಅವರ ಮಾತನ್ನು ಕೇಳಬೇಕು. ದಾರ್ಶನಿಕರು ನಾಡಗುರುಗಳಂತಿರಬೇಕು.
೪. 'ಮನುಜ ಕುಲ ತಾನೊಂದೆ ವಲಂ' ಎಂಬ ಪಂಪನ ವಿಶ್ವಮಾನವ ದೃಷ್ಟಿ... 'ಸರ್ವ ಜನಾಂಗದ ಶಾಂತಿಯ ತೋಟ' ಎಂಬ ಕುವೆಂಪು ಮಾತಿನಲ್ಲಿ ನಂಬಿಗೆ ಇರುವಂಥ ದಿವ್ಯಜೀವಿಗಳಾಗಿರಬೇಕು.
೫. ಸರ್ವಧರ್ಮ, ಸಮನ್ವಯ, ಸರ್ವೋದಯ, ಸಮಾನತೆಯ ಹರಿಕಾರರು, ಆಚಾರ್ಯ ಪುರುಷರಾಗಿರುವವರು.
೬. ಅವರು ಎಂದೂ ಯಾವ ಆಪಾದನೆಗೂ ಗುರಿ ಯಾಗಿರಬಾರದು ಹಾಗೂ ಬಹುಮತ ಇತ್ಯಾದಿ ಚುನಾವಣಾ ಪ್ರಕ್ರಿಯೆಯಿಂದ ಆಯ್ಕೆ ಆಗಬಾರದು."

ಸಮಿತಿಯು ತನ್ನ ಅಂತಿಮ ನಿರ್ಧಾರವನ್ನು ಪುಷ್ಟೀಕರಿಸಲು ಪೂರ್ವಭಾವಿಯಾಗಿ ಕೆಲವು ಅಂಶಗಳನ್ನು ಪಟ್ಟಿ ಮಾಡಿದೆ. ಅವುಗಳಲ್ಲಿ ನಾಲ್ಕು ಹೀಗಿವೆ :

೧. "ಒಂದು ರಾಜ್ಯ ಸರ್ಕಾರ ಇಡೀ ರಾಷ್ಟ್ರಕ್ಕೆ ಅನ್ವಯಿಸುವ 'ರಾಷ್ಟ್ರಕವಿ' ಅಭಿಧಾನ (ಪುರಸ್ಕಾರ)ವನ್ನು ಪ್ರದಾನ ಮಾಡುವುದು ಉಚಿತವಾಗಿ ಕಾಣುವುದಿಲ್ಲ.
೨. ಸಮಿತಿಯು ಮೊಟ್ಟಮೊದಲನೆಯ ಸಮಾವೇಶ ದಲ್ಲಿಯೆ ಒಮ್ಮತದಿಂದ ಸಪ್ತಸೂತ್ರಗಳನ್ನು ರೂಪಿಸಿತು. ಅವುಗಳನ್ನು ಗಮನದಲ್ಲಿಟ್ಟು ಕೊಂಡು ಈ ನಿರ್ಣಯಕ್ಕೆ ಸಮಿತಿಯು ಬಂದಿದೆ.
೩. ಸಮಿತಿಯೆ ರೂಪಿಸಿದ ಮಾನದಂಡದ ಪ್ರಕಾರ ಈ ಪುರಸ್ಕಾರ ಯಾವ ಜಾತಿ, ಮತ, ಪಂಥ, ಧರ್ಮ, ಭಾಷೆ, ಪ್ರದೇಶ - ಇವುಗಳ ಆಧಾರದ ಮೇಲೆ ಆಯ್ಕೆಯಾಗಬಾರದು. ಈ ದೃಷ್ಟಿಯಿಂದ ಧರ್ಮ ಅಥವಾ ಭಾಷಾ ಅಲ್ಪಸಂಖ್ಯಾತರಿಗೆ ಸಾಮಾಜಿಕ ನ್ಯಾಯ ದೊರಕಿಸಬೇಕೆಂಬುದು ನಾವು ನಿರೂಪಿಸಿದ ಮಾನದಂಡಕ್ಕೆ ವಿರೋಧವಾಗಿರುತ್ತದೆ. ಯಾರ ನ್ನಾದರೂ ಆಯ್ಕೆ ಮಾಡಿದರೆ ಉಳಿದವರಿಗೆ ಆ ಸ್ಥಾನ ದೊರೆಯಲಿಲ್ಲ ಎಂಬ ಭಾವನೆ ಬರಬಹುದು. ಆದರೆ ಯಾರಿಗೂ ಬೇಡ ಎನ್ನುವಾಗ ಸಾಮಾಜಿಕ ಅಸಮಾನತೆಯ ಮಾತೇ ಬರುವುದಿಲ್ಲ.
೪. ಈ ಸಂದರ್ಭದಲ್ಲಿ ಅಖಂಡ ಕರ್ನಾಟಕದ ಹಿತದೃಷ್ಟಿಯಿಂದ ಈ ಆಯ್ಕೆ ಪ್ರಕ್ರಿಯೆಯನ್ನು ಕೈಬಿಡುವುದು ಸೂಕ್ತ. ಏಕೆಂದರೆ ಆಯ್ಕೆ ಸಮಿತಿ ಯಾರನ್ನಾದರೂ, ಯಾವ ಪ್ರದೇಶ ದಿಂದಾದರೂ ಆಯ್ಕೆ ಮಾಡಿದರೆ ಪ್ರಾದೇಶಿಕ ಅಸಮಾನತೆ ಉಂಟಾಗಬಹುದೆಂಬ ಅಂಜಿಕೆ. ಈ ಸಂಗತಿಯನ್ನು ಸಮಿತಿ ಗಂಭೀರವಾಗಿ ಪರಿಗಣಿಸುತ್ತದೆ."

ಇವೆಲ್ಲವುಗಳನ್ನೂ ಆಧರಿಸಿ ಸಮಿತಿಯು ಒಂದು ತೀರ್ಮಾನಕ್ಕೆ ಬಂದಿದೆ. ಸರಳೀಕರಿಸಿ ಹೇಳುವುದಾದರೆ, ಕರ್ನಾಟಕವು ಒಂದು 'ರಾಷ್ಟ್ರ' ಅಲ್ಲದಿರುವಾಗ ನಮ್ಮ ರಾಜ್ಯಕ್ಕೆ 'ರಾಷ್ಟ್ರಕವಿ' ಎಂಬುದೇ ಒಂದು ವಿಪರ್ಯಾಸ. ಅಲ್ಲದೆ, ನಮ್ಮಲ್ಲಿ ರಾಷ್ಟ್ರ ವಿಜ್ಞಾನಿ, ರಾಷ್ಟ್ರ ಇತಿಹಾಸತಜ್ಞ, ರಾಷ್ಟ್ರ ಕರಕುಶಲಕರ್ಮಿ, ರಾಷ್ಟ್ರ ರೈತ, ರಾಷ್ಟ್ರ ಕತೆಗಾರ, ರಾಷ್ಟ್ರ ಸಂಗೀತಗಾರ, ರಾಷ್ಟ್ರ ಶಿಲ್ಪಿ, ರಾಷ್ಟ್ರ ಕಲಾವಿದ, ಇತ್ಯಾದಿಗಳೆಲ್ಲಾ ಇಲ್ಲದಿರುವಾಗ ರಾಷ್ಟ್ರಕವಿಯದೇನು ಮಹಾನ್ ವೈಶಿಷ್ಟ್ಯ? ಆದ್ದರಿಂದ ಸಮಿತಿಯ ನಿರ್ದಿಷ್ಟ ಕಾರಣಗಳೇನೇ ಇರಲಿ, ಅದರ ತೀರ್ಮಾನವನ್ನು ಸ್ವಾಗತಿಸುವುದು ಸಹಜವೆನಿಸುತ್ತದೆ. ಪ್ರಶಸ್ತಿಗಳಿಗೆ ಕೊರತೆ ಇಲ್ಲದ ನಮ್ಮ ರಾಜ್ಯದಲ್ಲಿ ಈ ತೀರ್ಮಾನವು ಬೇಸರ ಉಂಟು ಮಾಡಬೇಕಾಗಿಲ್ಲ. ಎಲ್ಲಕ್ಕಿಂತಲೂ ಮುಖ್ಯವಾದ ವಿಚಾರ ಬೇರೆಯೇ ಇದೆ: ಈ ಎಲ್ಲಾ ಕ್ಷೇತ್ರಗಳ ವಿಶಿಷ್ಟ ಪ್ರತಿಭಾವಂತರ ಅನನ್ಯ ಕೊಡುಗೆಗಳು ನಮ್ಮ ರಾಜ್ಯದ ಎಲ್ಲರಿಗೂ ತಲುಪುವಂತಾಗಬೇಕು, ಅದಕ್ಕೆ ಅಗತ್ಯವಾದ ವ್ಯವಸ್ಥೆ ಮತ್ತು ವಾತಾವರಣವನ್ನು ನಾವು ನಿರ್ಮಿಸಿಕೊಳ್ಳಬೇಕು.

ಇಷ್ಟಾಗಿಯೂ ಎರಡು ಪ್ರಶ್ನೆಗಳು ನಮ್ಮ ಮುಂದೆ ಬರುತ್ತವೆ: (ಅ) 'ರಾಷ್ಟ್ರಕವಿ' ಪುರಸ್ಕಾರವು ಸಂವಿಧಾನರೀತ್ಯಾ ಔಚಿತ್ಯಪೂರ್ಣವಾದುದೇ ಅಲ್ಲವೇ ಎಂಬ ವಿಷಯವು ಸಮಿತಿಯ ಪರಿಧಿ ಯಲ್ಲಿದ್ದಿತೆ? ಸರ್ಕಾರವು ಆ ಪ್ರಶ್ನೆಯನ್ನು ಸಮಿತಿಯ ಮುಂದೆ ಇಟ್ಟಿದ್ದಿತೆ? (ಆ) ಆ ಪುರಸ್ಕಾರವು ಸಂವಿಧಾನರೀತ್ಯಾ ಮಾನ್ಯವಲ್ಲ ವೆಂದಾದರೆ ಆಯ್ಕೆಗೆ ಸಪ್ತ ಮಾನದಂಡಗಳನ್ನು ರೂಪಿಸುವ ಅಗತ್ಯವಿದ್ದಿತೆ ಮತ್ತು ಆ ಮಾನದಂಡ ಗಳ ಪ್ರಕಾರ ಯಾರಾದರೂ ಆಯ್ಕೆಗೆ ಅರ್ಹರೆಂದು ಕಂಡುಬಂದಿದ್ದರೆ ಸಮಿತಿಯು ಯಾವ ಕ್ರಮವನ್ನು ಕೈಗೊಳ್ಳಲು ಮುಂದಾಗುತ್ತಿತ್ತು?

ಸದ್ಯಕ್ಕಂತೂ ಈ ಪುರಸ್ಕಾರದ ಪ್ರಸಂಗಕ್ಕೆ ಇತಿಶ್ರೀ ಹಾಡುವುದು ಸೂಕ್ತವೆನಿಸುತ್ತದೆ.

* * *

ರಾಜ್ಯದಲ್ಲಿ ಸಿದ್ದರಾಮಯ್ಯ ನಾಯಕತ್ವದ ಕಾಂಗ್ರೆಸ್ ಸರಕಾರ ಅಧಿಕಾರದಲ್ಲಿ ಎರಡು ವರ್ಷ ಮುಗಿಸಿದೆ. ಕೇಂದ್ರದಲ್ಲಿ ಮೋದಿ ನೇತೃತ್ವದ ಭಾಜಪ ಸರಕಾರ ಒಂದು ವರ್ಷ ಮುಗಿಸಿದೆ. ಎರಡೂ ಈಗ ತಮ್ಮ ಸಾಧನೆಗಳ ಕುರಿತು ಕೊಚ್ಚಿಕೊಳ್ಳುವುದಕ್ಕೆ ಹೊರಟಿವೆ. ರಾಜ್ಯದಲ್ಲಿ ಕಾಂಗ್ರೆಸ್ ದಾವಣಗೆರೆ ನಗರದಲ್ಲಿ ಸಾಧನೆ ಸಮಾವೇಶ ನಡೆಸಿದೆ. ಭಾಗ್ಯ ಯೋಜನೆಗಳ ಸುರಿಮಳೆ ಬಿಟ್ಟರೆ ಸರಕಾರದ ಸಾಧನೆಗಳು ಶೂನ್ಯ ಎನ್ನಬೇಕು. ಚುನಾವಣಾ ಘೋಷಣೆಯಲ್ಲಿ ಹೇಳಿದ್ದಂತೆ ಬಡ ಕುಟುಂಬಗಳಿಗೆ ಒಂದು ರೂಪಾಯಿಗೆ ಕೆ.ಜಿ. ಅಕ್ಕಿ ಕೊಡುತ್ತಿದ್ದ ಸರಕಾರ ಈಗ ಉಚಿತವಾಗಿ ಕೊಡಲು ಮುಂದಾಗಿದೆ. ಈ ಕ್ರಮದಿಂದ ಸರಕಾರಕ್ಕೆ ಅದೆಷ್ಟೋ ಕೋಟಿ ಹಣ ಉಳಿತಾಯವಾಗುವುದಂತೆ! ಇಂಥ ಲೆಕ್ಕಾಚಾರಕ್ಕೆ ಅಧಿಕಾರಿಗಳು ಹೇಗೆ ಬಂದರೋ ನಮಗಂತೂ ಗೊತ್ತಾಗುವುದಿಲ್ಲ. ಬಿಪಿಎಲ್ ಕಾರ್ಡುದಾರರು, ಅಂದರೆ ಬಡತನದ ರೇಖೆಗಿಂತ ಕೆಳಗಿರುವವರ ಬಳಿ ಇರುವ ಕಾರ್ಡುಗಳು ಬಹುತೇಕ ನಕಲಿ ಎಂಬುದನ್ನು ಸರಕಾರವೇ ಒಪ್ಪಿಕೊಳ್ಳುತ್ತದೆ. ಕೆಲವು ಕಡೆಗಳಲ್ಲಿ ವಾಸವಾಗಿರುವ ಕುಟುಂಬಗಳ ಸಂಖ್ಯೆಗಿಂತ ಕಾರ್ಡುಗಳ ಸಂಖ್ಯೆ ಹೆಚ್ಚು. ಸರಕಾರ ಕೊಡುವ ಅಕ್ಕಿ ಎಲ್ಲ ಹೋಟೆಲುಗಳು, ಅಂಗಡಿ ಮುಂಗಟ್ಟುಗಳನ್ನು ಸೇರುತ್ತಿವೆ. ಸಿದ್ದರಾಮಯ್ಯ ಅವರ ಪ್ರಕಾರ ಮಾಡಿಕೊಳ್ಳುವವರು ಮಾಡಿ ಕೊಳ್ಳಲಿ ಎಂಬ ಧೋರಣೆ. ಇಂಥ ಕ್ರಮಗಳಿಂದ ಬಡತನ ನಿರ್ಮೂಲನ ಸಾಧ್ಯವಾಗಲ್ಲ ಅನ್ನೋದು ಸರಕಾರಕ್ಕೂ ಗೊತ್ತು ನಮಗೂ ಗೊತ್ತು. ಈ ವ್ಯವಸ್ಥೆಯಲ್ಲಿ ಉಂಡೋನೆ ಜಾಣ ಎನ್ನೋಣವೆ.

ಸಿದ್ದರಾಮಯ್ಯ ಸರಕಾರದಿಂದ ಖಾಯಂ ಆದ ಯೋಜನೆಗಳು ಯಾವುದೂ ಕಾರ್ಯಗತ ವಾಗಿಲ್ಲ. ಹೊಸ ಕೈಗಾರಿಕೆಗಳ ಸ್ಥಾಪನೆಯಂತೂ ಇಲ್ಲ, ಇರುವುವೂ ಕೆಲವು ಬಾಗಿಲು ಮುಚ್ಚ ತೊಡಗಿವೆ. ಹಗರಣಗಳೇನೂ ಇರಲಿಲ್ಲ ಎಂದು ಮುಖ್ಯಮಂತ್ರಿಗಳು ಹೇಳಿಕೊಂಡಿದ್ದಾರೆ. ಇನ್ನೂ ಕಾಲವಿದೆಯಲ್ಲ ನಿಧಾನವಾಗಿ ಹೊರಬರುತ್ತವೆ. ಕೇಂದ್ರದಲ್ಲಿನಂತೆ ರಾಜ್ಯದಲ್ಲೂ ಸಚಿವರುಗಳು ನಿಷ್ಕ್ರಿಯರಾಗಿದ್ದಾರೆ. ರಾಜ್ಯ ಸಂಪುಟದ ಪುನಾರಚನೆ ಮುಂದಕ್ಕೆ ಹೋಗುತ್ತಲೇ ಇದೆ. ಸದ್ಯಕ್ಕೆ ಪಂಚಾಯಿತಿ ಚುನಾವಣೆ. ಅದು ಮುಗಿದರೆ ಮತ್ತೊಂದು ನೆಪ. ಅದೇ ಗತಿಯೇ ನಿಗಮ ಮಂಡಳಿ ನೇಮಕಾತಿ ಕೂಡ. ಅದು ಇನ್ನೂ ಅಪೂರ್ಣ. ಸರಕಾರದ ಒಂದು ಸಾಧನೆ ಎಂದರೆ ಕೆರೆ ಒತ್ತುವರಿ ತೆರವು ಮಾಡಿಸಿರುವುದು. ಆದರೆ ಪಾಪ ವಸತಿ ಕಳೆದುಕೊಂಡವರ ಪಾಡೇನು? ಪರಿಹಾರ ಕೊಡಿಸುವುದಾಗಿ ಸರಕಾರವೇನೋ ಹೇಳುತ್ತಿವೆ. ಆದರೆ ಅದು ಬರುವ ಹೊತ್ತಿಗೆ ಯಾವ ಕಾಲವಾಗುತ್ತೋ. ಸಾಧನೆಗಿಂತ ಸಮಸ್ಯೆಗಳೇ ಹೆಚ್ಚಾಗುತ್ತಿವೆ. ಎರಡು ವರ್ಷ ಕುರ್ಚಿಗೆ ಅಂಟಿ ಕೊಂಡಿರುವುದೇ ಸಾಧನೆ ಎನ್ನಬೇಕೆ?

ಕೇಂದ್ರದಲ್ಲಿ ಮೋದಿ ಸರಕಾರದ ಹಲವು ಯೋಜನೆಗಳು 'ಅಚ್ಛೇ ದಿನ್'ಗಾಗಿ ಕಾಯುತ್ತಿವೆ. ತಿಂಗಳಿಗೊಮ್ಮೆ 'ಮನ್ ಕಿ ಬಾತ್' ನಡೆಸುವ ಮೋದಿ ಅವರ ಸ್ವಚ್ಛ ಭಾರತ, ಭಾರತದಲ್ಲೇ ತಯಾರಿಸಿ, ಕಪ್ಪುಹಣ ವಾಪಸಾತಿ ಎಲ್ಲ ಘೋಷಣೆಗಳಾಗಿಯೇ ಉಳಿದಿದ್ದರೂ ಪ್ರಚಾರ ಪ್ರಿಯರಾದ ಅವರು ಹೊಸ ಹೊಸ ನುಡಿಕಟ್ಟುಗಳನ್ನು ಹೊಸೆಯುವುದರಲ್ಲಿ ಪರಿಣತ. ಒಂದು ವರ್ಷದಲ್ಲಿ ಹೊರ ದೇಶಗಳಲ್ಲಿಯೇ ಹೆಚ್ಚು ದಿನಗಳನ್ನು ಕಳೆದಿರುವ ಮೋದಿ ತಮ್ಮ ಕಾರ್ಪೊರೇಟ್ ಪರ ವ್ಯಾಮೋಹವನ್ನೇನೂ ಕಡಿಮೆ ಮಾಡಿಲ್ಲ. ರೈತ ವಿರೋಧಿ ಭೂಮಸೂದೆ ಆರ್ಡಿನೆನ್ಸ್ ಅದಕ್ಕೆ ಸಾಕ್ಷಿ. ಈಗ ಮತ್ತೆ ಆರ್ಡಿನೆನ್ಸ್ ತರುವ ಯೋಜನೆಯಲ್ಲಿದ್ದಾರೆ. ಹೇಳಿಕೊಳ್ಳುವಂಥ ಸಾಧನೆ ಏನಿಲ್ಲದಿದ್ದರೂ ಮಾತಿನಲ್ಲಿ ಮರಳು ಮಾಡುವುದನ್ನು ಚೆನ್ನಾಗಿ ಕಲಿತಿದ್ದಾರೆ ಮೋದಿ. ಐದು ವರ್ಷಗಳಲ್ಲಿ ಕೇಸರೀಕರಣ ಗ್ಯಾರಂಟಿ. ಇದೊಂದು ಮಾತ್ರ ಸದ್ದಿಲ್ಲದೆ ನಡೆಯುತ್ತಿದೆ.

* * *

ನೇಪಾಳದಲ್ಲಿ ಸಂಭವಿಸಿದ ಭೂಕಂಪನ ದುರಂತ ಈ ಶತಮಾನದ ಬಹುದೊಡ್ಡ ಅವಘಡ. ಹೆಚ್ಚು ಕಡಿಮೆ ಹತ್ತು ಸಾವಿರ ಮಂದಿಯನ್ನು ಆಹುತಿಯಾಗಿಸಿದ ಈ ಪ್ರಕೃತಿ ವಿಕೋಪದಲ್ಲಿ ಮಡಿದವರಿಗೆ, ಗಾಯಗೊಂಡವರಿಗೆ 'ಹೊಸತು' ತನ್ನ ಸಹಾನುಭೂತಿ ವ್ಯಕ್ತಪಡಿಸುತ್ತದೆ. ಭೂಕಂಪನದಿಂದ ತತ್ತರಿಸಿದ ಹಿಮಾಲಯದ ಈ ಪುಟ್ಟ ದೇಶಕ್ಕೆ ಎಲ್ಲ ಬಗೆಯ ನೆರವನ್ನು ನೀಡುವುದು ಭಾರತೀಯರಾದ ನಮ್ಮ ಕರ್ತವ್ಯ. ಈ ಭೂಕಂಪನದ ಹಿಂದೆಯೇ ಉತ್ತರ ಭಾರತದ ಕೆಲ ಭಾಗಗಳಲ್ಲಿ ಕಂಪನವುಂಟಾಗಿ ಹಲವರು ಅಸುನೀಗಿದ್ದಾರೆ. ಆದರೆ ಇದು ನೇಪಾಳದಷ್ಟು ಭೀಕರವಾಗಿರಲಿಲ್ಲ. ಈ ದುರಂತದ ಸಂದರ್ಭದಲ್ಲಿ ಭಾರತೀಯ ಸೇನೆಯ ಯೋಧರು, ವೈದ್ಯರು ಇತರ ಸಂಘಟನೆಗಳವರೂ ಸ್ತುತ್ಯಾರ್ಹವಾದ ಕಾರ್ಯ ಮಾಡಿದ್ದಾರೆ. ಸಾಕಷ್ಟು ನೆರವು ನೇಪಾಳಕ್ಕೆ ವಿವಿಧ ದೇಶಗಳಿಂದ ಬಂದಿವೆ. ದೇಶದ ಪುನರ್ ನಿರ್ಮಾಣ ಕಾರ್ಯದಲ್ಲಿ ನಾವೂ ಕೈಜೋಡಿಸೋಣ.

ನಮ್ಮ ಯೋಧರು ಸಂತ್ರಸ್ತರಿಗೆ ನೆರವಾಗುವುದರಲ್ಲಿ, ಅಪಘಾತಕ್ಕೀಡಾಗಿರುವವರನ್ನು ಬಚಾವು ಮಾಡುವುದರಲ್ಲಿ ನಡೆಸಿದ ಕಾರ್ಯವನ್ನು ನೇಪಾಳದ ಜನತೆ ಹಾಗೂ ಸರಕಾರ ಮೆಚ್ಚಿಕೊಂಡಿದೆ ಮತ್ತು ಪ್ರಶಂಸಿಸಿದೆ. ಆದರೆ ನಮ್ಮ ಮಾಧ್ಯಮದ ಉತ್ಪ್ರೇಕ್ಷಿತ ವರದಿಗಳು ನೇಪಾಳದ ಜನರನ್ನು ಅಸಮಾಧಾನಗೊಳಿಸಿದೆ ಹಾಗೂ ಆಕ್ರೋಶಗೊಳಿಸಿದೆ. ಈ ಅಸಮಾಧಾನವನ್ನು ನೇಪಾಳ ಸರಕಾರದ ವಕ್ತಾರರು ವ್ಯಕ್ತಗೊಳಿಸಿದ್ದಾರೆ. ದುರಂತದ ಸಮಯದಲ್ಲೂ ಕೂಡ ನಮ್ಮ ದೃಶ್ಯ ಮಾಧ್ಯಮಗಳು ಟಿಆರ್‌ಪಿ ಕಡೆಗೇ ಗಮನ ನೀಡಿದ್ದು ವಿಷಾದನೀಯ. ಕಾಶ್ಮೀರದಲ್ಲಿ ಪ್ರವಾಹದ ದುರಂತ ಸಂಭವಿಸಿದ್ದಾಗಲೂ ಇದೇ ಬಗೆಯ ಆಕ್ಷೇಪಗಳು ನಮ್ಮ ಮಾಧ್ಯಮಗಳ ಬಗ್ಗೆ ಬಂದಿದ್ದುದನ್ನು ಮರೆಯಲಾಗದು. ಮುಂದಾದರೂ ಮಾಧ್ಯಮಗಳು ಇದರಿಂದ ಪಾಠ ಕಲಿಯಲಿ.

* * *

ದೆಹಲಿಯ ಚುನಾವಣೆಗಳಲ್ಲಿ ಪ್ರಚಂಡ ವಿಜಯ ಗಳಿಸಿ ಅಧಿಕಾರಕ್ಕೇರಿದ ಆಮ್ ಆದ್ಮಿ ಪಕ್ಷದಲ್ಲಿ ಯಾಕೋ ಯಾವುದೂ ಸರಿಯಿಲ್ಲ. ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡಿರುವ ಅರವಿಂದ ಕೇಜ್ರೀವಾಲ್ ಸರ್ವಾಧಿಕಾರಿಯಂತೆ ನಡೆದುಕೊಳ್ಳುತ್ತಿದ್ದಾರೆ ಎಂದು ಅವರ ನಿಕಟವರ್ತಿಗಳು, ಪಕ್ಷದ ಹಿರಿಯ ನಾಯಕರು ಆಪಾದಿಸಿದ್ದಾರೆ. ಹಿರಿಯ ನಾಯಕರುಗಳನ್ನು ಕೇಜ್ರೀವಾಲ್ ಪಕ್ಷದಿಂದ ಹೊರ ಹಾಕಿದ್ದಾರೆ. ಈ ಪಕ್ಷ ಹೋಳಾಗಿ ಬೇರೊಂದು ಹೊಸ ಪಕ್ಷ ಹುಟ್ಟುವ ಸಾಧ್ಯತೆ ಕಾಣುತ್ತಿದೆ.

ಇದೊಂದು ಕಡೆಯಾದರೆ ಕೇಜ್ರೀವಾಲ್ ಮಾಧ್ಯಮಗಳ ಮೇಲೆ ತಿರುಗಿಬಿದ್ದಿದ್ದಾರೆ. ಭಾಜಪದಿಂದ ಸುಪಾರಿ ಪಡೆದು 'ಆಪ್' ಪಕ್ಷದ ಮೇಲೆ ಅಪಪ್ರಚಾರ ನಡೆಸುತ್ತಿವೆ ಮಾಧ್ಯಮಗಳು ಎಂದು ಗಂಭೀರವಾದ ಆಪಾದನೆ ಹೊರಿಸಿದ್ದಾರೆ. ಸ್ವಲ್ಪ ದಿನಗಳ ಹಿಂದೆಯಷ್ಟೇ ಅವರು ಮಾಧ್ಯಮಗಳ ಕಣ್ಮಣಿಯಾಗಿದ್ದರು. ಅದು ಹೋಗಲಿ. ದೆಹಲಿ ಮುಖ್ಯಮಂತ್ರಿಯಾಗಿರುವ ಕೇಜ್ರೀವಾಲ್ ಕೆಲವು ಮಾಧ್ಯಮಗಳನ್ನು ಗುರಿಯನ್ನಾಗಿ ಇರಿಸಿಕೊಂಡು ಅವುಗಳ ಮೇಲೆ ನಿರ್ಬಂಧ ಹಾಕಿ ಸುತ್ತೋಲೆ ಹೊರಡಿಸಿರುವುದು ಭಾರಿ ಕೋಲಾಹಲವುಂಟು ಮಾಡಿದೆ. ಆ ರೀತಿಯ ನಿರ್ಬಂಧ ಪತ್ರಿಕಾ ಸ್ವಾತಂತ್ರ್ಯಕ್ಕೆ ಮಾರಕ ಎನ್ನುವುದು ನಿಜ. ಈಗ ಈ ಸುತ್ತೋಲೆಯ ಪ್ರಶ್ನೆ ದೇಶದ ಸರ್ವೋಚ್ಚ ನ್ಯಾಯಾಲಯದ ಮುಂದಿದೆ. ಅಂತೂ ಕೇಜ್ರೀವಾಲ್ ಹಾಗೂ ಆಮ್ ಆದ್ಮಿ ಪಕ್ಷ ವಿವಾದಗಳ ಸುಳಿಯಲ್ಲಿವೆ. ಆತುರಗಾರನಿಗೆ ಬುದ್ಧಿಮಟ್ಟು ಎನ್ನುವುದಕ್ಕೆ ಅವರು ಮಾದರಿಯಾಗಿದ್ದಾರೆ.

* * *

ಮೋದಿ ಸರಕಾರ ಅಧಿಕಾರ ವಹಿಸಿಕೊಂಡ ಮೇಲೆ ಹಿಂದೂ ಮಹಾಸಭಾ ಎಂಬ ನಿದ್ರಿಸುತ್ತಿದ್ದ ಸಂಘಟನೆ ಎಚ್ಚೆತ್ತುಕೊಂಡು ಸಕ್ರಿಯವಾಗಿದೆ. ಸ್ವಾತಂತ್ರ್ಯಪೂರ್ವದಲ್ಲಿ ಅಸ್ತಿತ್ವಕ್ಕೆ ಬಂದ ಈ ಹಿಂದೂ ಸಂಘಟನೆ ಒಂದು ಕಾಲದಲ್ಲಿ ಶ್ಯಾಮಪ್ರಸಾದ ಮುಖರ್ಜಿ ಎನ್ನುವವರ ನಾಯಕತ್ವದಲ್ಲಿತ್ತು. ಸಾವರ್ಕರ್, ಹೆಡ್ಗೆವಾರ್ ಮೊದಲಾದ ಹಿಂದುತ್ವವಾದಿಗಳೆಲ್ಲ ಈ ಗರಡಿಯಿಂದ ಬಂದವರೆ. ಸಂಘಪರಿವಾರ ಜನಸಂಘದ ಮೂಲಕ ರಾಜಕೀಯ ಪ್ರವೇಶ ಮಾಡಿದ ಮೇಲೆ ಈ ಹಿಂದೂ ಸಂಘಟನೆ ಹಿಂದೆ ಸರಿದಿತ್ತು. ಈಗ ಮೋದಿ ಬಂದಮೇಲೆ ಮರುಜೀವ ಪಡೆದುಕೊಂಡು ಗಾಂಧಿ ಕೊಲೆ ಮಾಡಿದ ನಾತೂರಾಮ್ ಗೋಡ್ಸೆ ದೇವಸ್ಥಾನ ಕಟ್ಟಲು ಹೊರಟಿದೆ.

ಚರ್ಚುಗಳ ಮೇಲೆ, ಮಸೀದಿಗಳ ಮೇಲೆ ನಡೆಯುತ್ತಿರುವ ದಾಳಿಗಳು ಕಾನೂನು ರೀತಿಯಲ್ಲಿ ಅಕ್ರಮವಲ್ಲ, ಅದು ಯಾವ ಕಾನೂನಿನ ಉಲ್ಲಂಘನೆಯೂ ಅಲ್ಲ ಎಂದು ಹಿಂದೂ ಮಹಾಸಭಾದ ಕಾರ್ಯದರ್ಶಿ ಮುನ್ನಾಕುಮಾರ್ ಶುಕ್ಲ ಎನ್ನುವಾತ ಹೇಳಿದ್ದಾರೆ. ಈತ ಮೋದಿ ಸರಕಾರ ಚರ್ಚು ಮತ್ತು ಮಸೀದಿಗಳ ಮೇಲೆ ದಾಳಿ ನಡೆಸುವವರನ್ನು ಸನ್ಮಾನಿಸಬೇಕು ಎಂದು ಒತ್ತಾಯಪಡಿಸಿದ್ದಾರೆ. ಮುಸ್ಲಿಮ್ ಹುಡುಗಿಯನ್ನು ವಿವಾಹವಾಗುವ ಹಿಂದೂ ಯುವಕರಿಗೆ ಸರಕಾರ ಪ್ರೋತ್ಸಾಹ ನೀಡಬೇಕು ಎಂದು ಈಗ ಅಪ್ಪಣೆ ಮಾಡಿದ್ದಾರೆ. ಆ ಕಾಲವೂ ಬಂದೀತೇನೊ !

ಚರ್ಚುಗಳು ಮತ್ತು ಮಸೀದಿಗಳು ಮತಾಂತರದ ಕಾರ್ಖಾನೆಗಳು ಎಂದು ಕರೆದಿರುವ ಈತ ಬಾಯಿಗೆ ಬಂದದ್ದೇ ಮಾತಾಡುವುದರಲ್ಲಿ ನಿಸ್ಸೀಮ. ಭಾಜಪ ಸರಕಾರ ಇಂಥವರ ಮೇಲೆ ಏನೂ ಕ್ರಮ ಕೈಗೊಳ್ಳದಿರುವುದೀಗ ಸೋಜಿಗದ ಸಂಗತಿ. ಐತಿಹಾಸಿಕ ತಾಜ್‌ಮಹಲ್ ಹಿಂದೆ ಶಿವಾಲಯವಾಗಿತ್ತು ಎಂಬ ಹಳೆಯ ವಾದಕ್ಕೆ ಹಿಂದೂ ಮಹಾಸಭಾ ಮತ್ತೆ ಚಾಲನೆ ನೀಡಿದೆ. ಈಚೆಗೆ ಸಂಘಪರಿವಾರಕ್ಕೆ ಸೇರಿದ ಆರು ಮಂದಿ ವಕೀಲರು ಆಗ್ರಾದ ನ್ಯಾಯಾಲಯ ಒಂದರಲ್ಲಿ ಈ ಬಗ್ಗೆ ಮೊಕದ್ದಮೆಯನ್ನು ದಾಖಲು ಮಾಡಿದ್ದಾರೆ. ತಾಜ್‌ಮಹಲ್‌ಗೂ ಬಾಬ್ರಿ ಮಸೀದಿ ಗತಿ ಬರುವುದೇ ಎಂದು ನೋಡಬೇಕಿದೆ.

ಪ್ರಕಟಣೆ

## ಚಿಣ್ಯ ಕುಟುಂಬ ನಿಧಿ

ಕನ್ನಡದ ಹಿರಿಯ ಪತ್ರಕರ್ತ ದಿವಂಗತ ಸಿ. ವಿ. ರಾಜಗೋಪಾಲ್ ಸಾವಿರದ ಒಂಬೈನೂರ ಐವತ್ತು - ಅರವತ್ತರ ದಶಕಗಳಲ್ಲಿ 'ಪ್ರಜಾವಾಣಿ' ದಿನಪತ್ರಿಕೆಯಲ್ಲಿ ಅನೇಕ ವರ್ಷಗಳು ವರದಿಗಾರರಾಗಿ, ಮುಖ್ಯ ವರದಿಗಾರರಾಗಿ, ಸೇವೆ ಸಲ್ಲಿಸಿದವರು. ನಿವೃತ್ತರಾದ ಮೇಲೆ ಅಂಕಣಕಾರರಾಗಿ ಹಲವು ಕನ್ನಡ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದವರು. ಜನಪರ ಪುರೋಗಾಮಿ ಧೋರಣೆಗಳ ಇವರು ಕನ್ನಡ ಪತ್ರಿಕಾರಂಗದಲ್ಲಿ ತಮ್ಮದೇ ಆದ ಛಾಪು ಮೂಡಿಸಿದವರು. ಅವರ ಸ್ಮರಣಾರ್ಥ ಚಿಣ್ಯ ಕುಟುಂಬದವರು ಸ್ಥಾಪಿಸಿರುವ ನಿಧಿಯಿಂದ 'ಹೊಸತು' ಪತ್ರಿಕೆಯ ಎರಡು ಉತ್ತಮ ಲೇಖನಗಳಿಗೆ ತಲಾ ರೂ. ೫೦೦೦ ಪುರಸ್ಕಾರಗಳನ್ನು ನೀಡಲು ನಿರ್ಧರಿಸಿದ್ದಾರೆ. ಪತ್ರಿಕೆಯ ೨೦೧೪-೧೫ರ ಸಂಚಿಕೆಗಳಲ್ಲಿ ಪ್ರಕಟವಾದ (ಆಗಸ್ಟ್‌ನಿಂದ ಜುಲೈವರೆಗೆ) ಲೇಖನಗಳನ್ನು ಪರಿಶೀಲಿಸಿ ತಲಾ ರೂ. ೫೦೦೦ದಂತೆ ಎರಡು ಪುರಸ್ಕಾರಗಳನ್ನು ನೀಡಲಾಗುವುದು.

- ***ಸಂಪಾದಕ***




## ಪರಿವರ್ತನೆಯಾಗಬೇಕಿದೆ

✉ ಬಹಳಷ್ಟು ಮಾಧ್ಯಮಗಳ ನಿಲುವು ಮತ್ತು ನಂಬಿಕೆಗಳು ಓದುಗರಿಗೆ / ನೋಡುಗರಿಗೆ ಗೊಂದಲ ಮೂಡಿಸುವುದರೊಡನೆ ಪರೋಕ್ಷವಾಗಿ ಮೌಢ್ಯವನ್ನೆ ಬಿತ್ತುತ್ತಿವೆ. ಅರ್ಥಾತ್ ಮಿಥ್ಯವನ್ನೆ ಸತ್ಯವೆಂದು ಬಿಂಬಿಸುತ್ತಿವೆ. ಸೀಮಿತ ಪಂಥ ಮತ್ತು ಪಕ್ಷಗಳ ಮುಖವಾಣಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಕೆಲ ಮಾಧ್ಯಮಗಳ ಅಂತರಂಗ ಅದೆಷ್ಟೊ ಮುಗ್ಧ ಓದುಗರಿಗೆ / ನೋಡುಗರಿಗೆ ಅರ್ಥವಾಗುತ್ತಿಲ್ಲ. ಹಣದಾಸೆಗೆ ದಾರಿ ತಪ್ಪಿಸುವ ಜಾಹೀರಾತುಗಳಿಗೆ ಹೆಚ್ಚು ಸಮಯ / ಸ್ಥಳ ನೀಡುತ್ತಿರುವುದು ಬಹುದೊಡ್ಡ ದುರಂತ. ಇಂದಿನ ಬಹಳಷ್ಟು ಜಾಹೀರಾತುಗಳು, ಚೈನ್ ಸಿಸ್ಟಮ್ ಕಂಪನಿಗಳು, ಜ್ಯೋತಿಷಿಗಳು, ಪುರೋಹಿತಶಾಹಿ ಗಳು, ಶ್ವೇತ ಮತ್ತು ಕಾವಿ ಧರಿಸಿದ ಸನ್ಯಾಸಿಗಳು, ಧಾರಾವಾಹಿಗಳು, ಪುಸ್ತಕಗಳು ಪರೋಕ್ಷವಾಗಿ ನಮ್ಮೀ ಸಮಾಜದ ಸ್ವಾಸ್ಥ್ಯವನ್ನು ಸಾಕಷ್ಟು ಕಲುಷಿತಗೊಳಿಸುವುದರ ಜೊತೆಗೆ ಈ ಎಲ್ಲವುಗಳ ಮಾಲೀಕರು ಐಷಾರಾಮಿಯಾದ ಬದುಕನ್ನು ಕಟ್ಟಿಕೊಂಡಿದ್ದಾರೆ. ನಮ್ಮ ಶೋಷಿತ ಜನಸಮೂಹ ಈ ವಾಸ್ತವವನ್ನು ಅರಿಯದೆ ಮತ್ತೆ ಮತ್ತೆ ಶೋಷಣೆಗೆ ಒಳಗಾಗುತ್ತಿದ್ದಾರೆ. ವೈಜ್ಞಾನಿಕವಾಗಿ ಸಾಕಷ್ಟು ಮುಂದುವರಿದಿರುವ ಇಂದಿನ ಆಧುನಿಕ ಯುಗದಲ್ಲಿಯೂ ಕೆಲವರು ತಮ್ಮ ಕೈವಾಡಗಳನ್ನು ಪವಾಡಗಳೆಂದು ಬಿಂಬಿಸುತ್ತಿದ್ದಾರೆ.

ನಾಡಿನ ಸಂತರ, ಶರಣರ, ಪ್ರಗತಿಪರ ಚಿಂತಕರ ಬದುಕು ಬರಹಗಳನ್ನು ಮತ್ತು ಭಾಷಣ ಗಳನ್ನು ಕರಪತ್ರದ ಮೂಲಕ, ಆಂದೋಲನದ ಮೂಲಕ, ಅಥವಾ ಮನೆಯಂಗಳದಲ್ಲಿ ಮುಕ್ತ ಮಾತುಕತೆ... ಹೀಗೆ ಹಲವು ಆಯಾಮಗಳ ಮೂಲಕ ಹಿಂದುಳಿದ ಮತ್ತು ಮೌಢ್ಯದಲ್ಲಿ ಮುಳುಗಿರುವ ಸಮುದಾಯವನ್ನು ಜಾಗೃತ ಗೊಳಿಸಬೇಕಿದೆ.

*ಬಾಗಲಕೋಟ* ***ಕೆ. ಬಿ. ವೀರಲಿಂಗನಗೌಡ್ರ***

## ಆಧುನಿಕ ಸಮಾಜ ಮತ್ತು ಶರಣರ ಸಂದೇಶಗಳು...

✉ ಬಸವಣ್ಣನವರು ತಮ್ಮ ಚಳವಳಿಗೆ ಬೇಕಾದ ಸೈದ್ಧಾಂತಿಕ ಸ್ಪಷ್ಟತೆ, ಐತಿಹಾಸಿಕಪ್ರಜ್ಞೆ ಹಾಗೂ ವಸ್ತುಸ್ಥಿತಿಯ ಸಂಪೂರ್ಣ ಅರಿವುಗಳನ್ನು ಮುಕ್ತ ಮನಸ್ಸಿನಿಂದ ಯೋಚಿಸಿಕೊಂಡು ಅಷ್ಟೆ ಮುಕ್ತ ಧೈರ್ಯದಿಂದ ಮುನ್ನಡೆಯಲಾರಂಭಿ ಸಿದರು. ಸಮಾನತೆಗಾಗಿ ಸಂಘರ್ಷಕ್ಕಿಳಿದರು. ಜಾತಿವೈರುಧ್ಯಗಳೊಡನೆ ಹೋರಾಟ ನಡೆಸಿದರು. ಒಬ್ಬ ಸಾಮಾನ್ಯನಿಗೂ ಅರ್ಥವಾಗುವ ವಚನಗಳನ್ನು ಕಟ್ಟುವ ಮೂಲಕ ವಚನ ಸಾಹಿತ್ಯದ ವಿಶಾಲ ಸ್ವರೂಪಕ್ಕೆ ನಾಂದಿ ಹಾಕಿದರು. ಬದುಕುವ ಹಕ್ಕುಳ್ಳವರೆಲ್ಲರನ್ನು ಒಂದೆಡೆ ಸೇರಿಸಿ ಕೊಂಡು ಅಲ್ಲಮ ಪ್ರಭುವಿನ ಅಧ್ಯಕ್ಷತೆಯಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿ, ಆ ಮೂಲಕ ಕೆಳವರ್ಗದಿಂದ ಹಿಡಿದು ಮೇಲ್ವರ್ಗದ ಸಮಾನ ಮನಸ್ಕರೆಲ್ಲ ಅನುಭವ ಮಂಟಪದಲ್ಲಿ ಸೇರಿ ಸಭೆ, ಚರ್ಚೆ ಮತ್ತು ಬದುಕಿನ ಜಟಿಲತೆಗಳ ಬಗ್ಗೆ ಉಪನ್ಯಾಸಗಳನ್ನೇರ್ಪಡಿಸುತ್ತಿದ್ದರು. ಅನುಭವ ಮಂಟಪದ ಮೂಸೆಯಲ್ಲಿ ಪ್ರಖರ ವೈಚಾರಿಕ




ಆಂದೋಲನಕ್ಕೆ ಹೆಜ್ಜೆಯನ್ನು ಇಡುವ ವಚನಕಾರ್ತಿಯರು, ವಚನಕಾರರು ತಮ್ಮ ನಿರಾತಂಕ, ನಿರಾಭಾರ ಗಟ್ಟಿ ಬರವಣಿಗೆಯಿಂದ ಪ್ರತಿಭಟನಾ ವಚನಗಳನ್ನು ಬರೆದರು. ಗೊಗ್ಗೆವ್ವ, ಸತ್ಯಕ್ಕ, ಆಯ್ದಕ್ಕಿ ಲಕ್ಕಮ್ಮ, ಸೂಳೆ ಸಂಕವ್ವೆರಂತಹ ಹಿಂದುಳಿದ ಮಹಿಳೆಯರು ಮೌಲಿಕ ವಚನ ಗಳನ್ನು ರಚಿಸಿದರು. ಅದೇ ರೀತಿಯಾಗಿ ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ, ಮಸಣದ ಮಾರಯ್ಯ, ಅಮುಗೆ ರಾಮಯ್ಯ, ಮಡಿವಾಳ ಮಾಚಯ್ಯ, ಮಾದಾರ ದೂಳಯ್ಯ ಮುಂತಾದ ಹಿಂದುಳಿದ ಶರಣ ಜೀವಿಗಳು ಸಾಮಾಜಿಕ ವ್ಯವಸ್ಥೆಗೆ ಬಂಡಾಯದ ವಚನಗಳನ್ನು ಬರೆಯ ಲಾರಂಭಿಸಿದರು. ಬೆಕ್ಕು, ನಾಯಿ, ನರಿಗಳನ್ನು ಮುಟ್ಟಿಸಿಕೊಳ್ಳುವ ಮೇಲ್ವರ್ಗದ ಜನತೆಗೆ ಕೆಳವರ್ಗ ದವರು ಮುಟ್ಟಿದರೆ ಮೈಲಿಗೆಯಾಗುವುದೆಂದು ಸಾವಿರಾರು ವರ್ಷಗಳಿಂದ ಬೆಳೆದುಬಂದ ಅನಿಷ್ಟ ತಾರತಮ್ಯವನ್ನು ಹೋಗಲಾಡಿಸಲು ಎಲ್ಲರನ್ನೂ ಅಪ್ಪಿಕೊಂಡು, ಒಪ್ಪಿಕೊಂಡು ಸಮಾನತೆ ಸಾರಲು ದಿಟ್ಟ ಹೆಜ್ಜೆ ಇಟ್ಟರು. 'ಕಾಯಕವೇ ಕೈಲಾಸ', 'ದಯವೇ ಧರ್ಮದ ಮೂಲ' ಎಂಬ ತತ್ವವನ್ನು ಬಸವಣ್ಣನವರು ತಿಳಿಸಿಕೊಟ್ಟಿದ್ದರಿಂದ ಶರಣರೆಲ್ಲ ಬದುಕಿನ ನಿರ್ವಹಣೆಗಾಗಿ ಬೇರೆ ಬೇರೆ ಕಾಯಕ ಮಾಡುತ್ತಲೇ ಸಾಮಾಜಿಕ ಕ್ರಾಂತಿಗೆ ಜ್ವಾಲೆಯ ಕಿಡಿಯಾದರು. ಶರಣ-ಶರಣೆಯರ ಕಾಯಕ ನಿಷ್ಠೆ, ಭಕ್ತಿ, ಪ್ರಾಮಾಣಿಕತೆ ಮತ್ತು ಸಾಮಾಜಿಕ ಕಳಕಳಿಯನ್ನು ಮೆಚ್ಚಿದ ಬಸವಣ್ಣನವರು ಎಲ್ಲ ಶರಣ ಕುಲವನ್ನು ಒಂದುಗೂಡಿಸುವುದರ ಮೂಲಕ ಜಗತ್ತಿನಲ್ಲಿಯೇ ಪ್ರಥಮ ಸಾಮಾಜಿಕ ಕ್ರಾಂತಿಯ ಹರಿಕಾರರಾದರು. ಅವರ ಮನಸ್ಸು ಸದಾ ಬಡವರಿಗಾಗಿ, ದೀನ-ದಲಿತ, ದುರ್ಬಲ ರಿಗಾಗಿ ಮಿಡಿಯುತ್ತಿತ್ತು. ಜನಸೇವೆಯನ್ನು ಮಾಡುವುದು ಸಮಾಜದಲ್ಲಿ ಬಹು ಮಹತ್ವದ ಸೇವೆಯೆಂದು ಅರಿತುಕೊಂಡಿದ್ದರು. ಬಸವಣ್ಣ ನವರು ಮಾನವ ಮತ್ತು ಪ್ರಾಣಿ ಸಂಕುಲವನ್ನು ಮನಸಾರೆ ಪ್ರೀತಿಸಿದ, ಗೌರವಿಸಿದ ಮಹಾಪ್ರೇಮಿ ಗಳು. ಹಸುವನ್ನು ಕಂಡ ಕರುವಿನಂತೆ ಅವರ ಆತ್ಮ ಸಮಾಜದಲ್ಲಿ ಸಂಚರಿಸುತ್ತ, ಚಿಂತಿಸುತ್ತ ಪರಿವರ್ತನೆಗೆ ಜನತೆಯಲ್ಲಿ ಆತ್ಮಾನುಭವದ ಚೈತನ್ಯ ತುಂಬಿ ಸಾಮಾಜಿಕ ಕಲ್ಯಾಣಕ್ಕೆ ತೀವ್ರ ಕಾಳಜಿ ತೋರಿತು.

ಮಾನವ ಕುಲವೊಂದೇ ಎಂಬ ತತ್ವ ಸಾರುವುದಕ್ಕಾಗಿ ಬಸವಣ್ಣನವರು ಸಮಾಜದಲ್ಲಿನ ಕೆಳಸ್ತರದ ಶರಣರಾದ ಮಾದಾರ ಚನ್ನಯ್ಯ, ಡೋಹರ ಕಕ್ಕಯ್ಯ ಮತ್ತು ಕಿನ್ನರಿ ಬೊಮ್ಮಯ್ಯನ ವರೆಲ್ಲ ನನ್ನ ಹೆತ್ತವರು, ಸಂಬಂಧಿಕರು, ಬಂಧು-ಬಾಂಧವರು ಎಂದು ವಚನದ ಮೂಲಕ ಹೇಳುತ್ತ ಮಾನವರೆಲ್ಲ ಸಮಾನರು, ಮಾನವೀಯತೆ, ಮಾನವ ಧರ್ಮದ ಮೂಲ ತತ್ವವನ್ನು ಎತ್ತಿ ಹಿಡಿದರು. ಸಮಬಾಳು ಸಮಪಾಲಿನ ಸಂದೇಶ ಸಾರುತ್ತ ಜಾತಿ ನಿರ್ಮೂಲನೆಗೆ ವಚನ ಸಾಹಿತ್ಯದ ಮೂಲಕವೇ ಬಂಡಾಯದ ಬಾವುಟ ಹಾರಿಸಿದ ಸಾಹಸಿಗರು.

ಇಡೀ ಜಗತ್ತಿನಲ್ಲೇ ಅತ್ಯಂತ ವಿಶಿಷ್ಟ ಮತ್ತು ಬಲಿಷ್ಠ ಸಂಸ್ಕೃತಿ ಎಂಬ ಹೆಗ್ಗಳಿಕೆಗೆ ಪಾತ್ರ ವಾಗಿರುವ ಭಾರತೀಯ ಸಂಸ್ಕೃತಿಯ ಹಿರಿಮೆಗೆ ಕನ್ನಡ ನಾಡಿನ ಕೊಡುಗೆ ಹಿರಿದಾದದ್ದು. ಆದರೆ ಸ್ವಾರ್ಥವೇ ಪ್ರಧಾನವಾಗಿರುವ ಇಂದಿನ ಆಧುನಿಕ ಯುಗದಲ್ಲಿ ದೇಶಿ ಸಂಸ್ಕೃತಿ ಜಾಗತೀಕರಣದ ಪ್ರಭಾವದಿಂದ ಕವಲು ಹಾದಿಯಲ್ಲಿದೆ. ಬದುಕಿನ ಅಂಗಳದಲ್ಲಿ ಸ್ನೇಹ, ಸಹಕಾರ, ಸೌಹಾರ್ದಗಳು ಕಣ್ಮರೆಯಾಗಿವೆ. ದ್ವೇಷ, ಅಸೂಯೆಯ ಜ್ವಾಲಾಮುಖಿ ಹೊಗೆ ಕಾರುತ್ತಿದೆ. ಇಂತಹ ಸಂದಿಗ್ಧ ಸಂದರ್ಭದಲ್ಲಿಯ ಮನುಕುಲದ ಸಮಸ್ಯೆಗಳಿಗೆ

ಮೌಲಿಕ ಸಂದೇಶ ನೀಡಿದ ಶರಣರ ತತ್ವ, ಸಿದ್ಧಾಂತಗಳು ಪ್ರಸ್ತುತ ಸಮಾಜದ ಆದರ್ಶಗಳಾಗ ಬೇಕು. ಆಡಿದ ಮಾತು ಅಧ್ಯಯನದ ಜ್ಞಾನ ಆಚರಣೆಯಲ್ಲಿ ಬರಬೇಕು. ಶರಣರ ನುಡಿಗವನ ಗಳು ಮನುಷ್ಯ ಸಂಕುಲದ, ಮನುಷ್ಯತ್ವದ ಮಂತ್ರ ಗಳಾಗಬೇಕು. ಅಂದಾಗ ಮಾತ್ರ ಜಯಂತಿ, ಮಹೋತ್ಸವ ಮತ್ತು ಉತ್ಸವ ಆಚರಣೆಗಳಿಗೆ ಮಹತ್ವ ಬರುತ್ತದೆ. ಹಾಗೆಯೇ ಶರಣತ್ವದ ಮಹಾಚೇತನಗಳಿಗೆ, ಮಹಾತ್ಮರಿಗೆ, ಮಾನವತಾ ವಾದಿಗಳಿಗೆ ಗೌರವಾರ್ಥ ಕಲ್ಪಿಸಿದಂತಾಗುತ್ತದೆ.

*ಕಲಬುರಗಿ* **ಡಾ॥ ಚಿ. ಸಿ. ನಿಂಗಣ್ಣ**

### ಶಿಕ್ಷಣ ವ್ಯವಸ್ಥೆ, ಲೋಪದೋಷಗಳು

ಆಧುನಿಕ ಸಮಾಜದಲ್ಲಿ ಶಿಕ್ಷಣ ಅತ್ಯಗತ್ಯ. ಶಿಕ್ಷಣವಿಲ್ಲದ ಸಮಾಜವನ್ನು ಇಂದು ಊಹಿಸಲ ಸಾಧ್ಯ. ಶಿಕ್ಷಣವು ಮನುಷ್ಯನ ಜೀವನವನ್ನು ಬದಲಾಯಿಸುತ್ತದೆ. ಒಂದು ರಾಷ್ಟ್ರದ ನಿರ್ಮಾಣ ಮತ್ತು ಇತರ ಎಲ್ಲ ಸವಾಲುಗಳನ್ನು ಎದುರಿಸ ಬೇಕಾದರೆ ಶಿಕ್ಷಣಕ್ಕೆ ಅತ್ಯಂತ ಪ್ರಮುಖ ಸ್ಥಾನವಿದೆ. ಪ್ರಜಾಪ್ರಭುತ್ವವಾದಿ ರಾಷ್ಟ್ರದ ಮುಖ್ಯ ಲಕ್ಷಣ ವೆಂದರೆ ಬದಲಾವಣೆ. ಆ ಬದಲಾವಣೆ ಉಂಟಾಗಬೇಕಾದರೆ ಶಿಕ್ಷಣ ಅತ್ಯಗತ್ಯ. ಅಂತೂ ಕೊನೆಯ ಹತ್ತು ವರ್ಷಗಳಲ್ಲಂತೂ ಶಿಕ್ಷಣದಲ್ಲಿ ಅತೀ ವೇಗದ ಬೆಳವಣಿಗೆ ಕಂಡುಬಂದಿದೆ. ಆದರೂ ಈಗ ಈ ಶಿಕ್ಷಣ ವ್ಯವಸ್ಥೆ ಸುವ್ಯವಸ್ಥಿತ ವಾಗಿದೆ ಎಂದು ಹೇಳಲು ಸಾಧ್ಯವಿಲ್ಲ. ನಾವೊಮ್ಮೆ ಈ ಶಿಕ್ಷಣ ವ್ಯವಸ್ಥೆಯನ್ನು ಪುನರ್‌ಚಿಂತನೆಗೆ ಒಳಪಡಿಸಬೇಕಾದ ಅಗತ್ಯವಿದೆ. ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಹಲವಾರು ಲೋಪದೋಷಗಳನ್ನು ಕಾಣಬಹುದು. ನಮ್ಮ ಶಿಕ್ಷಣ ವ್ಯವಸ್ಥೆಯು ಎತ್ತ ಸಾಗುತ್ತಿದೆ? ಅದಕ್ಕಿರುವ ಪರಿಹಾರಗಳೇನು, ಎಂಬುದನ್ನು ತಿಳಿಯುವುದು ಅತ್ಯಾವಶ್ಯಕವಾಗಿದೆ.

ಶಿಕ್ಷಣ ಒಂದು ದೊಡ್ಡ ಉದ್ಯಮವಾಗಿ ಬೆಳೆ ಯುತ್ತಿರುವ ಈ ಕಾಲದಲ್ಲಿ ಕೆಲವು ಮೂಲಭೂತ ಸಮಸ್ಯೆಗಳನ್ನು ಸಹ ಎದುರಿಸುತ್ತಿದೆ. ಅವೆಂದರೆ: (೧) ವಿದ್ಯಾ ಸಂಸ್ಥೆಗಳು ವಿದ್ಯಾರ್ಥಿಗಳಿಂದ ಬೇಕಾಬಿಟ್ಟಿ ಶುಲ್ಕ ವಸೂಲಿ ಮಾಡುವುದು, (೨) ಶಿಕ್ಷಕರಿಗೆ ಸರಿಯಾಗಿ ವೇತನ / ಇತರ ಸೌಲಭ್ಯಗಳನ್ನು ನೀಡದಿರುವುದು, (೩) ಒಳ್ಳೆಯ ಫಲಿತಾಂಶ ಬರಬೇಕಾದ್ದರಿಂದ ಶಿಕ್ಷಕರ ಮೇಲೆ 'ಎಲ್ಲರನ್ನೂ' ತೇರ್ಗಡೆಗೊಳಿಸಬೇಕೆಂದು ಒತ್ತಡ ಹೇರುವುದು, (೪) ಕಡಿಮೆ ಸಂಬಳಕ್ಕೆ ಸಿಗುವ ಕಳಪೆ ಶಿಕ್ಷಕರ ನೇಮಕಾತಿ – ಇವುಗಳು ಆಧುನಿಕ ಶಿಕ್ಷಣದ ಖಾಸಗಿ ರಂಗದಲ್ಲಿರುವ ಸಮಸ್ಯೆಗಳು. ಶಿಕ್ಷಣ ಏನನ್ನು ಕಲಿಸಬಾರದಾಗಿತ್ತೊ ಅದನ್ನು ಕಲಿಸಲು ಮುಂದಾಗುತ್ತಿದೆ.

ವಾಸ್ತವಾಂಶವೆಂದರೆ, ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಶಿಕ್ಷಿತ ಯುವಕರು ತಾವು ಸಾಧಿಸು ವುದಕ್ಕಿಂತ ಕಳೆದುಕೊಳ್ಳುವುದೇ ಹೆಚ್ಚು. ಹೊಸ ಪೀಳಿಗೆಯ ಕಾಲೇಜು ವಿದ್ಯಾರ್ಥಿಗಳಲ್ಲಿ ೭೦%ಕ್ಕಿಂತ ಹೆಚ್ಚು ಮಂದಿ ವಾಣಿಜ್ಯ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದಾರೆ. ಇನ್ನು ಕೆಲವರು ವಿಜ್ಞಾನ, ಇಂಜಿನಿಯರಿಂಗ್ ವಿಭಾಗಗಳನ್ನೂ ಆಯ್ದು ಕೊಂಡಿದ್ದಾರೆ. ಇದರ ಮುಖ್ಯ ಉದ್ದೇಶ ಕೇವಲ ಸಂಪತ್ತನ್ನು ಸಾಧಿಸುವುದಾಗಿದೆ, ಅಷ್ಟೆ.

ಇಂದು ಶಿಕ್ಷಣ ಕ್ಷೇತ್ರದಲ್ಲಿ ಅಸಮಾನತೆ ಎದ್ದು ಕಾಣುತ್ತಿದೆ. ದೇಶದಲ್ಲಿ ಸಮಾನ ಶಿಕ್ಷಣ ವ್ಯವಸ್ಥೆ ಜಾರಿಗೆ ಬಂದರೆ ಮಾತ್ರ ಶಿಕ್ಷಣ ಕ್ಷೇತ್ರದಲ್ಲಿ ಸುಧಾರಣೆಯಾಗಲು ಸಾಧ್ಯ. ಸಮಾನ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೆ ತರಲು ಜನಾಂದೋಲನ ವನ್ನು ರೂಪಿಸಬೇಕು.

ಇಂಗ್ಲಿಷ್ ಮಾಧ್ಯಮ ಶಾಲೆಗಳು ನಾಯಿಕೊಡೆ ಗಳಂತೆ ತಲೆಯೆತ್ತುತ್ತಿವೆ. ಸುಮಾರು ೨ ಕೋಟಿ ಗಿಂತಲೂ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳು ಇಂಗ್ಲಿಷ್ ಮಾಧ್ಯಮಗಳಲ್ಲಿ ಕಲಿಯುತ್ತಿದ್ದಾರೆ. ನಿರ್ಗತಿಕರು ಮಾತ್ರ ತಮ್ಮ ಮಕ್ಕಳನ್ನು ಕನ್ನಡ ಮಾಧ್ಯಮದಲ್ಲಿ ಓದಲು ಕಳುಹಿಸುತ್ತಿದ್ದಾರೆ. ಅಂದ ಮೇಲೆ ಇಂಗ್ಲಿಷ್ ಮಾಧ್ಯಮಗಳಲ್ಲೂ ಕನ್ನಡವನ್ನು ಕಡ್ಡಾಯಗೊಳಿಸುವ ಸರಕಾರದ ಪ್ರಯತ್ನ ವ್ಯರ್ಥ ಸಾಹಸವಷ್ಟೆ. ಈ ಶಾಲೆಗಳನ್ನು ಮುಚ್ಚುತ್ತಿರುವ ಊರುಗಳಲ್ಲಿ ಮಕ್ಕಳೇ ಇಲ್ಲವೆ? ಇದ್ದರೆ ಕಲಿಕೆಗಾಗಿ ಹೋಗುತ್ತಿರುವುದಾದರೂ ಎಲ್ಲಿಗೆ? ಅವರೇಕೆ ಉಚಿತ ಶಿಕ್ಷಣದ ಬಹು ಸೌಲಭ್ಯಗಳನ್ನುಳ್ಳ ಸರಕಾರಿ ಶಾಲೆಗಳಿಗೆ ಬರುವುದಿಲ್ಲ? ಈ ಕುರಿತಾಗಿ ಅಧ್ಯಯನ ನಡೆಸಲಾಗಿದೆಯೇ? ನಡೆಸಿದ್ದರೆ ಅದರ ಫಲಿತಾಂಶಗಳೇನು? ಪರಿಹಾರವಾಗಿ ಕೈಗೊಂಡ ಕ್ರಮಗಳೇನು? ಈ ಕುರಿತು ಅಧ್ಯಯನವನ್ನು ನಡೆಸದೆ ಏಕಾಏಕಿಯಾಗಿ ಶಾಲೆಗಳನ್ನು ಮುಚ್ಚುವುದು ಸರಿಯೇ? ಇಲ್ಲಿ ಮುಖ್ಯವಾಗಿ ಇರುವ ಪ್ರಶ್ನೆಯೆಂದರೆ ಊರಿನಲ್ಲಿ ಮಕ್ಕಳಿದ್ದು, ಅವರು ಸರಕಾರಿ ಶಾಲೆಗಳಿಗೆ ಬರುತ್ತಿಲ್ಲ ಎಂದಾದರೆ, ಅರ್ಥಾತ್ ಅವರು ಆಂಗ್ಲ ಮಾಧ್ಯಮ ಶಾಲೆಗಳಿಗೆ ಹೋಗುತ್ತಿದ್ದರೆ ಆ ಊರಿನ ಶಾಲೆಯ ನ್ಯೂನತೆಯನ್ನು ಸರಿಪಡಿಸಿ ಸರಕಾರಿ ಶಾಲೆಯ ಆಕರ್ಷಣೆಯನ್ನು ಹೆಚ್ಚಿಸಬೇಕಾದುದು ಸರಕಾರದ ಕರ್ತವ್ಯ. ಅದರ ಬದಲು ಯಾವ ಅಧ್ಯಯನವನ್ನೂ ನಡೆಸದೆ ಏಕಾಏಕಿಯಾಗಿ ಶಾಲೆಗಳನ್ನು ಮುಚ್ಚುವುದು ತಿಳಿಗೇಡಿಗಳ ಯೋಚನೆಯಾಗಿದೆ.

*ಪಾಣೆಮಂಗಳೂರು* **ನೌಫಲ್ ಎಂ. ಕೆ.**

### ಹೊಸದೊಂದು ಅನುಭಾವ

ಏಪ್ರಿಲ್ ಸಂಚಿಕೆಯಲ್ಲಿ ಮೈಸೂರು ಸ್ಯಾಂಡಲ್ ಕಾರ್ಖಾನೆಯನ್ನು ಸ್ಥಳಾಂತರಿಸುವ ರಾಜಕೀಯ ಹುನ್ನಾರ – ಅಲ್ಲಲ್ಲಿ ನಡೆಯುತ್ತಿರುವ ಹಿಂದೂ ಸಮಾಜೋತ್ಸವವನ್ನು ಅಬ್ಬರದ ಪ್ರಚಾರಗಳೇ ಮುಂತಾದವುಗಳೆಡೆಗೆ ಗಮನ ಸೆಳೆದಿರುವುದು ಸೂಕ್ತವಾಗಿದೆ. "ನಾಪಾಸ್" ಯೋಜನೆ – ಮುಂತಾದವುಗಳೆಡೆಗೆ ಬೆಳಕು ಹಾಯಿಸಿದ್ದಾರೆ.

ಮೈಸೂರು ಸುಗಂಧ ಎಂದು ಪ್ರಪಂಚದಾದ್ಯಂತ ಮನೆಮಾತಾಗಿರುವ ಗಂಧದೆಣ್ಣೆಯ ಉಗಮ ಹಾಗೂ ಕಾರ್ಯಭಾರದ ಕುರಿತಾಗಿ ಸಸ್ಯವಿಜ್ಞಾನಿ ಡಾ॥ ಎಚ್. ಎಸ್. ಅನಂತಪದ್ಮನಾಭ ಅವರನ್ನು ಸಂದರ್ಶಿಸಿ ಶ್ರೀಗಂಧದ ಕೃಷಿ ಲಾಭದಾಯಕವೇ ಹೇಗೆ ಎಂಬ ಬಗ್ಗೆ ಭಟ್ಟಿಯಿಳಿಸಿ ಓದುಗರನ್ನು ಸೆರೆ ಹಿಡಿದಿರುವವರು. ಸಚಿತ್ರವಾಗಿ ಅಷ್ಟೇ ವಿವರಣಾತ್ಮಕ ವಾಗಿ ಮೂಡಿಬಂದ ಈ ಲೇಖನ ಚೆನ್ನಾಗಿದೆ.

* * *

'ಕಾಡಂಚಿನ ಕಲಾವಿದ ವೀರಣ್ಣ' ಎನ್ನುವ ಕಲಾವಿದರೊಬ್ಬರ ವಿವರಣೆ (ಪರ್ವತಗೌಡ) ನನ್ನ ಮನವನ್ನು ಸೆಳೆಯಲು ನಾನೊಬ್ಬ ಕಲಾವಿದನಾಗಿ ರುವುದು. ಆದರೆ 'ಹೊಸತು'ವಿನ ಮೇ ಸಂಚಿಕೆಯ ಹೊರ ಆವರಣದಲ್ಲಿ ಮೂಡಿಬಂದ ಈ ಪ್ರಾಕೃತಿಕ ಪ್ರೇಮಿಯ ವಿಸ್ಮಯತೆ ಮೂಡಿಸುವ ಕಲಾ ಪ್ರೌಢಿಮೆಯನ್ನು ಮೆಚ್ಚದೆ ಇರುವುದು ಸಾಧ್ಯ ಎನ್ನುವುದು ಹೊಗಳಿಕೆ ಎಂದು ಎಣಿಸದಿರಿ.

ಒಳಾವರಣದಲ್ಲಿ ಒಂದಕ್ಕಿಂತ ಒಂದು ನಾ ಮೇಲೆ, ತಾ ಮೇಲೆ ಎಂಬಂತೆ ಪೈಪೋಟಿ ನಡೆಸುತ್ತಿರುವ ಬರಹಗಳಿವೆ. ೯೩ರಲ್ಲೂ ಅಭಿನಯಿಸುವ ಹಂಬಲ ಎನ್ನುವ ಸಂದರ್ಶನ ನಂದಕಿಶೋರ ಎಮ್. ಪಿ. ಹಾಗೂ ಎಸ್. ಸುರೇಂದ್ರ ಅವರಿಂದ ವಿಶಿಷ್ಟ ರೀತಿಯಲ್ಲಿ ಮೂಡಿಬಂದಿದೆ. ಕಲಾಜಗತ್ತಿನ ಹಿಂದು– ಮುಂದುಗಳನ್ನು, ಒಳಿತುಕೆಡಕುಗಳನ್ನು ಒಂದೊಂದಾಗಿ ಎಳೆದೆಳೆದು ವಿವರಿಸುವುದಲ್ಲದೆ, ರಂಗಭೂಮಿಯಲ್ಲಿ ಹೆಸರಾಂತ ಸಿನಿಮಾವೊಂದರ ಹಾಡುಗಾರ್ತಿ ಯಾಗಿಯೂ ಪದ್ಮಾದೇವಿಯವರು ಮೆರೆದುದನ್ನು ನೆನೆಸಿಕೊಟ್ಟು ಕಲಾ ಪ್ರೇಮಿಗಳಿಗೆ ಆಸಕ್ತಿ ಹುಟ್ಟಿಸಿದೆ.

'ಮನೆ ಬೇಕಾಗಿದೆ' ಎಂಬ ತಿಂಗಳ ಕತೆ ಚೆನ್ನಾಗಿದೆ. ಶೋಭಾ ಪ್ರಮೋದ್ ಅವರ ಕಿರು ಕವನಗಳು ಇನ್ನಷ್ಟು ಇರಬಾರದಿತ್ತೇ ಎನ್ನಿಸಿತು.

*ಕಾಸರಗೋಡು* **ಕೀರಿಕ್ಕಾಡು ವನಮಾಲಾ ಕೇಶವಭಟ್ಟ**

### ಅಭಿನಂದನೆಗಳು

ಅನಕೃ ನಿರ್ಮಾಣ್ ಪ್ರತಿಷ್ಠಾನದ ವತಿಯಿಂದ ನೀಡಲಾಗುವ ೨೦೧೩ನೇ ಸಾಲಿನ 'ಅನಕೃ ನಿರ್ಮಾಣ್ ಸ್ವರ್ಣ ಪ್ರಶಸ್ತಿ'ಗೆ ಕವಿ ಎಚ್. ಎಸ್. ವೆಂಕಟೇಶಮೂರ್ತಿ, ಸಾಹಿತಿ ಬರಗೂರು ರಾಮಚಂದ್ರಪ್ಪ ಮತ್ತು ವಿಮರ್ಶಕ ನರಹಳ್ಳಿ ಬಾಲಸುಬ್ರಮಣ್ಯ ಅವರನ್ನು ಆಯ್ಕೆ ಮಾಡಲಾಗಿದೆ. ಇವರೆಲ್ಲರಿಗೂ 'ಹೊಸತು' ಹಾಗೂ 'ನವಕರ್ನಾಟಕ' ಬಳಗದಿಂದ ಹಾರ್ದಿಕ ಅಭಿನಂದನೆಗಳು.

# ಕ್ಷ - ಕಿರಣ

- ಸಾನ್ವಿ ಪಿ.




ಕಾಂಗ್ರೆಸ್ ಮುಕ್ತ ಭಾರತ ನನ್ನ ಗುರಿ
– ಮೋದಿ
BJP ಮುಕ್ತ ಕರ್ನಾಟಕ ನನ್ನ ಕನಸು
– ಸಿದ್ಧರಾಮಯ್ಯ



ಕಾಂಗ್ರೆಸ್ BJP ಗೆ ಜಯವಾಗಲಿ



# ಜೈತಾಪುರದಲ್ಲಿ ಪರಮಾಣು ವಿದ್ಯುತ್ ಸ್ಥಾವರ

**ಜಿ. ರಾಮಕೃಷ್ಣ**

ಆಂಧ್ರಪ್ರದೇಶದ ಗಡಚಿರೋಲಿ ಪ್ರದೇಶದ ಹಳ್ಳಿಗಳಲ್ಲಿ ಅಭಿವೃದ್ಧಿಯ ನೆಪದಲ್ಲಿ ರೈತರ ಭೂಮಿಯನ್ನು ಕಸಿದುಕೊಳ್ಳಲು ಸರ್ಕಾರವು ಮುಂದಾದಾಗ ಹೋರಾಟಕ್ಕಿಳಿದ ಹಳ್ಳಿಗಳಲ್ಲಿ ಕೇಳಿಬರುವ ಘೋಷಣೆ ಇದು : "ಹೈದರಾಬಾದು ಮತ್ತು ದೆಹಲಿಯಲ್ಲಿ ಇರುವುವು ನಮ್ಮ ಸರ್ಕಾರ, ಆದರೆ ನಮ್ಮ ಹಳ್ಳಿಯಲ್ಲಿ ನಾವೇ ಸರ್ಕಾರ." ನಿಜವಾದ ಪ್ರಜಾಪ್ರಭುತ್ವದಲ್ಲಿ ಇರಬೇಕಾದ ಕ್ರಮ ಇದು. ನಮ್ಮಿಂದ ಆಯ್ಕೆಗೊಂಡ ಸರ್ಕಾರಗಳು ನಮ್ಮೂರಿನ ವ್ಯವಹಾರಗಳಿಗೆ ಕೈಹಾಕುವಾಗ ನಮ್ಮನ್ನು ಕೇಳಿ ಮತ್ತು ನಮ್ಮ ಅನುಮತಿ ಪಡೆದು ಮುಂದುವರಿಯಬೇಕು. ಏಕಪಕ್ಷೀಯವಾಗಿ ತೀರ್ಮಾನ ಕೈಗೊಂಡು ನಮ್ಮ ನೆಲ, ನೀರು, ತೋಪು, ಯಾವುದನ್ನೂ ನಮ್ಮಿಂದ ಕಿತ್ತುಕೊಳ್ಳಕೂಡದು. ಊರಿನವರನ್ನು ಕೇಳದೆಯೇ ಊರನ್ನು 'ಅಭಿವೃದ್ಧಿ' ಗೊಳಿಸುವುದು ಎಂಬುದು ಊರಿನ ಲೂಟಿಯಾಗುತ್ತದೆ ಮತ್ತು ನಿಜಾರ್ಥದಲ್ಲಿ ಅದು ಅಲ್ಲಿಯ ಜನರ ಅಭಿವೃದ್ಧಿಯಾಗಿರುವುದಿಲ್ಲ. ಅವರ ಪಾಲ್ಗೊಳ್ಳುವಿಕೆಯನ್ನು ತಡೆಹಿಡಿಯಲಾಗಿದೆಯೆಂದರೆ ಅದರ ಹಿಂದೆ ಎಂಥದೋ ದುಷ್ಟ ಹುನ್ನಾರವಿರುವ ಸಾಧ್ಯತೆಯೇ ಹೆಚ್ಚು. ಮಹಾರಾಷ್ಟ್ರದ ರತ್ನಾಗಿರಿ ಜಿಲ್ಲೆಯ ಜೈತಾಪುರದ ಬಳಿ ಸಮುದ್ರತೀರದಲ್ಲಿರುವ ಮಾಡಬನ್ ಎಂಬ ಊರಿನ ಇಂದಿನ ಸನ್ನಿವೇಶ ಅಂಥದು. ಕೊಂಕಣ ಪ್ರದೇಶದ ರತ್ನಾಗಿರಿಯಿಂದ ಜೈತಾಪುರಕ್ಕೆ ಸುಮಾರು ೫೦ ಕಿಲೋಮೀಟರ್ ದೂರ, ಮತ್ತು ಅಲ್ಲಿಂದ ಮಾಡಬನ್‌ಗೆ ಸುಮಾರು ೫ ಕಿಲೋಮೀಟರ್ ದೂರ. ಈಗಾಗಲೆ ಹತ್ತು ವರ್ಷಗಳಿಂದ ಆ ಊರು ತಲ್ಲಣದ ಜೀವನ ನಡೆಸುತ್ತಿದೆ.

ಇತ್ತೀಚೆಗೆ ಪ್ರಧಾನಿ ಮೋದಿ ಫ್ರಾನ್ಸ್ ದೇಶಕ್ಕೆ ಭೇಟಿ ನೀಡಿದಾಗ ಅರೇವ ಎಂಬ ಒಂದು ಕಂಪನಿಗೆ ಮರುಹುಟ್ಟು ನೀಡುವಂತಹ ಒಂದು ಒಪ್ಪಂದದ ಬಗೆಗೆ ಚರ್ಚೆ ನಡೆಸಿದರು. ಈ ಕಂಪನಿಯು ತನ್ನ ಕುಟುಕು ಜೀವಕ್ಕೆ ಒಂದಷ್ಟು ಶುದ್ಧ ಆಮ್ಲಜನಕ ತುಂಬಿಸಿಕೊಂಡು ಸಾವಿನಂಚಿನಿಂದ ಹೊರಬರಬೇಕೆಂಬ ಉದ್ದೇಶವನ್ನು ಹೊಂದಿದೆ. ಆ ಉದ್ದೇಶದ ಪೂರೈಕೆಗೆ ಈಗ ಜೈತಾಪುರ ತನ್ನ ಅಸುವನ್ನು ನೀಗಿಕೊಳ್ಳಬೇಕಾಗುವ ಪ್ರಸಂಗ ನಮ್ಮ ಮುಂದಿದೆ. ಪರಮಾಣು ವಿದ್ಯುತ್ ಸ್ಥಾವರಗಳನ್ನು ನಿರ್ಮಿಸುವುದು ಅರೇವಾದ ಉದ್ಯಮ, ಆದರೆ ಫ್ರಾನ್ಸಿನಲ್ಲಿ ಆ ಉದ್ಯಮಕ್ಕೆ ಗಿರಾಕಿಗಳಿಲ್ಲ. ಏಕೆಂದರೆ, ಅಂತಹ ಸ್ಥಾವರಗಳು ತನಗೆ ಸಾಕೆಂದು ಆ ದೇಶ ತೀರ್ಮಾನಿಸಿದೆ. ತನ್ನ ಒಟ್ಟು ವಿದ್ಯುತ್ ಬೇಡಿಕೆಯ ಶೇ. ೭೦ರಷ್ಟನ್ನು ಫ್ರಾನ್ಸ್ ಪರಮಾಣು ಸ್ಥಾವರಗಳಿಂದ ಪಡೆದುಕೊಳ್ಳುತ್ತದೆ. ಅಂತಹ ಸ್ಥಾವರಗಳನ್ನು ಹೆಚ್ಚಿಸಿಕೊಳ್ಳುವುದು ಆ ದೇಶಕ್ಕೆ ಬೇಕಿಲ್ಲ. ವಿಶ್ವದ ಬೇರೆ ದೇಶಗಳತ್ತ ಕಣ್ಣು ಹಾಯಿಸಿದಾಗ ಮೊದಲು ಕಾಣಿಸಿದ್ದು ನಮ್ಮ ದೇಶ. ಇಲ್ಲಿ ಸ್ಥಾವರದ ನಿರ್ಮಾಣಕ್ಕೆ ಅವಕಾಶ ದೊರೆತರೆ ಅರೇವ ಮರುಜೀವ ಪಡೆಯುತ್ತದೆ. ಅರೇವ ಉಳಿಯಲು ತಾವೇಕೆ ತಮ್ಮ ಜೀವಗಳನ್ನು ಬಲಿ ಕೊಡಬೇಕೆಂಬುದು ಅಣು ಊರ್ಜಾ ಯೋಜನೆ ಅಥವಾ ಅಣು ಊರ್ಜಾ ಪ್ರಕಲ್ಪ ಪದ್ಧತಿಯ ವಿರುದ್ಧ ದನಿಯೆತ್ತಿರುವ ಕೊಂಕಣ ಹೋರಾಟ ಸಮಿತಿಯ ಪ್ರಶ್ನೆ. ಕನಕವಲಿಯ ಮಹೇಂದ್ರ ನಾಟೇಕರ್ ಅದರ ಅಧ್ಯಕ್ಷರು ಮತ್ತು ಜೈತಾಪುರದ ಬಳಿಯ ನೇಟೇ ಎಂಬ ಗ್ರಾಮದ ಅಮ್ಜದ್‌ಭಾಯಿ ಬೋರ್ಕರ್ ಅದರ ಒಬ್ಬ ಕಾರ್ಯಕರ್ತ. ಇದೇ ಫೆಬ್ರವರಿ ೨೧ರಂದು ಶ್ರೀಪ್ರಕಾಶ್ ಅಧಿಕಾರಿ ಮತ್ತು ನಾನು ಜೈತಾಪುರ ಮತ್ತು ನೇಟೇಗಳಿಗೆ ಹೋಗಿ ಅಲ್ಲಿಯ ಹೋರಾಟಗಾರರನ್ನು ಭೇಟಿ ಆಗಿದ್ದೆವು. ಪ್ರಧಾನಿಯವರು ಅರೇವಾ ಕಂಪನಿಯು ಸ್ಥಾಪಿಸಲಿಚ್ಛಿಸುವ ಸ್ಥಾವರದ ಬಗ್ಗೆ ಫ್ರಾನ್ಸಿನ ಅಧ್ಯಕ್ಷರೊಂದಿಗೆ ಮಾತುಕತೆ ನಡೆಸಿದ್ದಾರೆ, ಆದರೆ ಅಂತಿಮ ಒಪ್ಪಂದಗಳಿಗೆ ಇನ್ನೂ ಸಹಿ ಹಾಕಿಲ್ಲ. ಆದರೆ ಮಾಡಬನ್ ಗ್ರಾಮವು ಈಗಾಗಲೆ ಇಲ್ಲವಾಗಿದೆ. ನೂರಾರು ಎಕರೆ ಜಮೀನಿಗೆ ಬಲವಾದ ಕಾಂಪೌಂಡು, ಮುಳ್ಳು ಬೇಲಿ, ಸೆಕ್ಯುರಿಟಿ,

5/26/2011

ಎಲ್ಲಾ ಹಾಕಿದ್ದಾರೆ. ದೊಡ್ಡ ಗೇಟಿನ ಎದುರು ನಿಂತರೆ 'ಇಲ್ಲಿ ನಿಲ್ಲಬೇಡಿ, ದೂರ ಹೋಗಿ' ಎನ್ನುವ ರಕ್ಷಣಾ ದಳದವರಿದ್ದಾರೆ. ಛಾಯಾಚಿತ್ರ ತೆಗೆಯಕೂಡದೆಂದು ಆಜ್ಞಾಪಿಸುತ್ತಾರೆ ಕೂಡ. ಅಂತಹ ಸೂಚನಾಫಲಕ ಏನೂ ಇಲ್ಲವಲ್ಲ ಎಂದು ತಕರಾರೆತ್ತಿದರೆ 'ಅದೆಲ್ಲಾ ನಮಗೆ ಗೊತ್ತಿಲ್ಲ, ಬೇಕಾದರೆ ರತ್ನಾಗಿರಿಯಲ್ಲಿರುವ ಕಚೇರಿಗೆ ಹೋಗಿ ಕೇಳಿ' ಎನ್ನುತ್ತಾರೆ. ಒಳಗಡೆ ಬಿರುಸಿನಿಂದ ಕೆಲಸ ನಡೆಯುತ್ತಿದೆ, ಟ್ರಕ್ಕುಗಳು ಹತ್ತಾರು ಹೋಗಿ – ಬಂದು ಮಾಡುತ್ತಿವೆ. ಕಳೆದ ವರ್ಷ ನೇಟೇ ಮತ್ತು ಜೈತಾಪುರದ ಜನ ಪ್ರತಿಭಟನೆ ನಡೆಸಿದಾಗ ಗುಂಡು ಹಾರಿಸಲಾಯಿತು, ಒಬ್ಬ ಮೀನುಗಾರ ಪ್ರಾಣ ಕಳೆದುಕೊಂಡ. ಈಚೆಗೆ ಮಾರ್ಚ್ ಮೂರನೆಯ ವಾರದಲ್ಲಿ ಜೈತಾಪುರದಲ್ಲಿ ಮತ್ತೆ ಪ್ರತಿಭಟನೆಯನ್ನು ಆಯೋಜಿಸಲಾಗಿತ್ತು, ಪ್ರತಿಭಟನಾಕಾರರನ್ನು ಅಣು ಸ್ಥಾವರ ನಿರ್ಮಾಣವಾಗುವ ಜಾಗದ ಕಾಂಪೌಂಡಿನ ಬಳಿಗೆ ಹೋಗಲು ಸಹ ಬಿಡಲಿಲ್ಲ. ೨೦೧೦ರಿಂದ ಹೋರಾಟವು ಜಾರಿಯಲ್ಲಿದೆ, ಆದರೆ ಕಳೆದ ವರ್ಷದಿಂದ ಅದು ಉಗ್ರರೂಪ ಪಡೆದಿದೆ. ಅಲ್ಲಿ ಯಾರೊಡನೆ ಮಾತನಾಡಿದರೂ ಕೈಗಾದ ಅಣುಸ್ಥಾವರದ ಬಗ್ಗೆ ಹೇಳುತ್ತಾರೆ ಮತ್ತು ಎಲ್ಲ ನಾಯಕರೂ ಶಿವರಾಮ ಕಾರಂತರು ಕೈಗಾ ವಿರುದ್ಧ ನೀಡಿದ್ದ ನಾಯಕತ್ವವನ್ನು ನೆನೆಯುತ್ತಾರೆ.

"ಭಾರತೀಯ ಪರ್ಯಾವರಣ ಚಳುವಳಿ" ಎಂಬ ಸಂಸ್ಥೆಯು ಗಿರೀಶ್ ರಾವುತ್ ಎಂಬ ವಕೀಲರ ನೇತೃತ್ವದಲ್ಲಿ "ಅಮಾನುಷ ಅಣು ಊರ್ಜೆ ಬೇಡ", ಮತ್ತು "ಜೈತಾಪುರದ ಅಣು ಊರ್ಜಾ ಪ್ರಕಲ್ಪವನ್ನು ರದ್ದುಗೊಳಿಸಿ" ಎಂಬ ಘೋಷಣೆಯೊಂದಿಗೆ ಹೋರಾಟ ಕ್ಕಿಳಿದಿದೆ. ನಿವೃತ್ತ ನ್ಯಾಯಮೂರ್ತಿ ಪಿ. ಬಿ. ಸಾವಂತ್, ಸರ್ಕಾರಿ ನೌಕರರ ಸಂಘದ ನಾಯಕ ಆರ್. ಜಿ. ಕಾರ್ಣಿಕ್, ಮುಂಬಯಿ ಉಚ್ಚ ನ್ಯಾಯಾಲಯದ ಮಾಜಿ ನ್ಯಾಯಮೂರ್ತಿ ಬಿ. ಜಿ. ಕೊಳ್‌ಸೇ ಪಾಟೀಲ್, ಅಡ್ಮಿರಲ್ ರಾಮದಾಸ್, ಅಣು ವೈದ್ಯಕೀಯ ತಜ್ಞ ಡಾ॥ ಸಂಘಮಿತ್ರಾ ಗಾಡೇಕರ್, ಭೂಕಂಪತಜ್ಞ ಡಾ॥ ಎಂ. ಕೆ. ಪ್ರಭು, ಸಾಗರ ಜೀವಶಾಸ್ತ್ರ ತಜ್ಞ ಡಾ॥ ಶಶಿ ಮೆನನ್, ಮಾಡಬನ್‌ನ ಸರಪಂಚ್ ಭಿಕಾಜಿ ವಾಗ್ಧರೆ ಮುಂತಾದ ನೂರಾರು ಮಂದಿ ಹೋರಾಟದ ಜೊತೆ ಕೈಜೋಡಿಸಿದ್ದಾರೆ. ಸರ್ಕಾರಗಳ ಪ್ರತಿಕ್ರಿಯೆ ನಿರಾಶಾದಾಯಕವಾಗಿದೆ ಎಂದು ಅವರೆಲ್ಲಾ ಟೀಕಿಸಿದ ಹಿನ್ನೆಲೆಯಲ್ಲಿ ಮಹಾರಾಷ್ಟ್ರದ ಮುಖ್ಯಮಂತ್ರಿ ಫಡ್ನವೀಸ್ 'ಜೈತಾಪುರ ಯೋಜನೆಯನ್ನು ಕೈಬಿಡಲಾಗದು' ಎಂಬ ಹೇಳಿಕೆಯನ್ನು ಇತ್ತೀಚೆಗೆ ಪುನರುಚ್ಚರಿಸಿದ್ದಾರೆ. ಮೋದಿ ಅವರ 'ಮೇಕ್ ಇನ್ ಇಂಡಿಯಾ' ಕರೆಗೆ ವಿದೇಶಿ ಬಂಡವಾಳಿಗರು ಸ್ಪಂದಿಸ ಬೇಕಾದರೆ ಜೈತಾಪುರದ ಪರಮಾಣು ಸ್ಥಾವರವನ್ನು ರದ್ದುಗೊಳಿಸಲು ಸಾಧ್ಯವಿಲ್ಲ ಎಂಬುದು ಅವರ ನಿಲುವು. ದೇಶದ ಜನರ ಜೀವಕ್ಕೆ ಕೊಳ್ಳಿ ಇಟ್ಟರೂ ಪರವಾಗಿಲ್ಲ, ವಿದೇಶಿ ಬಂಡವಾಳ ಬರಬೇಕು ಎಂಬ ತವಕಕ್ಕೆ ಏನರ್ಥವಿದೆಯೋ ತಿಳಿಯದು.

ಹೋರಾಟ ಸಮಿತಿಯು ಹೊರಡಿಸಿರುವ ಕರಪತ್ರದಲ್ಲಿ ಶ್ರೀ. ಶಿವರಾಯ, ಅರ್ಥಾತ್ ಶಿವಾಜಿಯ ಮೂರು ಆಜ್ಞೆಗಳನ್ನು ಉದ್ಧರಿಸಲಾಗಿದೆ. ಕಾಡು, ನದಿ, ಕೆರೆ, ಹೊಳೆ, ಮುಂತಾದುವನ್ನು ಯಾವುದೇ ಕಾರಣಕ್ಕೂ ನಾಶಗೊಳಿಸಕೂಡದೆಂಬುದು ಆಜ್ಞೆಯ ಸಾರಾಂಶ. "ಉರುವಲಿಗಾಗಿ ಕಾಡಿನ ಕಟ್ಟಿಗೆ ಬೇಕಾಗಬಹುದು, ಅದನ್ನು ಶೇಖರಿಸುವಾಗ ಕಾಡಿನಲ್ಲಿರುವ ಸಾಗುವಾನಿ ಮುಂತಾದ ಮರಗಳನ್ನು ಸರ್ಕಾರದ ಅನುಮತಿ ಪಡೆಯದೆ ಕಡವಕೂಡದು. ಅಂಥವನ್ನು ಉಳಿದು ಬೇರೇನನ್ನಾದರೂ ತರಬೇಕಾದರೆ ನಿಗದಿಯಾದ ಹಣವನ್ನು ಪಾವತಿಸಬೇಕು. ಮಾವು, ಹಲಸು, ಮುಂತಾದವು ಸಹ ಉರುವಲಾಗಲು ಸಾಧ್ಯ, ಆದರೆ ಅವಕ್ಕೆ ಯಾರೂ ಕೈಹಾಕಕೂಡದು; ಏಕೆಂದರೆ, ಅವು ಒಂದೆರಡು ವರ್ಷಗಳಲ್ಲಿ ಬೆಳೆದು ನಿಲ್ಲುವಂಥವಲ್ಲ. ರೈತರು ಹಲವು ವರ್ಷ ಅವನ್ನು ಕಾಪಾಡಿ ಬೆಳೆಸಿರುತ್ತಾರೆ. ಅವರಿಗೆ ದುಃಖ ಉಂಟುಮಾಡುವುದು ತರವಲ್ಲ. ಅವನ್ನು ಕಡಹುವುದು ಪ್ರಜಾಪೀಡನೆಗೆ ಸಮವಾದ್ದು, ಅಲ್ಲದೆ ಅಂತಹ ಮರಗಳಿಲ್ಲವಾಗುವುದು ಪರಿಸರಕ್ಕೂ ಹಾನಿಯೇ ಆಗುತ್ತದೆ. ಅಂತಹ ಮರಗಳು ಜೀರ್ಣಾವಸ್ಥೆಯನ್ನು ಮುಟ್ಟಿದ್ದರೆ ರೈತರ ಅನುಮತಿ ಪಡೆದು ಅವನ್ನು ಖರೀದಿಸಲು ಅಡ್ಡಿಯಿಲ್ಲ." ಶಿವಾಜಿಯ ಹೆಸರನ್ನು ಮುಂದುಮಾಡಿ ಆಳ್ವಿಕೆ ನಡೆಸುವ ಇಂದಿನ ಸರ್ಕಾರದ ಪ್ರಭುಗಳಿಗೆ ಶಿವರಾಯನ ಮಾತಿಗೆ ಲಕ್ಷ್ಯ ಕೊಡಬೇಕೆಂಬ ಭಾವನೆ ಇಲ್ಲ. ಶಿವರಾಯನ ಇನ್ನೊಂದು ಉದ್ಧೃತ ಭಾಗವು "ಪರದೇಶೀ ವ್ಯಾಪಾರಿಗಳೊಡನೆ ವ್ಯವಹರಿಸು ವಾಗಿನ ನೀತಿ" ಎಂಬುದಾಗಿದೆ. ಅದರಲ್ಲಿ ಸ್ಪಷ್ಟೋಕ್ತಿ ಹೀಗಿದೆ: "ಅಂಥವರಿಗೆ ಬಂದುಹೋಗುವುದಕ್ಕಷ್ಟೇ ಅನುಮತಿ ನೀಡಬೇಕು. ಯಾವುದೇ ಕಾರಣಕ್ಕೂ ಅವರಿಗೆ ನಿಯಮಿತ ಜಾಗವನ್ನು ಕೊಡಕೂಡದು. ಕೋಟೆ ಕೊತ್ತಲಗಳ ಬಳಿಗೆ ಅವರಿಗೆ ಸರ್ವಥಾ ಪ್ರವೇಶ ಕೂಡದು. ಹಾಗೇನಾದರೂ ಜಾಗವನ್ನು ಕೊಟ್ಟರೂ ಸಹ ಅದು ಸಮುದ್ರತೀರದ ಅಥವಾ ಕೊಲ್ಲಿ ಪ್ರದೇಶದಲ್ಲಿನ ಜಾಗವಾಗಿರಕೂಡದು. ಆಯಕಟ್ಟಿನ ಪ್ರದೇಶ ಒಮ್ಮೆ ದೊರೆತರೆ ಅವರು ತಮ್ಮದೇ ಕೋಠಿ ಕಟ್ಟಿಕೊಂಡು ಮದ್ದು, ಗುಂಡು, ಬಂದೂಕ ಶೇಖರಿಸಿಕೊಳ್ಳುತ್ತಾರೆ. ಹೀಗೆ ಅವರು ಪ್ರಬಲರಾದರೆ ನಮ್ಮ ಪ್ರದೇಶವು ನಮ್ಮ ಕೈಬಿಟ್ಟಿತೆಂದೇ ಅರ್ಥ." ಶಿವಾಜಿಯ ಈ ಮಾತುಗಳು ಟಿಪ್ಪೂಸುಲ್ತಾನನು ಹೊರಡಿಸಿದ್ದ ಇಂಥವೇ ಆಜ್ಞೆಗಳನ್ನು ನೆನಪಿಸುತ್ತವೆ. ಶಿವಾಜಿಯೇ ಬೇಡವಾದವರಿಗೆ ಇನ್ನು ಟಿಪ್ಪೂಸುಲ್ತಾನನ ಮಾತೇಕೆ ಬೇಕು. ಅವರಿಬ್ಬರೂ ಪರದೇಶಿಗಳ ವಿರುದ್ಧ ಟೊಂಕಕಟ್ಟಿ ನಿಂತವರು. ಅವರ ಪರಂಪರೆಗೆ ಸೇರಿದ ಇಂದಿನ ನಾವು ಪರದೇಶಿಗಳಿಗೆ ಎಲ್ಲದರಲ್ಲೂ ಆದ್ಯತೆ ನೀಡಹೊರಟಿದ್ದೇವೆ. ಈಗ ಅವರು ಸಮುದ್ರತೀರದಲ್ಲಿ ಕೋಠಿ ಕಟ್ಟಿಕೊಳ್ಳುವ ಪ್ರಮೇಯವಿಲ್ಲ, ನೇರವಾಗಿ ಮುಂಬೈ, ದೆಹಲಿಗಳಲ್ಲಿ ಪ್ರಭುತ್ವಕ್ಕೆ ಸರಿಸಮನಾಗಿ ನಿಂತುಕೊಳ್ಳುತ್ತಾರೆ. ಜೈತಾಪುರ ಪರಮಾಣು ವಿದ್ಯುತ್ ಸ್ಥಾವರವು ಮಾನವ ಜನಾಂಗಕ್ಕೆ ಕುತ್ತು ತರುವಂಥದು, ರತ್ನಾಗಿರಿ ಮತ್ತಿತರ ಜಿಲ್ಲೆಗಳ ರೈತರನ್ನು ಮತ್ತು ಮೀನುಗಾರರನ್ನು ಒಮ್ಮೆಲೇ ನುಂಗಿಹಾಕುವಂಥದು. ತಮ್ಮ ದೇಶದಲ್ಲಿ ಅಂತಹ ಸ್ಥಾವರಗಳ ಸ್ಥಾಪನೆಯನ್ನು ನಿಲ್ಲಿಸಿರುವ ಫ್ರಾನ್ಸಿನ ಅರೇವ ಕಂಪನಿ ಜೈತಾಪುರಕ್ಕೇಕೆ ಬರಬೇಕೆಂಬುದು ಹೋರಾಟಗಾರರ ಪ್ರಶ್ನೆ.

ಮಾಡಬನ್ ಭೂಕಂಪ ಸಾಧ್ಯತೆಯ ಪ್ರದೇಶ ವಾದ್ದರಿಂದ ಅಂತಹ ಕಡೆ ಅಣುಸ್ಥಾವರದ ಸ್ಥಾಪನೆಯು





ಕ್ಷೇಮವಲ್ಲವೆಂದು ಚತುರ್ವೇದಿ ಸಮಿತಿಯು ೨೦೦೨ರಲ್ಲಿ ಅಭಿಪ್ರಾಯಪಟ್ಟಿತ್ತು. ಅದಕ್ಕೂ ಮುಂಚೆ ೧೯೭೭ರಲ್ಲಿ ಇನ್ನೊಂದು ಸಮಿತಿಯು ಅದನ್ನು ಸುನಾಮಿ ಅಪ್ಪಳಿಸ ಬಹುದಾದ ಪ್ರದೇಶವೆಂದು ಗುರುತಿಸಿ, ಅಲ್ಲಿಂದ ಐದಾರು ಕಿಲೋಮೀಟರ್ ವ್ಯಾಪ್ತಿಯಲ್ಲಿ ಸ್ಥಾವರದಂತಹ ಏನನ್ನೂ ಯೋಜಿಸಬಾರದೆಂದು ಹೇಳಿತ್ತು. ಭೂರಚನಾಶಾಸ್ತ್ರದ ನಿಟ್ಟಿನಲ್ಲಿ ಮಾಡಬನ್ ೨೦–೩೦ ಮೀಟರ್ ಎತ್ತರದ ವಿಶಾಲವಾದ ಕಲ್ಲುಬಂಡೆ ಇರುವ ಜಾಗ. ಅದು ಕಟ್ಟಡಗಳ ನಿರ್ಮಿತಿಗೆ ತಗುವಂತಹ ಪ್ರದೇಶವಲ್ಲ. ಸಮುದ್ರದಡಿಗೂ ಈ ಕಲ್ಲುಬಂಡೆ ವ್ಯಾಪಿಸಿದೆ. ಅದನ್ನು "ಕಠಿಣ ಬೆಸಾಲ್ಟ್" ಎಂದು ವಿಂಗಡಿಸಿ, "ಅಪಾಯಕಾರಿ" ಎನಿಸುವುದರ ಮೂರನೆಯ ಘಟ್ಟಕ್ಕೆ ಸೇರಿದ ಪ್ರದೇಶ ಎಂದು ಗುರುತಿಸಲಾಗಿದೆ. ೧೯೮೫ರಿಂದ ೨೦೦೫ರ ವರೆಗಿನ ವರ್ಷಗಳಲ್ಲಿ ೬.೩ ರಿಕ್ಟರ್ ಮಾಪನದ ೯೩ ಹೊಡೆತಗಳು ಅಲ್ಲಿ ಬಿದ್ದಿವೆಯೆಂದು ವರದಿ ಮಾಡಿದ್ದಾರೆ. ಅಂತಹ ಜಾಗದಲ್ಲಿ ಪರಮಾಣು ವಿದ್ಯುತ್ ಸ್ಥಾವರವನ್ನು ನಿರ್ಮಿಸಲೇಬೇಕೆಂಬ ಹಟ ಅರ್ಥವಿಲ್ಲದ್ದು. ನಮ್ಮ ಒಪ್ಪಂದಗಳಲ್ಲಿ ಅರೇವ ಕಂಪನಿಯ ಹೊಣೆಗಾರಿಕೆಯ ನಿಬಂಧನೆಗಳೇನೂ ಇರುವ ಸಂಭವವಿಲ್ಲ. ಒಂದು ಸಾವಿರ ಮೆಗಾವಾಟ್‌ನ ಪ್ರಕಲ್ಪವು ಮಾಡಬನ್‌ನಲ್ಲಿ ಸ್ಥಾಪನೆಗೊಂಡರೆ ಅದರಿಂದ ದಿನಂಪ್ರತಿ ಹೊರ ಹೋಗುವ ಬಿಸಿನೀರಿನಿಂದಾಗಿ ಸಮುದ್ರದ ಅಗಾಧ ವ್ಯಾಪ್ತಿ ಪ್ರದೇಶದಲ್ಲಿ ಒಂದು ಮೀನಾಗಲಿ, ಸಸ್ಯವಾಗಲಿ, ಬಾಳುವುದಿಲ್ಲವೆಂದು ೧೯೮೯ರ ಒಂದು ವರದಿ ತಿಳಿಸಿತ್ತು. ಚೆರ್ನೋಬಿಲ್ ಮತ್ತು ಫುಕುಶಿಮಾಗಳಲ್ಲಿ ಮೂವತ್ತು ಕಿಲೋಮೀಟರ್ ವ್ಯಾಪ್ತಿಯ ಪ್ರದೇಶಗಳು "ನಿರ್ಮನುಷ್ಯ ವಾಸಯೋಗ್ಯ"ವಾದುವೆಂಬುದು ಪ್ರಸಿದ್ಧ ವಾಗಿದೆ. ಆದರೆ ಈ ಬಗೆಗಿನ ಪೂರ್ಣ ಪ್ರಮಾಣದ ಮಾಹಿತಿಯನ್ನು ಜೈತಾಪುರದ ಜನಕ್ಕೆ ನೀಡಲಾಗಿಲ್ಲ. ಆದರೂ ಅಲ್ಲಿ ೧೬೫೦ ಮೆಗಾವಾಟ್ ಸ್ಥಾವರವನ್ನು ಸ್ಥಾಪಿಸಹೊರಟಿದ್ದಾರೆ. ಸಿಂಧುದುರ್ಗ, ರತ್ನಾಗಿರಿ, ಸತಾರಾ, ಸಾಂಗ್ಲಿ, ಕೊಲ್ಲಾಪುರ, ಎಲ್ಲವೂ ಸೇರುವಂತಹ ಪ್ರದೇಶಗಳಿಗೆ ಈ ಸ್ಥಾವರದ ಪ್ರಭಾವವಿರುತ್ತದೆ ಎನ್ನಲಾಗಿದೆ. ವಿಕಿರಣ ಪ್ರಭಾವದ ಅಧ್ಯಯನದಲ್ಲಿ ಪರಿಣತರಾದ ಇಂಗ್ಲೆಂಡಿನ ಡಾ॥ ಆಲಿಸ್ ಸ್ಟುವರ್ಟ್ ಮತ್ತು ಕೆನಡಾದ ಡಾ॥ ಎಡ್ವರ್ಡ್ ಗೋರ್ಡನ್ ಇಲ್ಲಿಯ ವಾತಾವರಣದಲ್ಲಿ ಸಮುದ್ರದ ನೀರು ವಿಕಿರಣಕ್ಕೆ ಗುರಿಯಾಗುವ ಸಾಧ್ಯತೆ ಹೇರಳವಾಗಿ ಇದೆಯೆಂದು ತಿಳಿಸಿದ್ದಾರೆ. ಹೀಗಿರುವಾಗ ಅಲ್ಲಿ "ಸ್ವಚ್ಛ" ಪರಮಾಣು ವಿದ್ಯುತ್ ಎಂಬುದೊಂದು ಇರಲು ಶಕ್ಯವೆ ? ವಿಕಿರಣವನ್ನು ಪೊರಕೆಯಿಂದ ಗುಡಿಸಿ ಹಾಕಿ ಜೈತಾಪುರವನ್ನು "ಸ್ವಚ್ಛ ಜೈತಾಪುರ" ಮಾಡಲಾಗುವುದಿಲ್ಲ. ಆ ಪಟ್ಟಣದ ಆಸುಪಾಸಿನ ಜನರೆಲ್ಲಾ ನಿರ್ಗತಿಕರಾಗಿ ಮುಂಬೈನ ಕೊಳೆಗೇರಿಗಳಿಗೆ ದಾಖಲಾಗುವುದು ಅನಿವಾರ್ಯ. ಜೊತೆಗೆ, ಜಾಗತಿಕ ತಾಪಮಾನದ ಏರಿಕೆಗೂ ಸ್ವಲ್ಪ ಕಾಣಿಕೆಯನ್ನು ನಾವು ಸೇರಿಸಿ ದಂತಾಗುತ್ತದೆ. ಪರಮಾಣು ವಿದ್ಯುತ್ ಸ್ಥಾವರದಿಂದ ಉತ್ಪನ್ನವಾದ ವಿದ್ಯುತ್ತು "ಒಂದು ಬಿಳಿಯಾನೆ, ಬೇರೆ ವಿದ್ಯುತ್ತಿಗಿಂತಲೂ ಮೂರು–ನಾಲ್ಕು ಪಟ್ಟು ಹೆಚ್ಚು ಬೆಲೆ ಅದರದು" ಎಂದು ಮ್ಯಾಸೆಚುಸೆಟ್ಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ ಪರಿಣತರು ಲೆಕ್ಕ ಮಾಡಿದ್ದಾರೆಂದು ಗಿರೀಶ್ ರಾವುತ್ ಹೇಳುತ್ತಾರೆ. ಹೋಗಲಿ, ಕಳೆದ ೬೦ ವರ್ಷಗಳಲ್ಲಿ ನಮ್ಮ ದೇಶವು ಉತ್ಪಾದಿಸಿರುವ ಪರಮಾಣು ಸ್ಥಾವರ ಮೂಲದ ವಿದ್ಯುತ್ತಾದರೂ ಎಷ್ಟು? ಒಟ್ಟು ವಿದ್ಯುತ್ತಿನ ಶೇ. ೨.೧ರಷ್ಟು. ಕಲ್ಲಿದ್ದಲಿನಿಂದ ಶಾಖೋತ್ಪನ್ನ ವಿದ್ಯುತ್ ಪಡೆಯುವುದಕ್ಕೆ ಆಕ್ಷೇಪವೆತ್ತುವ ಯೂರೋಪಿನ ರಾಷ್ಟ್ರಗಳು ಭಾರತಕ್ಕೆ ಪರಮಾಣು ವಿದ್ಯುತ್ ಸ್ಥಾವರಗಳ ಮಾರಾಟ ಮಾಡಲು ಉತ್ಸುಕವಾಗಿರುವುದು ಭಾರಿ ಮೋಸದ ಪ್ರಕರಣ. ಅದನ್ನು ಅರ್ಥಮಾಡಿಕೊಳ್ಳ ಲಾಗದಷ್ಟು ಮೌಢ್ಯವು ನಮ್ಮ ದೇಶವನ್ನು ಆವರಿಸಿದೆ ಯೆಂದರೆ ಅದು ನಾಚಿಕೆಗೇಡಿನ ಸಂಗತಿ. ಸ್ಥಾವರವನ್ನು ಕೊಳ್ಳದಿದ್ದರೆ 'ಮೇಕ್ ಇನ್ ಇಂಡಿಯಾ'ಕ್ಕೆ ಇನ್ನೆಲ್ಲಿ ವಿದೇಶಿ ಬಂಡವಾಳದ ಹೂಡಿಕೆಯು ನಿಂತು ಹೋಗುತ್ತದೋ ಎಂಬ ದಿಗಿಲಿರಬೇಕು ! ಬರದಿದ್ದರೆ ಹಾಳಾಗಲಿ, ನಮ್ಮ ದೇಶವು ಸ್ವತಂತ್ರವಾಗಿ ತನ್ನದೇ ಹಾದಿಯಲ್ಲಿ ಬೆಳೆಯಲು ಅವಕಾಶವಾದರೂ ಗಟ್ಟಿಯಾಗುತ್ತದೆ. ರತ್ನಾಗಿರಿಯಲ್ಲಿ "ಸಮಾಜ ಭಾನ್" ಎಂಬ ಒಂದು ಸ್ವಾಯತ್ತ ಸಂಸ್ಥೆ ಇದೆ. ಅದರಲ್ಲಿ ವಿಜ್ಞಾನಿಗಳೂ ಸೇರಿದಂತೆ ಹತ್ತಾರು ಕಾರ್ಯಕರ್ತರು ಇದ್ದಾರೆ. ಫೆಬ್ರವರಿ ೨೦ರ ಸಂಜೆ ಎರಡು ಗಂಟೆಗಳ ಕಾಲ ಅವರೊಡನೆ ಅನೇಕ ವಿಷಯಗಳನ್ನು ಚರ್ಚಿಸಿ ದಾಗ ಮೂಡಿಬಂದ ಒಂದು ಅಭಿಪ್ರಾಯ ಅದು. ಆ ಸಂಸ್ಥೆಯು ಜೈತಾಪುರ ಸ್ಥಾವರದ ಕಡುವಿರೋಧಿ.

ಮಹಾಡ್ ಬಳಿಯ ಗೋರೆಗಾಂವ್‌ನ ಶ್ರೀಪ್ರಕಾಶ ಅಧಿಕಾರಿ ಮತ್ತು ನಾನು ಫೆಬ್ರವರಿ ೨೧ರಂದು ಬೋರ್ಕರ್ ಅವರನ್ನು ಸಂಧಿಸಲು ಹೋದಾಗ ಅವರೊಂದು ಚಿಕ್ಕ ಸಭೆಯನ್ನು ಊರಿನ ದೊಡ್ಡ ಮಸೀದಿಯ ಹತ್ತಿರದ ಒಂದು ಸಭಾಂಗಣದಲ್ಲಿ ಏರ್ಪಡಿಸಿದ್ದರು. ಅನೇಕ ಮಹಿಳೆಯರು ಮತ್ತು ವೃದ್ಧರು ಸಹ ಸಭೆಯಲ್ಲಿ ಪಾಲ್ಗೊಂಡು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಸಭೆಯಲ್ಲಿ ಮುಸಲ್ಮಾನರು ಮತ್ತು ಹಿಂದುಗಳು ಹೆಚ್ಚುಕಡಿಮೆ ಸಮಪ್ರಮಾಣದಲ್ಲಿದ್ದರು, ಪುರುಷರಿಗಿಂತಲೂ ಮಹಿಳೆಯರು ಸ್ವಲ್ಪ ಜಾಸ್ತಿ. "ಪುರುಷರು ನೀವೆಲ್ಲಾ ಮನೆಗಳಲ್ಲಿ ಕುಳಿತಿರಿ ಇಲ್ಲವೆ ಕೆಲಸಗಳಿಗೆ ಹೋದಿರಿ, ಮಹಿಳೆಯರು ಹೊರಬಂದು ಭಾಗಿಗಳಾಗುತ್ತಿದ್ದಾರೆ" ಎಂದು ಬೋರ್ಕರ್ ನಗುನಗುತ್ತಾ ಹೇಳಿದರು. "ಏನೇ ಆಗಲಿ, ಸ್ಥಾವರಕ್ಕೆ ನಮ್ಮ ಪ್ರತಿರೋಧವು ಖಂಡಿತ" ಎಂದು ಒಕ್ಕೊರಲಿನಿಂದ ಸಭೆಯು ಹೇಳಿತು. ಸ್ವಾರಸ್ಯವೆಂದರೆ, ಸಭೆ ಜರುಗುತ್ತಿದ್ದಾಗ ಇಬ್ಬರು ಪೊಲೀಸರು ಅಲ್ಲಿಗೆ ಬಂದರು. "ಇಲ್ಲಿರುವವರೆಲ್ಲಾ ಮೀನುಗಾರರೇ. ನೋಡಿಕೊಂಡು ಹೋಗಿ ಸರ್ಕಾರಕ್ಕೆ ತಿಳಿಸಿ" ಎಂದು ಬೋರ್ಕರ್ ತಮಾಷೆ ಮಾಡಿದರು. ಅಂದಹಾಗೆ, ಈ ಅಮ್ಜದ್‌ಭಾಯಿ ಬೋರ್ಕರ್ ಜೈತಾಪುರ–ರತ್ನಾಗಿರಿಗಳಲ್ಲಿ ಭಾರತೀಯ ಜನತಾ ಪಕ್ಷದ ಕಾರ್ಯಕರ್ತ ಮತ್ತು ನಾಯಕ. ಜೈತಾಪುರದ ಮೀನುಗಾರರ ಬಳಿ ಎಂಟು ಪರ್ಸೀನ್ ಬೋಟ್‌ಗಳು ಮತ್ತು ಸುಮಾರು ೨೦೦ ಟ್ರಾಲರ್‌ಗಳಿವೆ. ಮಹಾರಾಷ್ಟ್ರದ ಮೀನುಗಾರಿಕೆ ಪ್ರದೇಶಗಳಲ್ಲಿ ಎರಡು ಅಥವಾ ಮೂರನೆಯ ಸ್ಥಾನ ಈ ಪ್ರದೇಶಕ್ಕಿದೆ : ಸುಮಾರು ೧೦,೦೦೦ ಮಂದಿ ಮೀನುಗಾರಿಕೆ ಉದ್ಯೋಗ ಗಳಲ್ಲಿದ್ದಾರೆ. ಬಹುಶಃ ಮುಸಲ್ಮಾನರು ಶೇ. ೬೦ರಷ್ಟು ಎನ್ನಬಹುದೇನೊ. ಜೈತಾಪುರ ಸೇರಿದಂತೆ ಅಣುವಿದ್ಯುತ್ ಸ್ಥಾವರದ ಆಸುಪಾಸಿನಲ್ಲಿ ಸುಮಾರು ೩೦,೦೦೦ ಜನರಿರುತ್ತಾರೆಂದು ಅಂದಾಜು ಮಾಡಲಾಗಿದೆ; ಅದು ಸ್ಥಾವರಕ್ಕೆ ಸೇರಿದ ಅಥವಾ ಸೇರುವ ನೌಕರರನ್ನು ಮತ್ತು ಅವರ ಕುಟುಂಬದವರನ್ನು ಬಿಟ್ಟು. ಈಗಾಗಲೆ ಅಲ್ಲಿ ೯೩೬ ಹೆಕ್ಟೇರ್‌ಗಳಷ್ಟು ಭೂಮಿಯನ್ನು ವಶಪಡಿಸಿ ಕೊಳ್ಳಲಾಗಿದೆ. ನಂತರ ಆವಾಸಸ್ಥಾನ, ಆಡಳಿತ ಕಚೇರಿ, ಇತ್ಯಾದಿಗಳಿಗಾಗಿ ಇನ್ನಷ್ಟು ಭೂಮಿ ವಶಪಡಿಸಿ ಕೊಳ್ಳಲಾಗುತ್ತದೆ. ಗೋಡಂಬಿ ಮತ್ತು ಮಾವು ಸಂಪೂರ್ಣವಾಗಿ ಇಲ್ಲವಾಗುತ್ತವೆ. ಆದ್ದರಿಂದ ರೈತರು ಮತ್ತು ಮೀನುಗಾರರು ಸಮಾನವಾಗಿ ಸಂತ್ರಸ್ತರು. ೨೦೧೧ರ ಏಪ್ರಿಲ್ ೧೮ರಂದು ಜರುಗಿದ ಬೃಹತ್ ಪ್ರತಿಭಟನೆಯ ಸಂದರ್ಭದಲ್ಲಿ ಪೊಲೀಸರ ಗೋಲಿಬಾರಿಗೆ ಒಬ್ಬ ಯುವಕ ತುತ್ತಾದ. ಆತನ ತಂದೆ ನಮ್ಮ ಸಭೆಗೆ ಬಂದಿದ್ದರು. ಸ್ಥಾವರದ ಪರಿಣಾಮದ ಬಗೆಗಿನ ಅಂಕಿ–ಸಂಖ್ಯೆಗಳನ್ನು ಯಾವುದೇ ಪ್ರಾಧ್ಯಾಪಕರಿಗಿಂತಲೂ ಹೆಚ್ಚು ಅಚ್ಚುಕಟ್ಟಾಗಿ ಅವರು ನಿರೂಪಿಸಬಲ್ಲರು. ಅವರು ನೀಡಿದ ಒಂದು ಮಾಹಿತಿ



ಇದು : "ಸ್ಥಾವರವು ಕಾರ್ಯರೂಪಕ್ಕೆ ಬಂದಾಗ ದಿನಂಪ್ರತಿ ೫೨೦೦ ಕೋಟಿ ಲೀಟರುಗಳಷ್ಟು ಕುದಿಯುವ ನೀರನ್ನು ಸಮುದ್ರದೊಳಕ್ಕೆ ಬಿಡಲಾಗುತ್ತದೆ. ಆ ಪ್ರಮಾಣವು ಮನಸ್ಸಿಗೆ ಬರಲು ಒಂದು ಅಂಶವನ್ನು ಗಮನದಲ್ಲಿಡಿ. ಇಡೀ ಮುಂಬೈ ನಗರಕ್ಕೆ ಒಂದು ದಿನದಲ್ಲಿ ಸರಬರಾಜು ಮಾಡಲಾಗುವ ಒಟ್ಟು ನೀರಿನ ೧೩ ಪಟ್ಟು ಜಾಸ್ತಿ ನೀರು ಅದು. ಅದರ ತಾಪವು ಪಸರಿಸಿದಾಗ ಅಗಾಧ ವ್ಯಾಪ್ತಿಯವರೆಗೆ ಸಮುದ್ರದಲ್ಲಿ ಯಾವ ಜೀವಿಯೂ ಉಳಿಯುವುದಿಲ್ಲ, ಯಾವ ಸಸ್ಯವೂ ಉಳಿಯುವುದಿಲ್ಲ. ಆದ್ದರಿಂದ ಇದು ಜೀವಕ್ಕೆ ಭಾರಿ ಹೊಡೆತ ನೀಡುವ ಯೋಜನೆ." ಬೋರ್ಕರ್ ಹೇಳುತ್ತಾರೆ, "ಜೈರಾಮ ರಮೇಶ್ ಪರಿಸರ ಖಾತೆಯ ಕೇಂದ್ರ ಸಚಿವರಾಗಿದ್ದಾಗ ಹದಿನೈದು ಷರತ್ತುಗಳನ್ನು ವಿಧಿಸಿ ಈ ಯೋಜನೆಗೆ ಹಸಿರು ನಿಶಾನೆ ತೋರಿದರು. ಆ ಷರತ್ತುಗಳನ್ನೆಲ್ಲಾ ಪಾಲಿಸುತ್ತಾರೆಂಬ ನಂಬಿಕೆ ಖಂಡಿತ ಇಲ್ಲ. ಭಾರತ ಮತ್ತು ಫ್ರಾನ್ಸಿನ ವ್ಯಾಪಾರಿಗಳ ಕೂಟ ನಮ್ಮ ಕತ್ತು ಹಿಚುಕುತ್ತವೆ," ಎಂದು. ಈಗಾಗಲೆ ಅನೇಕ ಜನರು ತಮ್ಮ ಭೂಮಿ ಮತ್ತು ಮನೆಗಳನ್ನು ಕಳೆದುಕೊಂಡಿದ್ದಾರೆ. ಸ್ಥಾವರವು ಸ್ಥಾಪನೆಗೊಂಡರೆ ಇಡೀ ಊರು ಖಾಲಿಯಾಗ ಬೇಕಾಗುತ್ತದೆ. ಬೋರ್ಕರ್ ನಾಯಕತ್ವದಲ್ಲಿ ಹೋರಾಟ ಸಮಿತಿಯು ಮುಖ್ಯಮಂತ್ರಿ ಫಡ್ನವೀಸರನ್ನು ಫೆಬ್ರವರಿ ಮೊದಲ ವಾರದಲ್ಲಿ ಭೇಟಿಯಾಗಿ ವಿಸ್ತಾರವಾಗಿ ಚರ್ಚೆ ನಡೆಸಿತು. "ಸಮಿತಿಯ ಮಾಹಿತಿ ಮತ್ತು ಆತಂಕವನ್ನು ಅವರು ಮಾನ್ಯ ಮಾಡಿದರು, ಆದರೆ ಶಾಸನದ ಜವಾಬ್ದಾರಿ ಏನೆಂಬುದನ್ನು ಹೇಳಲಿಲ್ಲ," ಎನ್ನುತ್ತಾರೆ ಬೋರ್ಕರ್. "ಜನಶಕ್ತಿ ಎದ್ದುನಿಲ್ಲುತ್ತದೆ ಎಂಬುದನ್ನು ಈಗ ತಾನೆ ಚುನಾವಣೆಯಲ್ಲಿ ನಾವು ತೋರಿಸಿದ್ದೇವೆ. ನಮ್ಮ ಅಸ್ತಿತ್ವವನ್ನು ಪೂರ್ತಿ ಅವಗಣಿಸಿ ತೀರ್ಮಾನ ಕೈಗೊಳ್ಳಲು ಸರ್ಕಾರವು ಮುಂದಾದರೆ, ನಮ್ಮ ಭಾವನೆಗಳು ಮತ್ತು ಹಕ್ಕುಗಳು ಗೌಣವೆಂಬಂತೆ ಸರ್ಕಾರವು ನಡೆದುಕೊಂಡರೆ, ಮುಂದೇನು ಮಾಡುತ್ತೇವೋ ಈಗಲೇ ಹೇಳಲಾಗದು; ಆದರೆ ಐಕ್ಯತೆಯಿಂದ ಹೋರಾಟವನ್ನಂತೂ ಮುಂದುವರಿಸುತ್ತೇವೆ" ಎಂದು ಒಬ್ಬ ಯುವ ಕಾರ್ಯಕರ್ತ ಸಭೆಯಲ್ಲಿ ವಿಶ್ಲೇಷಣೆ ನೀಡಿದ. ಬೋರ್ಕರ್ ಮುಂತಾದವರೆಲ್ಲಾ ಅಲ್ಲಿ ಪದೇಪದೇ ಅನಿಲ್ ಕಾಕೋದ್ಕರ್ ಅವರನ್ನು "ಕುರುಡು ವಿಜ್ಞಾನಿ" ಎಂದು ಹೀಯಾಳಿಸುತ್ತಿದ್ದರು. "ವಿದ್ಯುತ್ತಿನ ಉತ್ಪಾದನೆಗೆ ಹಲವು ಪರ್ಯಾಯ ಮಾದರಿಗಳಿವೆ ಎಂಬುದನ್ನು ತಿಳಿಯಲಿಚ್ಛಿಸದ ವಿಜ್ಞಾನಿ ಆತ" ಎಂದು ಒಬ್ಬ ಹಿರಿಯರು ವಿಷಾದಿಸಿದರು. "ನಾಳಿನ ಸನ್ನಿವೇಶ ಹೇಗಿರುತ್ತದೋ ತಿಳಿಯದು, ಆದರೆ ನಮ್ಮ ದೇಶದ 'ಅಭಿವೃದ್ಧಿ ಮಾದರಿಯು' ಜನರನ್ನು ದೃಷ್ಟಿಯಲ್ಲಿರಿಸಿಕೊಂಡಿಲ್ಲ, ಆ ಮಾದರಿಗೆ ಬಂಡವಳಿಗರ ಮತ್ತು ವ್ಯಾಪಾರಿಗಳ ಆಶಯವಷ್ಟೆ ಪ್ರಧಾನವಾಗಿಬಿಟ್ಟಿದೆ" ಎಂದು ಕೋಪದಿಂದ ನುಡಿಯುತ್ತಾರೆ ಬೋರ್ಕರ್. "ನಿಮ್ಮ ಪಕ್ಷದ್ದೇ ಸರ್ಕಾರವಿದೆಯಲ್ಲಾ" ಎಂದು ನೆನಪಿಸಿದಾಗ ಅವರೆಂದರು : "ನನಗೆ ಪಕ್ಷ ಇದೆ, ಆದರೆ ಮೂಲತಃ ನಾನು ಜನರ ಪಕ್ಷದವನು." ಸಭೆಯಲ್ಲಿ ವ್ಯಕ್ತವಾದ ಬೇರೆ ಕೆಲವು ಅನಿಸಿಕೆ ಮತ್ತು ಟೀಕೆಗಳು ಹೀಗಿವೆ : ಫುಕುಶಿಮಾದಲ್ಲಿ ಬಿಸಿನೀರು ಇನ್ನೂ ತುಂಬಿಕೊಂಡಿದೆ; ಅಟಾಮಿಕ್ ಎನರ್ಜಿ ಆಯೋಗದ ವರದಿಯೇ ಹೇಳಿತ್ತು ಹಿಂದೊಮ್ಮೆ, ಈ ಭಾಗದಲ್ಲಿ ಕಂಪನ ಸಾಧ್ಯವಿದೆ ಎಂದು; ಜೈತಾಪುರಕ್ಕೆ ಎಂದೂ ಸುನಾಮಿ ಭಯವಿಲ್ಲವೆಂದು ಕಾಕೋದ್ಕರ್ ಹೇಳುತ್ತಾರೆ, ಆದರೆ ಅದು ತಪ್ಪು ; ಈಗಾಗಲೆ ಕೆಲಸ ಆರಂಭಿಸಿ ಸಮುದ್ರದೊಳಕ್ಕೆ ಹಳ್ಳಿಯಿಂದ ಎತ್ತಿದ ಮಣ್ಣನ್ನು ಲಾರಿಗಟ್ಟಲೆ ಸುರಿದಿದ್ದಾರೆ; ನಮ್ಮ ಭೂಮಿ ಕಿತ್ತುಕೊಂಡಿದ್ದಾರೆ ಆದರೆ ನಾವು ಅದರ ಬಾಬ್ತು ಹಣವನ್ನು ಸ್ವೀಕರಿಸಲು ನಿರಾಕರಿಸಿದ್ದೇವೆ; ನಾವು ಹಣ ಪಡೆಯದಿದ್ದಾಗ ನಮ್ಮ ಮಕ್ಕಳಿಗೆ ಅದನ್ನು ಮುಂಬೈಯಲ್ಲಿ ಕೊಟ್ಟುಬಿಟ್ಟಿದ್ದಾರೆ; ಅರಣ್ಯ ವಾಸಿಗಳಿಗೆ ಕಾಡಿದ್ದಂತೆ ನಮಗೆ ಸಮುದ್ರ. ಅವರಿಗೆ ಕಾಡಿನಿಂದ ಹೊರದೂಡಲ್ಪಡದಂತಹ ಕಾನೂನಿರುವಂತೆ ಸಮುದ್ರದಿಂದ ನಮ್ಮನ್ನು ಬೇರ್ಪಡಿಸದ ಕಾನೂನು ಬೇಕು; ಆದಿವಾಸಿಗಳಿಗೆ ರಕ್ಷಣೆ ಇರುವಾಗ ನಮಗೇಕಿಲ್ಲ ಹೇಳಿ; ಜಪಾನಿನಲ್ಲಿ ಸಮುದ್ರತೀರದ ಜನರ ಹಕ್ಕನ್ನು ಮಾನ್ಯ ಮಾಡಿದ್ದಾರೆ, ನಮ್ಮ ಹಕ್ಕನ್ನೂ ಮಾನ್ಯ ಮಾಡಬೇಕು; ನಮ್ಮ ಪ್ರಕಾರ ಅಣು ಊರ್ಜಾ ಪ್ರಕಲ್ಪವು ನಮ್ಮ ದೇಶದಲ್ಲಿಯೂ ಕೂಡದು; ನಮ್ಮನ್ನು ಅಭಿವೃದ್ಧಿ ವಿರೋಧಿಗಳೆಂದು ದೂಷಿಸುತ್ತಾರೆ, ಆದರೆ ನಾವು ಅಣು ವಿದ್ಯುತ್ತಿಗೆ ಪರ್ಯಾಯಗಳಿವೆ ಎನ್ನುತ್ತೇವೆ; ಕಚೇರಿಗಳಲ್ಲಿ ಕುಳಿತು ಯೋಜನೆ ಸಿದ್ಧಗೊಳಿಸುವವರಿಗೆ ಜನ ಎಲ್ಲಿ ಕಂಡಾರು, ಅವರಿಗೆ ಕೊಲ್ಲಿ ಎಂದರೇನು ಎಂಬುದೂ ತಿಳಿದಿಲ್ಲ ; ನಾವೂ ಈ ದೇಶದ ಪ್ರಜೆಗಳೆಂದು ಸರ್ಕಾರಕ್ಕೆ ತಿಳಿಯದೆ ? ಸರ್ವಾಧಿಕಾರಿಯೂ ಹೀಗೆ ಮಾಡುವುದಿಲ್ಲ, ಇತ್ಯಾದಿ.



ರತ್ನಾಗಿರಿಯಿಂದ ಜೈತಾಪುರಕ್ಕೆ ಬಸ್ಸುಗಳಿವೆ, ಆದರೆ ವಿರಳ. ಟ್ಯಾಕ್ಸಿಯಲ್ಲಿ ಹೋಗಿಬರಬೇಕೆಂದರೆ ಖರ್ಚು ಜಾಸ್ತಿ. ಕೆಲವು ದಿನಗಳಲ್ಲಿ ಎಂಟು ಜನರನ್ನು ಕರೆದೊಯ್ಯುವ ದೊಡ್ಡ ಆಟೋಗಳಿರುತ್ತವಂತೆ. ಆದರೆ ನಾನು ಮತ್ತು ಅಧಿಕಾರಿ ನೂರು ಕಿಲೋಮೀಟರ್‌ಗಿಂತಲೂ ಸ್ವಲ್ಪ ಜಾಸ್ತಿ ಅಂದು ಆಟೋರಿಕ್ಷಾದಲ್ಲಿ ಪ್ರಯಾಣ ಮಾಡಿದೆವು. ರತ್ನಾಗಿರಿಯಿಂದ ಹೋಗುವಾಗ ಮಾರ್ಗಮಧ್ಯದಲ್ಲಿದ್ದ ಯಾವುದೋ ಒಂದು ದೊಡ್ಡ ಮಠಕ್ಕೆ ಆಟೋರಿಕ್ಷಾದ ಚಾಲಕ ನಮ್ಮನ್ನು ಬಲವಂತವಾಗಿ ಕರೆದುಕೊಂಡುಹೋದರು. ಆ ಮುಸಲ್ಮಾನ ವ್ಯಕ್ತಿಯ ಸಮಜಾಯಿಷಿ ಇದು : "ಅಷ್ಟು ದೂರದಿಂದ ಬಂದಿದ್ದೀರಿ. ಇಲ್ಲಿ ಪ್ರಸಿದ್ಧವಾದ ಕೃಷ್ಣನ ಮಠಕ್ಕೆ ಹೋಗದಿರುವುದು ಉಂಟೆ ! ಅರ್ಧ ಗಂಟೆ ಅಷ್ಟೆ, ಏನೂ ಯೋಚನೆ ಮಾಡಬೇಡಿ. ಜೈತಾಪುರಕ್ಕೆ ಆರಾಮವಾಗಿ ಹೋಗೋಣ. ಸಮಯದ ಬಗ್ಗೆ ತಲೆಕೆಡಿಸಿಕೊಳ್ಳಬೇಡಿ." ನಾವು ಮಠಕ್ಕೆ ಹೋದಾಗ ಈ ವ್ಯಕ್ತಿ ಅಲ್ಲೇ ಎದುರಿಗಿದ್ದ ಹೊಟೇಲಿನಲ್ಲಿ ತಿಂಡಿ ತಿಂದುಕೊಂಡ, ಅಧಿಕಾರಿ ಪೂಜೆ ಸಲ್ಲಿಸಿ ಪ್ರಸಾದ ಪಡೆದುಕೊಂಡರು ಮತ್ತು ನಾನು ಶ್ರೀಗಂಧ ಮಿಶ್ರಿತ ಅರಿಶಿನದ ಕಣಕ ಕೊಂಡಿಟ್ಟುಕೊಂಡೆ. ಪ್ರಸಾದವೇನೋ ಬಹಳ ಸ್ವಾದಿಷ್ಟವಾಗಿತ್ತು, ಆದರೆ ಪ್ರಮಾಣದಲ್ಲಿ ತೀರಾ ನಿರಾಶಾದಾಯಕವಾಗಿತ್ತು. ರತ್ನಾಗಿರಿಗೆ ಹಿಂದಿರುಗುವಾಗ ಜೈತಾಪುರದ ಜನರ ಭವಿಷ್ಯ ಅದಿನ್ನೆಷ್ಟು ನಿರಾಶಾದಾಯಕವಾಗಬಹುದೋ ಎಂಬ ವೇದನೆ ಕಾಡುತ್ತಿತ್ತು.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦೦೮೫

**ಚು**ನಾವಣೆಗಳ ನಂತರ ಬಹು ದೊಡ್ಡ ಪಕ್ಷವಾಗಿ ಹೊಮ್ಮಿದ್ದ ಕಾಂಗ್ರೆಸ್ ಸರಕಾರ ರಚಿಸಲು ಮುಂದಾಯಿತು. ಸೋನಿಯಾ ಗಾಂಧಿ ನೇತೃತ್ವದಲ್ಲಿ ಚುನಾವಣೆಗಳ ಸಮಯದಲ್ಲೇ ಕೆಲವು ಪಕ್ಷಗಳೊಂದಿಗೆ ಸೀಟುಗಳ ಹಂಚಿಕೆಯಲ್ಲಿ ಹೊಂದಾಣಿಕೆ ಯಾಗಿತ್ತು. ಮುಖ್ಯವಾಗಿ ಬಿಹಾರ, ಮಹಾರಾಷ್ಟ್ರ ಮತ್ತು ತಮಿಳುನಾಡಿನಲ್ಲಿ ಇಂಥ ಏರ್ಪಾಟಾಗಿತ್ತು. ಸರಕಾರ ರಚನೆಗೆ ಈ ಪಕ್ಷಗಳ ಬೆಂಬಲದ ಜೊತೆಗೆ ಎಡಪಕ್ಷಗಳ ಬೆಂಬಲವೂ ಅಗತ್ಯವಾಯಿತು. ಕನಿಷ್ಠ ಕಾರ್ಯಕ್ರಮವೊಂದರ ಆಧಾರದ ಮೇಲೆ ೫೯ ಸ್ಥಾನಗಳನ್ನು ಪಡೆದಿದ್ದ ಎಡಪಕ್ಷಗಳು ಸರಕಾರಕ್ಕೆ ಬೆಂಬಲ ನೀಡಲು ಮುಂದಾದುವು. ಲಾಲೂ ಪ್ರಸಾದ್ ಯಾದವ್ ನೇತೃತ್ವದ ರಾಷ್ಟ್ರೀಯ ಜನತಾದಳ, ಶರತ್ ಪವಾರ್ ನಾಯಕತ್ವದಲ್ಲಿದ್ದ ರಾಷ್ಟ್ರೀಯ ಕಾಂಗ್ರೆಸ್ ಪಕ್ಷ, ಕರುಣಾನಿಧಿ ನೇತೃತ್ವದ ದ್ರಾವಿಡ ಮುನ್ನೇಟ್ರ ಕಳಗಂ ಹಾಗೂ ಇತರ ಕೆಲವು ಪ್ರಾದೇಶಿಕ ಪಕ್ಷಗಳು ಸರಕಾರಕ್ಕೆ ಬೆಂಬಲ ನೀಡಿದವು ಮತ್ತು ಸರಕಾರದಲ್ಲಿ ಭಾಗಿಯಾದವು. ಅಧಿಕ ಸ್ಥಾನಗಳನ್ನು ಪಡೆದಿದ್ದ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಾರ್ಟಿ ನೇತೃತ್ವದ ಎಡಪಕ್ಷಗಳು ಸರಕಾರ ರಚನೆಯಲ್ಲಿ ಪಾಲ್ಗೊಳ್ಳದೆ ಹೊರಗಿನಿಂದ ಬೆಂಬಲ ನೀಡಲು ನಿರ್ಧರಿಸಿದುವು. ಈ ಬಗೆಯಲ್ಲಿ ಅಸ್ತಿತ್ವಕ್ಕೆ ಬಂದ ಯುನೈಟೆಡ್ ಪ್ರೋಗ್ರೆಸಿವ್ ಮೈತ್ರಿಕೂಟ (ಯುಪಿಎ) ಸರಕಾರ ರಚನೆ ಮಾಡಿ ಹತ್ತು ವರ್ಷ ಅಧಿಕಾರದಲ್ಲಿತ್ತು.

ಕಾಂಗ್ರೆಸ್ ಅಧ್ಯಕ್ಷೆ ಹಾಗೂ ಯುಪಿಎಯ ಅಧ್ಯಕ್ಷೆ ಆಗಿದ್ದ ಸೋನಿಯಾ ಗಾಂಧಿ ಪ್ರಧಾನಿಯಾಗುತ್ತಾರೆ ಎಂಬ ಊಹೆ ಬಲವಾಗಿತ್ತು. ಚುನಾವಣೆ ಸಮಯದಲ್ಲೇ ಕಾಂಗ್ರೆಸ್ ವಿರೋಧಿ ಪಕ್ಷಗಳು, ಮುಖ್ಯವಾಗಿ ಭಾರತೀಯ ಜನತಾ ಪಕ್ಷ ವಿದೇಶೀ ಮೂಲದ ಪ್ರಶ್ನೆಯನ್ನು ಕುರಿತು ಅಬ್ಬರದ ಪ್ರಚಾರ ನಡೆಸಿದ್ದರೂ ಆಕೆ ಪ್ರಧಾನಿಯಾಗುವುದನ್ನು ತಡೆಯುವ ವ್ಯವಧಾನ ಇರಲಿಲ್ಲ. ಪ್ರಧಾನಿಯಾಗಿ ಅಧಿಕಾರ ವಹಿಸಿಕೊಳ್ಳಲು ಸೋನಿಯಾ ಗಾಂಧಿಗೆ ಯಾವ ಅಡ್ಡಿಯೂ ಇರಲಿಲ್ಲ. ಕಾಂಗ್ರೆಸ್ ಪಾರ್ಲಿಮೆಂಟರಿ ಪಾರ್ಟಿ ಅವರನ್ನು ನಾಯಕಿಯಾಗಿ ಆಯ್ಕೆ ಮಾಡಿತ್ತು. ಪಾರ್ಲಿಮೆಂಟಿಗೆ ಆಯ್ಕೆಯಾಗಿದ್ದು, ಎಲ್ಲ ಅರ್ಹತೆಯನ್ನು ಪ್ರಧಾನಿಯಾಗಲು ಪಡೆದಿದ್ದರೂ ಆಕೆ ಅಧಿಕಾರ ವಹಿಸಿಕೊಳ್ಳಲು ಸಮ್ಮತಿಸಲಿಲ್ಲ. ಬದಲಾಗಿ ನರಸಿಂಹರಾವ್ ಸಂಪುಟದಲ್ಲಿ ಹಣಕಾಸಿನ ಸಚಿವರಾಗಿದ್ದು ಉದಾರೀಕರಣ, ಜಾಗತೀಕರಣ, ಮುಕ್ತ ಮಾರುಕಟ್ಟೆಯ ಪ್ರತಿಪಾದಕರಾಗಿದ್ದ ರಾಜ್ಯಸಭಾಸದಸ್ಯ ಡಾ॥ ಮನಮೋಹನ್ ಸಿಂಗ್‌ರ ಹೆಸರನ್ನು ಪ್ರಧಾನಿ ಪಟ್ಟಕ್ಕೆ ಸೂಚಿಸಿದರು ಸೋನಿಯಾ ಗಾಂಧಿ. ಯಾವುದೇ ಕಾರಣವನ್ನು ನೀಡದೆ ತನ್ನ ಮನಸ್ಸಾಕ್ಷಿಗೆ ಅನುಗುಣವಾಗಿ ಈ ನಿರ್ಧಾರ ಕೈಗೊಂಡಿರುವುದಾಗಿ ಪ್ರಕಟಿಸಿದ ಆಕೆ ಯುಪಿಎ ಸರಕಾರಕ್ಕೆ ಸೂತ್ರಧಾರಿಯಾದರು.

ಅಂಗೀಕೃತವಾಗಿದ್ದ ಕನಿಷ್ಠ ಕಾರ್ಯಕ್ರಮ, ಸರಕಾರದ ನೀತಿಗಳ ಕುರಿತ ಪರಾಮರ್ಶೆಗಳಿಗಾಗಿ ಸೋನಿಯಾ ನೇತೃತ್ವದಲ್ಲಿ ಎಡಪಕ್ಷಗಳ ಪ್ರತಿನಿಧಿಗಳ ಸಹಯೋಗದೊಂದಿಗೆ ಸಮಿತಿಯೊಂದು ಸ್ಥಾಪನೆಗೊಂಡಿತಾದರೂ ಅದು ಕಾರ್ಯ ನಿರ್ವಹಿಸಿದ್ದು, ಸಭೆ ಸೇರಿದ್ದು ವಿರಳ. ಅದೇ ಸಮಯದಲ್ಲಿ ಸರಕಾರದ ಕಾರ್ಯನೀತಿಗಳ ನಿರೂಪಣೆಗೆ ಸೋನಿಯಾ ಗಾಂಧಿ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಸಲಹಾ ಮಂಡಳಿಯೊಂದು ರಚನೆಯಾಯಿತು. ಈ ಸಮಿತಿಯಲ್ಲಿ ಹಲವು ಸಾರ್ವಜನಿಕ ಸಂಘಟನೆಗಳ ಪ್ರತಿನಿಧಿಗಳು, ಬುದ್ಧಿಜೀವಿಗಳು, ವಿವಿಧ ಕ್ಷೇತ್ರಗಳ ಪರಿಣತರು ಇದ್ದರು. ಈ ಸಮಿತಿ ಕಾರ್ಯ ನಿರ್ವಹಿಸಿದ್ದೂ ಕೂಡ ಅಷ್ಟಕ್ಕಷ್ಟೆ.

ಹೊರಗಿನಿಂದ ಬೆಂಬಲ ನೀಡಲು ನಿರ್ಧರಿಸಿದ್ದ ಸಿಪಿಎಂನ ಪಶ್ಚಿಮ ಬಂಗಾಳದ ಹಿರಿಯ ನಾಯಕ ಹಾಗೂ ಸಾಕಷ್ಟು ವರ್ಷಗಳು ಲೋಕಸಭೆಯ ಸದಸ್ಯರಾಗಿದ್ದ ಸೋಮನಾಥ ಲಹರಿ ಅವರು ಸ್ಪೀಕರ್ ಆಗಿ ಆಯ್ಕೆಗೊಂಡರು. ಐದು ವರ್ಷಗಳ ಅವಧಿಯಲ್ಲಿ ಅವರು ನಿರ್ವಹಿಸಿದ ಕಾರ್ಯ ಸ್ತುತ್ಯಾರ್ಹವಾಗಿತ್ತು. ಕಡೆಯ ದಿನಗಳಲ್ಲಿ ಎಡಪಕ್ಷಗಳು ಸರಕಾರಕ್ಕೆ ನೀಡಿದ್ದ ಬೆಂಬಲವನ್ನು ಹಿಂತೆಗೆದುಕೊಂಡಾಗಲೂ, ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದಿಂದ ಎಷ್ಟೇ ಒತ್ತಡವಿದ್ದಾಗ್ಯೂ ಲೆಕ್ಕಿಸದೆ ಸಭಾಧ್ಯಕ್ಷರಾಗಿ ಮುಂದುವರಿದರು. ಪಕ್ಷದ ತೀರ್ಮಾನದ ವಿರುದ್ಧವಾಗಿ ವರ್ತಿಸಿ, ಶಿಸ್ತು ಉಲ್ಲಂಘನೆ ಮಾಡಿದ ಸೋಮನಾಥ ಲಹರಿ ಅವರ ಮೇಲೆ ಕ್ರಮ ಕೈಗೊಂಡಿತು. ಎಡಪಕ್ಷಗಳ ನೇತೃತ್ವ ವಹಿಸಿದ್ದ ಸಿಪಿಎಂ ಹೊರಗಿನಿಂದ ಬೆಂಬಲ ನೀಡುವ ಬದಲು ಸರಕಾರದಲ್ಲಿ ಪಾಲ್ಗೊಂಡಿದ್ದರೆ ಕನಿಷ್ಠ ಕಾರ್ಯಕ್ರಮದ ಬಹ್ವಂಶವನ್ನು ಕಾರ್ಯಗತ ಮಾಡಬಹುದಿತ್ತು. ಮನಮೋಹನ್ ಸಿಂಗ್ ಸರಕಾರ ಅನುಸರಿಸಿದ ಜನಪರವಲ್ಲದ ನೀತಿಗಳನ್ನು ತಡೆಯಲು ಸಾಧ್ಯವಾಗುತ್ತಿತ್ತು. ಸರಕಾರದಲ್ಲಿ ಪಾಲ್ಗೊಳ್ಳದೆ ಇರುವ ನಿರ್ಧಾರ ಸರಿಯಾದದ್ದಲ್ಲ ಎನ್ನುವ ಟೀಕೆಗಳೂ ಇದ್ದುವು. ಹಿಂದೊಮ್ಮೆ ಕಾಂಗ್ರೆಸ್ಸೇತರ ಸರಕಾರದ ರಚನೆಯಾದಾಗ ಪಶ್ಚಿಮ

## ಸ್ವಾತಂತ್ರ್ಯಾನಂತರದ ಭಾರತ – ೧೮

# ಯುಪಿಎ ಸರಕಾರ ಅಧಿಕಾರಕ್ಕೆ ಎಡಪಕ್ಷಗಳ ಬೆಂಬಲ



ಬಂಗಾಳದ ಕಮ್ಯುನಿಸ್ಟ್ ನಾಯಕ ಜ್ಯೋತಿ ಬಸುರವರ ಹೆಸರನ್ನು ಪ್ರಧಾನಿ ಪಟ್ಟಕ್ಕೆ ಸೂಚಿಸಲಾಗಿತ್ತು. ಅವರಿಗೆ ಭಾಗವಹಿಸಿದ್ದ ಎಲ್ಲ ಪಕ್ಷಗಳ ಬೆಂಬಲವೂ ಇತ್ತು. ಹಾಗಾಗಿದ್ದರೆ ದೇಶದ ರಾಜಕೀಯ ಬೆಳವಣಿಗೆಯೇ ಬೇರೆಯಾಗಿರುತ್ತಿತ್ತು. ಆದರೆ ಸಿಪಿಎಂ ಅದಕ್ಕೆ ಒಪ್ಪಲಿಲ್ಲ. ಅನಂತರ ಅದು ಹಾಗೆ ಮಾಡಿದ್ದು ದೊಡ್ಡ ತಪ್ಪು ಎಂಬುದಾಗಿ ಒಪ್ಪಿಕೊಳ್ಳಬೇಕಾಯಿತು. ಜ್ಯೋತಿ ಬಸು ಅವರು ಕೂಡ ಅದೇ ಅಭಿಪ್ರಾಯ ಹೊಂದಿದ್ದರು. ಆದರೆ ಪಕ್ಷದ ಶಿಸ್ತಿಗೆ ಬದ್ಧರಾಗಿ ಅವರು ಪ್ರಧಾನಿಯಾಗಲು ನಿರಾಕರಿಸಿದರು. ಅದೇ ದೊಡ್ಡ ತಪ್ಪನ್ನು ಆ ಪಕ್ಷ ಯುಪಿಎ ವಿಷಯದಲ್ಲೂ ಮಾಡಿತೇ ಎನ್ನುವುದು ಚರ್ಚಾಸ್ಪದ.

ಅದೇನೇ ಇರಲಿ ಎಡಪಕ್ಷಗಳು ಪ್ರಬಲವಾಗಿದ್ದ ಕಾರಣ ಸರಕಾರ ಹಲವು ಜನಪರ ಯೋಜನೆಗಳನ್ನು ಕಾರ್ಯಗತ ಮಾಡಬೇಕಾಗಿ ಬಂತು. ೨೦೦೪ರ ಮೇ ತಿಂಗಳಲ್ಲಿ ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡ ಡಾ॥ ಮನಮೋಹನ್ ಸಿಂಗ್ ಜನತೆಯಿಂದ ನೇರವಾಗಿ ಆಯ್ಕೆಯಾದವರಲ್ಲ, ರಾಜ್ಯಸಭಾ ಸದಸ್ಯ, ಹೆಚ್ಚುಕಾಲ ವರ್ಲ್ಡ್ ಬ್ಯಾಂಕ್ ಮತ್ತು ಐಎಂಎಫ್‌ಗಳಲ್ಲಿ ಸೇವೆ ಸಲ್ಲಿಸಿದ್ದ ಅವರು ಅರ್ಥಶಾಸ್ತ್ರಜ್ಞರು. ಅಮೆರಿಕದ ಪರನೀತಿ ಅವರಿಗೆ ಪ್ರಿಯ ಎನ್ನುವುದು ತಿಳಿಯದ ವಿಷಯವೇನಲ್ಲ. ಮೃದುಭಾಷಿಯಾಗಿದ್ದರೂ ಕಠಿಣ ನಿಲುವು ತಳೆಯಬಲ್ಲ ವ್ಯಕ್ತಿ. ತಮ್ಮ ಜೊತೆಯಲ್ಲೇ ಅಮೆರಿಕದಲ್ಲಿ ಕೆಲಸ ಮಾಡಿದ್ದ ಅಹ್ಲುವಾಲಿಯಾರನ್ನು ಯೋಜನಾ ಆಯೋಗದ ಅಧ್ಯಕ್ಷರನ್ನಾಗಿ ನೇಮಕ ಮಾಡಿದ್ದರು. ಹಣಕಾಸಿನ ಸಚಿವರು ಪಿ. ಚಿದಂಬರಮ್. ಮನಮೋಹನ್ ಸಿಂಗ್, ಅಹ್ಲುವಾಲಿಯಾ ಮತ್ತು ಚಿದಂಬರಮ್ ಈ ಮೂವರು ನಡೆಸಿದ್ದೇ ದರ್ಬಾರು. ದೇಶದಲ್ಲಿ ಕಾರ್ಪೊರೇಟ್ ವಲಯ ಬಲಗೊಳ್ಳಲು ಅಗತ್ಯವಾದ ಕ್ರಮಗಳನ್ನು ಕೈಗೊಂಡರು. ಆದರೆ ಮುಂದೆ ಹತ್ತು ವರ್ಷಗಳ ನಂತರ ಅವರೇ ಪೋಷಿಸಿದ ಕಾರ್ಪೊರೇಟ್ ವಲಯ ಅವರಿಗೇ ಮುಳುವಾಯಿತು.

ಹಿಂದುತ್ವವಾದಿ ಭಾಜಪ ನೇತೃತ್ವದ ಎನ್‌ಡಿಎ ಸರಕಾರ ಮತ್ತು ಕಾಂಗ್ರೆಸ್ ನೇತೃತ್ವದ ಯುಪಿಎ ಸರಕಾರ ಅನುಸರಿಸಿದ ಆರ್ಥಿಕ ಹಾಗೂ ವಿದೇಶೀ ನೀತಿಗಳಲ್ಲಿ ಹೆಚ್ಚು ವ್ಯತ್ಯಾಸವೇನಿರಲಿಲ್ಲ. ಭಾಜಪ ಮತೀಯವಾದಿ, ಅಲ್ಪಸಂಖ್ಯಾತ ವಿರೋಧಿ ಎನ್ನುವುದನ್ನು ಬಿಟ್ಟರೆ ಬೇರೇನೂ ಇಲ್ಲ. ಯುಪಿಎ ಸರಕಾರ ಅಧಿಕಾರಕ್ಕೆ ಬಂದಮೇಲೆ ಮುಖ್ಯವಾಗಿ ಶಿಕ್ಷಣ ಕ್ಷೇತ್ರದಲ್ಲಿ ಎನ್‌ಡಿಎ ಸರಕಾರ ಜಾರಿಗೆ ತಂದಿದ್ದ ಮತೀಯವಾದಿ ಪ್ರಚೋದನಾತ್ಮಕ ಪ್ರಕ್ರಿಯೆಯನ್ನು ನಿವಾರಿಸುವುದು ಅಗತ್ಯವಾಗಿತ್ತು. ಇದು ಸುಲಭ ವಾದದ್ದೇನಾಗಿರಲಿಲ್ಲ. ಪಠ್ಯಪುಸ್ತಕಗಳ, ಪ್ರಮುಖವಾಗಿ ಇತಿಹಾಸದ ಪಠ್ಯಗಳನ್ನು ತಿರುಚುವುದರಲ್ಲಿ ಚಾಣಾಕ್ಷರಾಗಿರುವ ಸಂಘಪರಿವಾರದವರು ತಂದಿದ್ದ ಮಾರ್ಪಾಡು ಗಳನ್ನು ಸರಿಪಡಿಸುವ ಕಾರ್ಯವನ್ನು ಯುಪಿಎ ಸರಕಾರ ಯಶಸ್ವಿಯಾಗಿ ನಿರ್ವಹಿಸಿತು ಎಂದು ಹೇಳಬರುವುದಿಲ್ಲ, ಏಕೆಂದರೆ ತೆಗೆದುಕೊಂಡ ಕ್ರಮಗಳು ಅರೆಮನಸ್ಸಿನಿಂದ ಕೂಡಿದ್ದಾಗಿದ್ದುವು. ಸರಕಾರಿ ಕೃಪಾಪೋಷಿತ ಸಂಸ್ಥೆಗಳು, ಸಾರ್ವಜನಿಕ ಸಂಸ್ಥೆಗಳು ಹಾಗೂ ಸರಕಾರದಲ್ಲಿ ಆಯಕಟ್ಟಿನ ಸ್ಥಳಗಳಲ್ಲಿ ಅಧಿಕಾರ ಸ್ಥಾನದಲ್ಲಿದ್ದವರನ್ನು ಸರಕಾರ ಬದಲಿಸಿತು. ಹಾಗೆಯೇ ಎನ್‌ಡಿಎ ನೇಮಕ ಮಾಡಿದ್ದ ರಾಜ್ಯಪಾಲರುಗಳನ್ನು ತೆಗೆದುಹಾಕಿ ಬೇರೆಯವರನ್ನು ನೇಮಿಸಿತು. ಹೊಸ ಸರಕಾರ ಅಧಿಕಾರವಹಿಸಿಕೊಂಡ ಮೇಲೆ ಕೈಗೊಳ್ಳುವ ಮಾಮೂಲಿ ಕ್ರಮಗಳೇ ಇಂಥವೆಲ್ಲ.

ಎನ್‌ಡಿಎ ಸರಕಾರದ ಕಾಲಾವಧಿಯಲ್ಲಿ ಭಯೋತ್ಪಾದನೆಯ ವಿರುದ್ಧವಾಗಿ ಕ್ರಮಕೈಗೊಳ್ಳುವ ಹೆಸರಿನಲ್ಲಿ ಅಲ್ಪಸಂಖ್ಯಾತರನ್ನು ಮುಖ್ಯವಾಗಿ ಮುಸಲ್ಮಾನರನ್ನು ಗುರಿಯಾಗಿರಿಸಿಕೊಂಡು ಭಯೋತ್ಪಾದನೆ ತಡೆ ಕಾಯಿದೆ (ಪೋಟಾ) ಜಾರಿಗೆ ತಂದಿತ್ತು. ಈ ಕಾಯಿದೆಯ ಅಡಿಯಲ್ಲಿ ಅನೇಕ ಮಂದಿ ಅಮಾಯಕರು ವಿಚಾರಣೆ ಯಿಲ್ಲದೆ ಬಂಧಿತರಾಗಿ ಕಾರಾಗೃಹಕ್ಕೆ ನೂಕಲ್ಪಟ್ಟಿದ್ದರು. ಈ ಕಾಯಿದೆಯನ್ನು ತೀವ್ರವಾದ ವಿರೋಧವಿದ್ದರೂ ಎನ್‌ಡಿಎ ಸರಕಾರ ಜಾರಿಗೆ ತಂದಿತ್ತು. ಇದರಿಂದ ಭಯೋತ್ಪಾದನಾ





ಪಿ. ಚಿದಂಬರಂ

ಕೃತ್ಯಗಳನ್ನು ತಡೆಗಟ್ಟಲು ಪ್ರಯೋಜನವೇನಾಗಲಿಲ್ಲ ಬೇಡವಾದವರನ್ನು ಜೈಲಿನಲ್ಲಿರಿಸು ವುದನ್ನು ಬಿಟ್ಟರೆ. ಯುಪಿಎ ಸರಕಾರ ಈ ಕಾಯಿದೆಯನ್ನು ರದ್ದುಗೊಳಿಸಿತು. ಬಂಧನ ದಲ್ಲಿದ್ದ ಅಮಾಯಕರನ್ನು ಬಿಡುಗಡೆ ಮಾಡಿತು. ಅಲ್ಪಸಂಖ್ಯಾತರ ಯೋಗಕ್ಷೇಮ ನೋಡಿಕೊಳ್ಳಲು ಸರಕಾರ ಪ್ರತ್ಯೇಕವಾದ ಸಚಿವಾಲಯವನ್ನು ನಿರ್ಮಿಸಿತು. ಅಲ್ಪಸಂಖ್ಯಾತರಲ್ಲಿ ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವವರನ್ನು ಗುರ್ತಿಸಲು ನಿವೃತ್ತ ನ್ಯಾಯಾಧೀಶರ ಅಧ್ಯಕ್ಷತೆಯಲ್ಲಿ ಸರಕಾರ ಸಮಿತಿಯೊಂದನ್ನು ನೇಮಕ ಮಾಡಿತು. ಈ ಸಮಿತಿಯ ಶಿಫಾರಸುಗಳು ಇಂಥ ಇತರ ಆಯೋಗಗಳ ವರದಿ ಯಂತೆಯೇ ಸರಕಾರದ ಕಪಾಟು ಸೇರಿತೇ ಹೊರತು, ಪ್ರಯೋಜನವೇನಾಗಲಿಲ್ಲ ಯಾರಿಗೂ. ಪೋಟಾ ಕಾಯಿದೆಯನ್ನು ರದ್ದುಗೊಳಿಸಿದ ಯುಪಿಎ ಸರಕಾರ ಮತೀಯ ಗಲಭೆಗಳನ್ನು ತಡೆಯುವ, ನಿಯಂತ್ರಿಸುವ ಹಾಗೂ ಬಾಧಿತರ ಪುನರುತ್ಥಾನಗೊಳಿಸುವ ಕಾಯಿದೆಯೊಂದನ್ನು ಜಾರಿಗೆ ತಂದಿತು.

ಯುಪಿಎ ಸರಕಾರದ ಮೊದಲ ಅವಧಿಯಲ್ಲಿ ತಂದ ಒಂದು ಪ್ರಮುಖ ಕಾಯಿದೆ ಎಂದರೆ ಅಕ್ಟೋಬರ್ ೨೦೦೫ರಲ್ಲಿ ಜಾರಿಗೆ ತಂದ 'ಮಾಹಿತಿ ಹಕ್ಕು ಕಾಯಿದೆ'. ಈ ಕಾಯಿದೆಯ ಪ್ರಕಾರ ಅರ್ಜಿ ಸಲ್ಲಿಸಿದ ಮುವ್ವತ್ತು ದಿನಗಳ ಒಳಗಾಗಿ ಸರಕಾರದ, ಸಾರ್ವಜನಿಕ ವಲಯದ ಅಧಿಕಾರಿಗಳಿಂದ ಅಗತ್ಯವಾದ ಮಾಹಿತಿ ಪಡೆಯುವ ಹಕ್ಕು ನಾಗರಿಕರದ್ದಾಗಿರುತ್ತದೆ. ದೇಶದ ಭದ್ರತೆ ಹಾಗೂ ನಿರ್ಬಂಧಿತ ಕೆಲ ಮಾಹಿತಿಗಳನ್ನು ಬಿಟ್ಟು ಉಳಿದೆಲ್ಲ ಮಾಹಿತಿಗಳನ್ನು ಪಡೆಯಲು ಹಕ್ಕುಂಟು. ಇದು ಅತ್ಯಂತ ಪ್ರಗತಿಪರ ಕಾಯಿದೆ ಎನ್ನುವುದರಲ್ಲಿ ಸಂದೇಹವಿಲ್ಲ. ಈ ಕಾಯಿದೆ ಜಾರಿಗೆ ಬಂದಮೇಲೆ ಸರಕಾರದ ಹಲವು ಅಕ್ರಮ ವ್ಯವಹಾರಗಳು ಬಯಲಾಗಿವೆ. ಈ ಕಾಯಿದೆ ಬಂದದ್ದು ಕೂಡ ಜನತೆ ನಡೆಸಿದ ಹೋರಾಟಗಳ ಪರಿಣಾಮವಾಗಿಯೇ. ಹಲವು ಸಂಘ ಸಂಸ್ಥೆಗಳು ಇಂಥ ಒಂದು ಮಾಹಿತಿ ಹಕ್ಕು ಕಾಯಿದೆಗಾಗಿ ಚಳವಳಿ ನಡೆಸಿದ್ದುವು. ಈ ಕಾಯಿದೆಯ ವ್ಯಾಪ್ತಿಯಿಂದ ರಾಜಕೀಯ ಪಕ್ಷಗಳು ಹೊರಗುಳಿದಿವೆ. ಅದಲ್ಲದೆ ದೇಶದ ರಕ್ಷಣೆಯ ದೃಷ್ಟಿಯಿಂದ ಸೇನೆಗೆ ಸಂಬಂಧಪಟ್ಟ ಮಾಹಿತಿ ಲಭ್ಯವಿಲ್ಲ. ಶಸ್ತ್ರಾಸ್ತ್ರ ಖರೀದಿಯಲ್ಲಿ ನಡೆಯುವ ಅವ್ಯವಹಾರಗಳು ಸಾಕಷ್ಟಿದ್ದರೂ ಅದರ ಮಾಹಿತಿ ಮಾತ್ರ ದೊರೆಯುವುದಿಲ್ಲ. ಇದೊಂದು ನ್ಯೂನತೆ. ಈ ಕಾಯಿದೆ ಜಾರಿಯಲ್ಲಿದ್ದರೂ ಎಷ್ಟೋ ಸರಕಾರಿ ವ್ಯವಹಾರಗಳು ಬೆಳಕಿಗೇ ಬರುವುದಿಲ್ಲ. ಏನೇ ಆದರೂ ಮಾಹಿತಿ ಹಕ್ಕು ಕಾಯಿದೆ ಸಾರ್ವಜನಿಕರ ಮಟ್ಟಿಗೆ ಒಂದು ಅಸ್ತ್ರವಾಗಿಯೇ ಇದೆ ಎನ್ನಬಹುದು.

ಜಾಗತೀಕರಣ, ಉದಾರೀಕರಣದ ಭರಾಟೆಯಲ್ಲಿ ನಲುಗುತ್ತಿರುವ ಬಡರೈತರ ಪಾಲಿಗೆ ಆತ್ಮಹತ್ಯೆಯೊಂದೇ ಉಳಿದಿರುವ ಮಾರ್ಗವಾಗಿ ಪರಿಣಮಿಸಿದೆ. ಇಪ್ಪತ್ತೊಂದನೆ ಶತಮಾನದಲ್ಲಿ ರೈತರ ಆತ್ಮಹತ್ಯೆ ಎನ್ನುವುದು ಒಂದು ಶಾಪವಾಗಿ ಪರಿಣಮಿಸಿದೆ. ಕಳೆದ ಹತ್ತು ಹದಿನೈದು ವರ್ಷಗಳಲ್ಲಿ ಸಾವಿರಾರು ಮಂದಿ ರೈತರು ಬಡತನ, ಸಾಲ ಸೋಲಗಳಿಂದ ಮುಕ್ತರಾಗದೆ ಆತ್ಮಹತ್ಯೆಗೆ ಶರಣಾಗಿರುವುದನ್ನು ನಾವು ಕಂಡಿದ್ದೇವೆ. ಅದು ಇವತ್ತಿಗೂ ಮುಂದುವರಿಯುತ್ತಿದೆ. ಮಳೆಯ ಕೊರತೆ, ಭೂಕಬಳಿಕೆ, ಕೃಷಿಯ ಯಂತ್ರೀಕರಣ, ಮಾರುಕಟ್ಟೆಯ ಕುಸಿತ, ಮಧ್ಯವರ್ತಿಗಳ ಹಾವಳಿ ಇವೆಲ್ಲವುಗಳಿಂದ ಬಡರೈತರ ಸ್ಥಿತಿ ಚಿಂತಾಜನಕವಾಗಿದೆ. ಪ್ರಧಾನವಾಗಿ ನಿರುದ್ಯೋಗದ ಬಾಧೆ ತೀವ್ರವಾಗಿರುವುದು ಈ ಕ್ಷೇತ್ರದಲ್ಲಿಯೇ. ಅದನ್ನು ಉಪಶಮನಗೊಳಿಸುವ ಉದ್ದೇಶದಿಂದ, ಜಾರಿಗೆ ಬಂದದ್ದು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಭರವಸೆ ಕಾಯಿದೆ, ಇಂಗ್ಲಿಷಿನಲ್ಲಿ ಹ್ರಸ್ವವಾಗಿ 'ನರೇಗಾ'. ಇದು ಜಾರಿಗೆ ಬಂದದ್ದು ಸೆಪ್ಟೆಂಬರ್ ೨೦೦೫ರಲ್ಲಿ. ಈ ಕಾಯಿದೆಯ ಅನ್ವಯ ಬಡರೈತರ ಕುಟುಂಬದಲ್ಲಿ ಒಬ್ಬನಿಗಾದರೂ ವರ್ಷದಲ್ಲಿ ನೂರು ದಿನಗಳ ಉದ್ಯೋಗದ ಭರವಸೆಯನ್ನು ಸರಕಾರ ನೀಡಿದೆ. ಇದು ಕಡ್ಡಾಯ. ಇದು ಸ್ವಾಗತಾರ್ಹವಾದ ಕಾಯಿದೆ ಏನೋ ಸರಿಯೇ. ಆದರೆ ಅದನ್ನು ಕಾರ್ಯಗತ ಮಾಡುವವರು ಸರಕಾರಿ ಅಧಿಕಾರಿಗಳು ತಾನೆ. ತಕ್ಕಮಟ್ಟಿಗೆ ಇದು ಬಡರೈತರಿಗೆ ಸಾಂತ್ವನ ನೀಡುವುದಾದರೂ ಜಾರಿಯಾಗುತ್ತಿರುವುದು ಅಸಮರ್ಪಕ. ಸಾಕಷ್ಟು ಅವ್ಯವಹಾರಗಳು ನಡೆಯುತ್ತಿರುವುದು ಬೆಳಕಿಗೆ ಬಂದಿದೆ. ಸಾರ್ವಜನಿಕ ಸಂಘಟನೆಗಳು ಗ್ರಾಮಪಂಚಾಯಿತಿಗಳು, ರೈತಸಂಘಗಳು ಈ ಯೋಜನೆ ರೈತರಿಗೆ ಉಪಯೋಗವಾಗುವ ರೀತಿಯಲ್ಲಿ ಜಾರಿಗೆ ಬರುವಂತೆ ಕಾಯ್ದುಕೊಳ್ಳಬೇಕಾಗಿದೆ. ಹತ್ತು ವರ್ಷಗಳಿಂದ ಈ ಕಾಯಿದೆ ಜಾರಿಯಲ್ಲಿದ್ದರೂ ರೈತರ ಆತ್ಮಹತ್ಯೆ ಪ್ರಕರಣಗಳೇನೂ ಕಮ್ಮಿಯಾಗಿಲ್ಲ.

*(ಮುಂದುವರಿಯುವುದು)*

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಸಾಮಾನ್ಯ ಪದವಿ ಶಿಕ್ಷಣ ಪುನಾರಚನೆ
# ಡಾ॥ ಚಿದಾನಂದ ಗೌಡರ ವರದಿಯ ಸುತ್ತ

ಸ್ಥಳೀಯ ಮತ್ತು ಜಾಗತಿಕ ಮಾರುಕಟ್ಟೆಗಳ ನಡುವಿನ ಅಂತರ ಕಡಿಮೆಯಾಗಿ ಜಗತ್ತೇ ಗ್ರಾಮವಾಗಿ, ಗ್ರಾಮವೇ ಒಂದು ಜಗತ್ತು ಎಂಬ ಕಲ್ಪನೆ ಮಾಸಿಹೋಗಿರುವ ಇಂದಿನ ದಿನಗಳಲ್ಲಿ ಸುಸ್ಥಿರ ಉದ್ಯೋಗ ವ್ಯವಸ್ಥೆಯನ್ನು ಕಂಡುಕೊಳ್ಳುವುದು ನಮ್ಮ ಸಮಗ್ರ ಬದುಕಿನ ಸ್ವಾಸ್ಥ್ಯದ ದೃಷ್ಟಿಯಿಂದ ಅತ್ಯಂತ ಮಹತ್ವದ್ದಾಗಿದೆ. ಬೆಳೆಯುತ್ತಿರುವ ಜನಸಂಖ್ಯೆಗೆ ತಕ್ಕಂತೆ ಅನುಭೋಗದ ಅಗತ್ಯಗಳನ್ನು ಉತ್ಪಾದಿಸಿ ವಿತರಿಸಲು ಸೂಕ್ತ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲಗಳು ಅತ್ಯಗತ್ಯ. ಎಲ್ಲ ಕ್ಷೇತ್ರಗಳಿಗೆ ಜ್ಞಾನ, ಕೌಶಲ್ಯಗಳನ್ನು ಒದಗಿಸುವ ಶಿಕ್ಷಣ ಕ್ಷೇತ್ರ, ವಿಶೇಷವಾಗಿ ಉನ್ನತ ಶಿಕ್ಷಣ ವಲಯ, ಈ ನಿಟ್ಟಿನಲ್ಲಿ ಹೆಚ್ಚು ಜವಾಬ್ದಾರಿಯುತ ಪಾತ್ರ ವಹಿಸಬೇಕಿದೆ. ಇಂದು ನಮ್ಮ ಕಾಲೇಜು–ವಿಶ್ವವಿದ್ಯಾನಿಲಯಗಳಲ್ಲಿ ನೀಡುವ ಶಿಕ್ಷಣಕ್ಕೂ ಮತ್ತು ಅದರ ಅನ್ವಯವಾಗಬೇಕಿದ್ದ ವೃತ್ತಿ–ಉದ್ಯೋಗಗಳ ನಿತ್ಯಬದುಕಿಗೂ ನಡುವಿನ ಅಂತರ ದಿನೇ ದಿನೇ ಹೆಚ್ಚಾಗುತ್ತಿರುವುದೇ ಪದವೀಧರರ ನಿರುದ್ಯೋಗಕ್ಕೆ ಕಾರಣವಾಗಿದೆ. ಪ್ರತಿವರ್ಷ ಕೋಟ್ಯಂತರ ಪದವೀಧರರು ಕಾಲೇಜು–ವಿಶ್ವವಿದ್ಯಾನಿಲಯಗಳಿಂದ ಹೊರಬರುತ್ತಿದ್ದು, ಅವರಿಗೆ ಆರ್ಥಿಕ ಬದುಕಿನ ಭರವಸೆ ಹುಸಿಯಾಗುತ್ತಿದೆ. ಅತ್ಯಂತ ಸಂಭ್ರಮದಿಂದ ಕನಸುಗಳನ್ನು ಹೊತ್ತು ಪದವಿ ತರಗತಿಗಳಿಗೆ ಪ್ರವೇಶಿಸಿದ ವಿದ್ಯಾರ್ಥಿಗಳು ಗೊಂದಲ, ತಲ್ಲಣಗಳಿಂದ ಪದವಿ ಪ್ರಮಾಣಪತ್ರ ಹಿಡಿದು ಹೊರಬರುತ್ತಿರುವುದು ವಾಸ್ತವ.

ಕರ್ನಾಟಕ ಜ್ಞಾನ ಆಯೋಗ ೨೦೧೦ರಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ ಬಹುತೇಕ ವಿದ್ಯಾರ್ಥಿಗಳು ಸ್ನಾತಕ ಮತ್ತು ಸ್ನಾತಕೋತ್ತರ ಸಾಮಾನ್ಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಉದ್ಯೋಗದಾಯಿತ್ವ ಕೌಶಲ್ಯಗಳ ಕೊರತೆ, ನಿರುಪಯುಕ್ತ ಪಠ್ಯ, ಜಡ ಅಧ್ಯಾಪಕರು, ಭೌತಿಕ ಮೂಲ ಸೌಲಭ್ಯಗಳ ಕೊರತೆಯನ್ನು ಬೊಟ್ಟು ಮಾಡಿ ತೋರಿಸಿರುವುದು ವರದಿಯಲ್ಲಿ ದಾಖಲಾಗಿದೆ. ಇನ್ನೂ ಆತಂಕಕಾರಿ ಅಂಶವೆಂದರೆ ಯಾವುದನ್ನು ವಿದ್ಯಾರ್ಥಿಗಳು ಕೊರತೆ ಎಂದು ನೇರವಾಗಿ ಪ್ರತಿಕ್ರಿಯಿಸಿದ್ದಾರೋ ಅವುಗಳನ್ನು ಅಧ್ಯಾಪಕ ಮತ್ತು ಆಡಳಿತ ವರ್ಗ ಗಂಭೀರವಾಗಿ ಪರಿಗಣಿಸದೆ ಇರುವುದು. ಇವರಿಗೆ ಅವರು ಬೋಧಿಸುವ ವಿಷಯ ವಿದ್ಯಾರ್ಥಿಗಳ ನಂತರದ ಬದುಕಿಗೆ ನಿರರ್ಥಕವಾಗಿದೆ ಎನ್ನುವುದು ತಿಳಿಯದೆ ಇರುವುದು ಅಥವಾ ಆ ಬಗ್ಗೆ ತಮ್ಮ ಜವಾಬ್ದಾರಿಯೇ ಇಲ್ಲವೇನೋ ಎಂಬಂತಹ ಮನಃಸ್ಥಿತಿ ಅವರದ್ದು. ಇದನ್ನು ಈ ಅಧ್ಯಯನ ವರದಿ ಅತ್ಯಂತ ಸ್ಪಷ್ಟವಾಗಿ ಬಿಂಬಿಸಿದೆ.

ಈ ಹಿನ್ನೆಲೆಯಲ್ಲಿ ಸಾಮಾನ್ಯ ಪದವಿಗಳಾದ ಬಿಎ, ಬಿಎಸ್ಸಿ, ಬಿಕಾಂ, ಬಿಬಿಎಂ, ಬಿಸಿಎ ಮೊದಲಾದ ಪದವಿಗಳ ಶಿಕ್ಷಣ ವಿಧಾನ, ವಿನ್ಯಾಸಗಳಲ್ಲಿ ಬದಲಾವಣೆ ತರುವ ಉದ್ದೇಶದಿಂದ ಕರ್ನಾಟಕ ಘನ ಸರ್ಕಾರದ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು ಡಾ॥ ಕೆ. ಚಿದಾನಂದಗೌಡ ಇವರ ಅಧ್ಯಕ್ಷತೆಯಲ್ಲಿ ಡಾ॥ ಡಿ. ವೆಂಕಟರಾಮಯ್ಯ, ಡಾ॥ ಎಂ. ಡಿ. ಮುತ್ತಮ್ಮ ಮತ್ತು ಡಾ॥ ರಾಜೇಂದ್ರ ಫ್ರಾನ್ಸಿಸ್ ಇವರ ಸದಸ್ಯತ್ವದೊಂದಿಗೆ ಅಧ್ಯಯನ ಸಮಿತಿಯನ್ನು ನೇಮಕ

**ಡಾ॥ ಜಿ. ಎನ್. ಮಲ್ಲಿಕಾರ್ಜುನಪ್ಪ**

ಮಾಡಿದ್ದು, ಅದೀಗ ತನ್ನ ವರದಿ ನೀಡಿದೆ. ಸಾಮಾನ್ಯ ಶಿಕ್ಷಣ ಪದವಿಗಳನ್ನು ಇಂದಿನ ಮಾಹಿತಿ ತಂತ್ರಜ್ಞಾನ ಸೌಲಭ್ಯಗಳನ್ನು ಬಳಸಿಕೊಂಡು ಪದವಿಯ ನಂತರ ವಿದ್ಯಾರ್ಥಿಗಳಿಗೆ ತಕ್ಷಣದ ಉದ್ಯೋಗ ಕಂಡುಕೊಳ್ಳಲು ಅವಶ್ಯವಿರುವ ಪದವಿ ಪುನಾರಚನಾ ಕ್ರಮಗಳ ಶಿಫಾರಸುಗಳನ್ನು ನೀಡುವಂತೆ ಸಮಿತಿಯನ್ನು ಕೇಳಲಾಗಿತ್ತು. ಅದರಂತೆ ಸಮಿತಿಯು ಸಮಸ್ಯೆಗಳನ್ನು ಕುರಿತು ಅಧ್ಯಯನ ನಡೆಸಿ, ನೀಡಿರುವ ಶಿಫಾರಸುಗಳ ಮುಖ್ಯಾಂಶಗಳು ಹೀಗಿವೆ :

**ಅಧ್ಯಯನ ಸಮಿತಿ ವರದಿಯ ಮುಖ್ಯಾಂಶಗಳು**

✳ ವಿಶ್ವವಿದ್ಯಾನಿಲಯವೊಂದು ಪದವಿ ತರಗತಿಗಳ ಬೋಧನೆಗೆ ನಿಗದಿಪಡಿಸುವ ಪಠ್ಯ ವಿಷಯ ಮತ್ತು ಬೋಧನಾ ವಿಧಾನಗಳು ಸೈದ್ಧಾಂತಿಕ, ಪ್ರಾಯೋಗಿಕ, ಕ್ಷೇತ್ರಕಾರ್ಯ, ಕೌಶಲ್ಯ, ಪರಿವಿನ್ಯಾಸ, ಉದ್ಯೋಗಶೀಲತೆ ಮತ್ತು ನೀತಿವರ್ಧನೆಗಳನ್ನು ಒಳಗೊಂಡಿರಬೇಕು.




✳ ಸ್ನಾತಕ ಪದವಿ ಅಧ್ಯಯನ ಅವಧಿ ಈಗಿನ ಮೂರು ವರ್ಷಗಳ ಬದಲಿಗೆ ನಾಲ್ಕು ವರ್ಷಗಳದ್ದಾಗಿದ್ದು (ಆನರ್ಸ್), ವಿದ್ಯಾರ್ಥಿಗಳು ಎರಡು ಐಚ್ಛಿಕ ವಿಷಯಗಳನ್ನು ಮೊದಲ ಮೂರು ವರ್ಷಗಳವರೆಗೆ ಅಧ್ಯಯನ ಮಾಡಿ ನಾಲ್ಕನೇ ವರ್ಷದಲ್ಲಿ ಈ ಎರಡು ವಿಷಯಗಳಲ್ಲಿ ಎರಡು ಅಥವಾ ಒಂದನ್ನು ಐಚ್ಛಿಕ ವಿಷಯವಾಗಿ ಅಧ್ಯಯನ ಮಾಡುವುದು. ಹಾಲಿ ಇರುವಂತೆ ಎರಡು ವರ್ಷಗಳ ಸ್ನಾತಕೋತ್ತರ ಪದವಿ ಅವಧಿಯನ್ನು ಯಥಾಸ್ಥಿತಿ ಮುಂದುವರಿಸುವುದು.

✳ ಸ್ನಾತಕ ಪದವಿಯಲ್ಲಿ ಮೊದಲ ಮೂರು ವರ್ಷಗಳಲ್ಲಿ ಮೇಲೆ ಹೆಸರಿಸಿರುವಂತೆ ಎರಡು ಐಚ್ಛಿಕ ವಿಷಯಗಳ ಜೊತೆಗೆ ಅದೇ ಐಚ್ಛಿಕ ವಿಷಯಗಳಿಗೆ ಸಂಬಂಧಿಸಿದ ಮತ್ತು ಸಮಿತಿಯು ಪಟ್ಟಿ ಮಾಡಿರುವ ಕೌಶಲ್ಯಾಭಿವೃದ್ಧಿ ಕುರಿತ ವಿಷಯವೊಂದನ್ನು ಕಡ್ಡಾಯವಾಗಿ ಅಧ್ಯಯನ ಮಾಡುವುದು.

✳ ಮೊದಲ ಮೂರು ವರ್ಷಗಳ ಆರು ಸೆಮಿಸ್ಟರ್‌ನಲ್ಲಿ ಮೇಲಿನ ವಿಷಯಗಳ ಜೊತೆಗೆ ಕೆಳಗಿನ ವಿಷಯಗಳಲ್ಲಿ ಪ್ರತಿ ಸೆಮಿಸ್ಟರ್‌ಗೆ ಒಂದರಂತೆ ಬೋಧನೆಗೆ ಅವಕಾಶ ಕಲ್ಪಿಸುವುದು.

(i) ಭಾರತದ ಉಚ್ಚ ನ್ಯಾಯಾಲಯ ಆದೇಶಿತ ಮೂರು ವಿಷಯಗಳು : ಮಾನವ ಹಕ್ಕುಗಳು ಮತ್ತು ಪರಿಸರ ಅಧ್ಯಯನ ಹಾಗೂ ಭಾರತೀಯ ಸಂವಿಧಾನ, (ii) ಕಂಪ್ಯೂಟರ್ ತರಬೇತಿ, (iii) ಗ್ರಾಹಕ ಸೇವೆ, (iv) ಉದ್ಯೋಗಮೂಲ ಮೃದು ಕೌಶಲ್ಯಗಳು, (v) ಅಂತರರಾಷ್ಟ್ರೀಯ ಸಂವಹನ ಉದ್ದೇಶಿತ ಆಂಗ್ಲಭಾಷೆ ಮತ್ತು (vi) ಉದ್ಯಮಶೀಲತೆ.

✳ ದೇಹ, ಮನಸ್ಸು, ಹೃದಯಾಧಾರಿತ ಸಮಗ್ರ ತರಬೇತಿ ಚಟುವಟಿಕೆಗಳಾಗಿ ಮೊದಲ ಮೂರು ವರ್ಷದ ಆರು ಸೆಮಿಸ್ಟರುಗಳಲ್ಲಿ ಎನ್.ಸಿ.ಸಿ., ಎನ್.ಎಸ್.ಎಸ್., ಕ್ರೀಡೆ, ಯೋಗ, ಸಾಮಾನ್ಯಜ್ಞಾನ, ಪಠ್ಯಪೂರಕ ಚಟುವಟಿಕೆಗಳು, ಸ್ವಯಂಸೇವೆ ಮೊದಲಾದವುಗಳಲ್ಲಿ ವಿದ್ಯಾರ್ಥಿಯು ಆಯ್ಕೆ ಆಧಾರಿತ ಗುಣಾಂಶ ಪದ್ಧತಿ ಮಾದರಿಯಲ್ಲಿ ಇಚ್ಛೆಪಟ್ಟ ಚಟುವಟಿಕೆಗಳ ಅಧ್ಯಯನ.

✳ ಈ ಪ್ರಸ್ತಾಪಿತ ಹೊಸ ಮಾದರಿಯನ್ನು ಅನುಷ್ಠಾನಗೊಳಿಸುವುದರಿಂದ ಪದವಿ ವಿದ್ಯಾರ್ಥಿಗಳಿಗೆ (i) ಅಧ್ಯಯನ ವಿಷಯಗಳಲ್ಲಿ ಆಯ್ಕೆ ಅವಕಾಶ, (ii) ಉದ್ಯೋಗಕ್ಕೆ ಬೇಕಾದ ಕೌಶಲ್ಯಗಳ ಕಲಿಕೆ, (iii) ಪದವಿ ಅಧ್ಯಯನವನ್ನು ಮುಂದುವರಿಸಲಾಗದ ವಿದ್ಯಾರ್ಥಿಗಳಿಗೆ ಈ ಅವಧಿಯಲ್ಲಿ ವಿವಿಧ ರೀತಿಯ ಡಿಪ್ಲಮೋ ಪ್ರಮಾಣಪತ್ರ ಲಭ್ಯತೆ, (iv) ಅಧ್ಯಯನ ವಿಷಯಗಳಲ್ಲಿ ಪೈಪೋಟಿ ನೈಪುಣ್ಯತೆ ಗಳಿಕೆ, (v) ಐಚ್ಛಿಕ ವಿಷಯಗಳಲ್ಲಿ ಸ್ನಾತಕೋತ್ತರ ಪದವಿ ಅಧ್ಯಯನಕ್ಕೆ ವಿಶೇಷ ಪರಿಣತಿ, (vi) ಭೌತಿಕ, ಬೌದ್ಧಿಕ, ಭಾವನಾತ್ಮಕ, ಸಾಮಾಜಿಕ ಮತ್ತು ಮಾನವೀಯ ಗುಣಗಳ ಬೆಳವಣಿಗೆ, (vii) ನಡತೆ, ನಾಗರಿಕತ್ವ, ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ಅರಿವು, ಇವೇ ಮೊದಲಾದ ಅಂಶಗಳ ಬಗ್ಗೆ ಸಬಲೀಕರಣಗೊಳ್ಳುವ ಅವಕಾಶಗಳು ಲಭ್ಯವಾಗಲಿವೆ.

✳ ಮೊದಲ ಎರಡು ವರ್ಷದ ನಾಲ್ಕು ಸೆಮಿಸ್ಟರುಗಳಲ್ಲಿ ಎರಡು ಭಾಷೆಗಳ ಅಧ್ಯಯನ ಅವಕಾಶ. ಒಂದು ಇಂಗ್ಲಿಷ್ ಮತ್ತೊಂದು ಪ್ರಾದೇಶಿಕ ಭಾಷೆ. ಇದು ಹಾಲಿ ಇರುವ ವ್ಯವಸ್ಥೆ ಕೂಡ.

✳ ಈ ಎಲ್ಲ ವಿಷಯಗಳು ಸಕ್ರಮ ಮೌಲ್ಯಮಾಪನಕ್ಕೆ ಒಳಪಟ್ಟು ಹಾಲಿ ಯೋಜಿತ ಸಿ.ಬಿ.ಸಿ.ಎಸ್. (ಆಯ್ಕೆ ಆಧಾರಿತ ಗುಣಾಂಶ ವಿಧಾನ) ಮಾರ್ಗಾವಳಿ ಪ್ರಕಾರ ಫಲಿತಾಂಶ ಘೋಷಿಸುವುದು ಮತ್ತು ಅಂಕಪಟ್ಟಿ ನೀಡುವುದು. ಇದೀಗ ಯು.ಜಿ.ಸಿ.ಯು ಈ ವಿಧಾನವನ್ನು ಬರುವ ೨೦೧೬–೧೭ನೇ ಶೈಕ್ಷಣಿಕ ವರ್ಷದಿಂದ ಎಲ್ಲ ವಿಶ್ವವಿದ್ಯಾನಿಲಯಗಳಿಗೆ ಕಡ್ಡಾಯಗೊಳಿಸುತ್ತಿದೆ. ಪ್ರತಿ ಸೆಮಿಸ್ಟರ್‌ಗೆ ಮತ್ತು ಪೂರ್ಣಾವಧಿ ಪದವಿಗೆ ನಿರ್ಧರಿತ ರೀತಿಯಲ್ಲಿ ಗ್ರೇಡ್ ನೀಡುವ ಮೂಲಕ ವಿದ್ಯಾರ್ಥಿಯ ಫಲಿತಾಂಶ ಶ್ರೇಣಿಯನ್ನು ಪ್ರಕಟಿಸುವುದು.

✳ ಪ್ರತಿ ವಿಷಯದಲ್ಲಿ ಬೋಧನಾ ಕ್ರಮವನ್ನು ಉಪನ್ಯಾಸ, ವೈಯಕ್ತಿಕ ಅಧ್ಯಯನ ಮತ್ತು ಪ್ರಯೋಗ ಎಂದು ವಿಂಗಡಿಸುವುದು ಮತ್ತು ಶಿಕ್ಷಕ–ವಿದ್ಯಾರ್ಥಿ ಅನುಪಾತವನ್ನು ೧:೬೦ (ಉಪನ್ಯಾಸ) ಮತ್ತು ೧:೧೫ (ಪ್ರಯೋಗ/ಟ್ಯುಟೋರಿಯಲ್)ಕ್ಕೆ ಇಳಿಸುವುದು.

✳ ಕಾರಣಾಂತರದಿಂದ ವಿದ್ಯಾಭ್ಯಾಸವನ್ನು ಮುಂದುವರಿಸಲಾಗದ ವಿದ್ಯಾರ್ಥಿಗಳಿಗೆ ಮೊದಲ ವರ್ಷದ ಅಧ್ಯಯನಕ್ಕೆ ಡಿಪ್ಲಮೋ ಎಂದು, ಎರಡನೇ ವರ್ಷಕ್ಕೆ ಅಡ್ವಾನ್ಸಡ್ ಡಿಪ್ಲಮೋ ಎಂದು, ಮೂರನೇ ವರ್ಷಕ್ಕೆ ಪದವಿ ಎಂದೂ ಮತ್ತು ನಾಲ್ಕನೇ ವರ್ಷಕ್ಕೆ ಪದವಿ (ಆನರ್ಸ್) ಎಂದೂ ಪರಿಗಣಿಸುವುದು.

**ಮುಖ್ಯಾಂಶಗಳ ವಿಶ್ಲೇಷಣೆ ಮತ್ತು ಸಮಸ್ಯೆಗಳು**

ಈ ವರದಿಯನ್ನು ರಾಜ್ಯ ಉನ್ನತ ಶಿಕ್ಷಣ ಪರಿಷತ್ತು ರಾಜ್ಯದ ಎಲ್ಲಾ ವಿಶ್ವವಿದ್ಯಾನಿಲಯಗಳಿಗೆ ಕಳುಹಿಸಿ ಇದರ ಜಾರಿಯ ಸಾಧಕ–ಬಾಧಕಗಳ ಬಗ್ಗೆ ಅಭಿಪ್ರಾಯಗಳನ್ನು ಕೇಳಿದ್ದು, ಹೆಚ್ಚು–ಕಡಿಮೆ ಎಲ್ಲಾ ವಿಶ್ವವಿದ್ಯಾನಿಲಯಗಳು ತಮ್ಮ ಅಭಿಪ್ರಾಯಗಳನ್ನು ನೀಡಿವೆ. ಮೊದಲನೆಯದಾಗಿ, ಪದವಿ ಶಿಕ್ಷಣ ಅವಧಿಯನ್ನು ನಾಲ್ಕು ವರ್ಷಗಳಿಗೆ ವಿಸ್ತರಿಸುವ ಬಗ್ಗೆ ಈ ಹಿಂದೆ ಸ್ನಾತಕ ಪದವಿ ಶಿಕ್ಷಣ ಅವಧಿಯನ್ನು ನಾಲ್ಕು ವರ್ಷಗಳಿಗೆ ವಿಸ್ತರಿಸಿ ಮತ್ತೆ ಅದನ್ನು ಯಥಾಸ್ಥಿತಿಗೆ ಬದಲಿಸಿದ ದೆಹಲಿ ವಿಶ್ವವಿದ್ಯಾನಿಲಯದ ತೀರ್ಮಾನವನ್ನು ಉದಾಹರಿಸಿ ರಾಜ್ಯದ ಕೆಲ ವಿಶ್ವವಿದ್ಯಾನಿಲಯಗಳು ನಾಲ್ಕು ವರ್ಷದ ಅವಧಿಯ ವಿಸ್ತರಣೆಗೆ ಅಸಮ್ಮತಿ ವ್ಯಕ್ತಪಡಿಸಿವೆ. ವೃತ್ತಿಶಿಕ್ಷಣ ಪದವಿ ಅವಧಿಯಂತೆ, ಅಂದರೆ ಎಂಜಿನಿಯರಿಂಗ್, ಫಾರ್ಮಸಿ, ನರ್ಸಿಂಗ್, ಡೆಂಟಲ್, ಮೆಡಿಕಲ್ ಮತ್ತಿತರ ಪದವಿ ಅವಧಿಯಂತೆ ಸಾಮಾನ್ಯ ಶಿಕ್ಷಣ ಪದವಿ ಅವಧಿಯನ್ನು ನಾಲ್ಕು ವರ್ಷಗಳಿಗೆ ವಿಸ್ತರಿಸಿ ಏಕರೂಪತೆ ಕಾಯ್ದುಕೊಳ್ಳುವ ಸಮಿತಿಯ ಆಶಯವನ್ನು ಒಪ್ಪಿರುವುದಿಲ್ಲ. ಇತರೆ ದೇಶಗಳಲ್ಲಿ ಅದರಲ್ಲೂ ಮುಖ್ಯವಾಗಿ ಪಾಶ್ಚಿಮಾತ್ಯ ದೇಶಗಳ ವಿಶ್ವವಿದ್ಯಾನಿಲಯಗಳಲ್ಲಿ ಈ ಅವಧಿ ನಾಲ್ಕು ವರ್ಷವಿರುವುದನ್ನು ಸಮಿತಿ ಪ್ರಸ್ತಾಪಿಸಿದೆ. ಜೊತೆಗೆ, ವರದಿಯಲ್ಲಿ ಪ್ರಸ್ತಾಪಿಸಲಾಗಿರುವ ಪಠ್ಯಾಂಶಗಳನ್ನು ಜಾರಿಗೆ ತರಲು ನಾಲ್ಕು ವರ್ಷಗಳ ಅವಧಿ ಬೇಕೆನ್ನುವುದರಲ್ಲಿ ಸರಿ ಸಮರ್ಥನೆ ಕೂಡ ಇದೆ. ಯುಜಿಸಿ ನಿಯಮಾವಳಿ ಪ್ರಕಾರ ಮತ್ತು ಅದರ ಪೂರ್ವಾನುಮತಿ ಇಲ್ಲದೆ ಜಾರಿಗೊಂಡ ದೆಹಲಿ ವಿಶ್ವವಿದ್ಯಾನಿಲಯದ ಕ್ರಮಕ್ಕೆ ಎದುರಾದ ವಿರೋಧಗಳನ್ನು ಉದಾಹರಿಸಿ ಯಾವುದೇ ಸಮರ್ಥನೆಗಳಿಲ್ಲದೆ ಈ ಬದಲಾವಣೆಗೆ ಕರ್ನಾಟಕ ರಾಜ್ಯದಲ್ಲೂ ಅಸಮರ್ಥನೀಯ ಅಸಮ್ಮತಿ ವ್ಯಕ್ತವಾಗಿದೆ.

ಸ್ನಾತಕ ಪದವಿ ಅವಧಿಯನ್ನು ನಾಲ್ಕು ವರ್ಷಕ್ಕೆ ವಿಸ್ತರಿಸುವುದರಿಂದ ಆಗಬಹುದಾದ ಅನುಕೂಲ ಮತ್ತು ಅನಾನುಕೂಲಗಳ ಬಗ್ಗೆ ಸರಿಯಾದ ಚರ್ಚೆಯಾಗಿಲ್ಲ. ನಾಲ್ಕು ವರ್ಷದ ಅವಧಿಯ ಪದವಿಯನ್ನು 'ಆನರ್ಸ್' ಎಂದೂ, ಮೂರು ವರ್ಷದ ಅವಧಿಯ ಪದವಿಯನ್ನು ಈಗಿನ ಯಥಾಸ್ಥಿತಿ ಪದವಿ ಎಂದೂ, ಎರಡು ವರ್ಷದ ಪದವಿ ಅಧ್ಯಯನವನ್ನು 'ಅಡ್ವಾನ್ಸಡ್ ಡಿಪ್ಲಮೋ' ಎಂದೂ, ಒಂದು ವರ್ಷದ ಅಧ್ಯಯನವನ್ನು 'ಡಿಪ್ಲಮೋ' ಎಂದು ಹೆಸರಿಸಬಹುದಾದ ಶಿಫಾರಸನ್ನು

ಇಲ್ಲಿ ಗಮನಿಸಬಹುದಾಗಿದೆ. ಅಂದರೆ, ವಿದ್ಯಾರ್ಥಿಯು ತನ್ನಿಚ್ಛೆಯಂತೆ ಮಧ್ಯದಲ್ಲಿ ನಿರ್ಗಮಿಸಬಹುದು. ವಿದ್ಯಾರ್ಥಿಗಳಿಗೆ ಅಧ್ಯಯನಾವಧಿಯಲ್ಲಿ ಹಲವು ಆಯ್ಕೆ ಸಾಧ್ಯತೆಗಳಿವೆ. ಕಲಿಸುವ ಪಠ್ಯ ಪದವಿಯ ನಂತರ ನಿಜಕ್ಕೂ ಪ್ರಯೋಜನಕಾರಿ ಮತ್ತು ಉದ್ಯೋಗ ಸಹಕಾರಿ ಎನ್ನುವುದು ವಿದ್ಯಾರ್ಥಿಗಳಿಗೆ ಮನದಟ್ಟಾದರೆ ಪದವಿ ಮುಗಿಸಿ ಈಗಿನಂತೆ ನಿರುದ್ಯೋಗಿಯಾಗುವುದರ ಬದಲು, ಉದ್ಯೋಗ ಭರವಸೆಯಿರುವ ಪದವಿಯಲ್ಲಿ ಒಂದು ವರ್ಷ ಹೆಚ್ಚಾದರೂ ಪರವಾಗಿಲ್ಲ ವಿದ್ಯಾರ್ಥಿಯಾಗಿರುವುದೇ ಲೇಸೆಂದು ಅವರಾದರೂ ಭಾವಿಸಿಯಾರು. ಉದ್ಯೋಗ ಭರವಸೆ ಇರುವ ಯಾವುದೇ ಶಿಕ್ಷಣ ಅಥವಾ ತರಬೇತಿಯನ್ನು ಅದರ ಅವಧಿ ಎಷ್ಟಾದರೂ ಯಾರಿಗೂ ಚಿಂತೆ ಇಲ್ಲ. ಮತ್ತು ಪೋಷಕರಾದರೂ ಹೆಚ್ಚುವರಿ ಶುಲ್ಕ ತೆರಲೂ ಕೂಡ ಯೋಚಿಸಲಾರರು. ಆದರೆ ಹಣ, ಅವಧಿ ವ್ಯಯ ಮಾಡಿಯೂ ಮಕ್ಕಳು ಉದ್ಯೋಗವಿಲ್ಲದೆ ಮನೆಯಲ್ಲಿ ಕೂರುವುದನ್ನು ಯಾರೂ ಸಹಿಸುವುದಿಲ್ಲ. ಸರ್ಕಾರ ಮತ್ತು ಶಿಕ್ಷಣ ತಜ್ಞರು ಇದನ್ನು ಅರ್ಥ ಮಾಡಿಕೊಳ್ಳಬೇಕಿದೆ.

ಎರಡನೆಯದಾಗಿ, ಮೊದಲ ಮೂರು ವರ್ಷದ ಆರು ಸೆಮಿಸ್ಟರ್‌ಗಳ ಕಲಿಕೆಯಲ್ಲಿ ಸಾಮಾನ್ಯವಾಗಿ ಪ್ರತಿ ವಿಶ್ವವಿದ್ಯಾನಿಲಯದಲ್ಲಿ ಈಗಿರುವ ಮೂರು ಐಚ್ಛಿಕ ವಿಷಯಗಳ ಬದಲಾಗಿ ಎರಡು ಐಚ್ಛಿಕ ವಿಷಯಗಳನ್ನು ಕಲಿಯುವುದು. ಉದಾಹರಣೆಗೆ ಪ್ರಥಮ ಬಿಎ ಪದವಿಯಲ್ಲಿ ಇತಿಹಾಸ, ರಾಜ್ಯಶಾಸ್ತ್ರ ಮತ್ತು ಅರ್ಥಶಾಸ್ತ್ರಗಳ ಮೂರು ವಿಷಯಗಳ ಒಂದು ಸಂಯೋಜನೆಯಲ್ಲಿ ಎರಡು ವಿಷಯಗಳನ್ನಿಟ್ಟುಕೊಂಡು ಒಂದು ವಿಷಯವನ್ನು ಕೈಬಿಡಬೇಕಾಗುತ್ತದೆ. ಹಾಗಾದಾಗ, ಕೈಬಿಟ್ಟ ವಿಷಯದ ಅಧ್ಯಾಪಕರ ಕಾರ್ಯಭಾರದ ಕೊರತೆಯಾಗುತ್ತದೆ ಎನ್ನುವ ಪ್ರಶ್ನೆ. ಹೀಗಾಗದಂತೆ ಉದ್ಯೋಗದ ದೃಷ್ಟಿಯಿಂದ ಅನುಕೂಲವಾಗುವ ಇತರೆ ವಿಷಯಗಳ ಜೊತೆಗೆ ಕೈಬಿಟ್ಟ ವಿಷಯವನ್ನು ಕೂಡಿಸಿ ಮತ್ತೊಂದು ಸಂಯೋಜನೆ ಮಾಡಿ ಹಾಲಿ ಅಧ್ಯಾಪಕರ ಕಾರ್ಯಭಾರ ಕೊರತೆಯಾಗದಂತೆ ಸರಿದೂಗಿಸಬಹುದು. ಇನ್ನು ವರದಿಯಲ್ಲಿ ಪ್ರಸ್ತಾಪಿಸಿರುವಂತೆ ಐಚ್ಛಿಕ ಎರಡು ವಿಷಯಗಳಲ್ಲಿನ ಪಠ್ಯಕ್ಕೆ ಸಂಬಂಧಿಸಿದಂತೆ ಕೌಶಲ್ಯಮೂಲ ವಿಷಯವನ್ನು ಸಂಯೋಜಿಸಿ ಮೂರನೆಯ ವಿಷಯ ಪಠ್ಯ ರೂಪಿಸುವುದು ನಿಜಕ್ಕೂ ಕಷ್ಟದ ಕೆಲಸ. ಈ ಬಗ್ಗೆ ಪರಿಣಿತರ ಕಸರತ್ತು ಬೇಕೇ ಬೇಕು. ಜೊತೆಗೆ, ಈ ಕೌಶಲ್ಯಗಳ ಬೋಧನೆಗೆ ಪೂರಕ ಮೂಲಸೌಲಭ್ಯಗಳ ನಿರ್ಮಾಣವಾಗಬೇಕು. ಇದರ ಕೊರತೆಯೇ ಈ ವರದಿಯ ಅನುಷ್ಠಾನದ ಸಮ್ಮತಿಗೆ ಹಿನ್ನಡೆ ಯಾದರೂ ಆಗಬಹುದು.

ಮೂರನೆಯದಾಗಿ, ವಿಶ್ವವಿದ್ಯಾನಿಲಯಗಳು ಮತ್ತು ಕರ್ನಾಟಕ ಉನ್ನತ ಶಿಕ್ಷಣ ಪರಿಷತ್ತು ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಮಾಹಿತಿ ತಂತ್ರಜ್ಞಾನ ಬಳಸಿ ತಮ್ಮ ಅಂತರ್ಜಾಲ ತಾಣಗಳ ಮೂಲಕ ವಿದ್ಯಾರ್ಥಿಗಳಿಗೆ ಅವರ ಐಚ್ಛಿಕ ಮತ್ತು ಇತರೆ ವಿಷಯಗಳ ಬಗ್ಗೆ ವ್ಯಾಪಕ ಮಾಹಿತಿಯನ್ನು ಒದಗಿಸುವುದು. ಸ್ನಾತಕ ಪದವಿ ಅಧ್ಯಯನ ವಿಷಯಗಳು ಮತ್ತು ಇವುಗಳ ವೃತ್ತಿ ಪ್ರಯೋಜನಗಳನ್ನು ವಿದ್ಯಾರ್ಥಿಗಳಿಗೆ ಅವರು ಈ ತರಗತಿಗಳಿಗೆ ಪ್ರವೇಶ ಪಡೆಯುವ ಸಂದರ್ಭದಲ್ಲಿ ಮತ್ತು ನಂತರವೂ ಅನುಕೂಲವಾಗುವಂತೆ ಪ್ರಕಟಿಸುವುದು. ಇದರ ಪ್ರಯೋಜನ ಪಡೆದು ಅಧ್ಯಾಪಕರೂ ಕೂಡ ತದ್ರೂಪ ತರಗತಿಗಳ ಮೂಲಕ ಕಾಲೇಜುಗಳಲ್ಲಿ ಬೋಧನೆ, ಕಲಿಕೆ ಮತ್ತು ಮೌಲ್ಯಮಾಪನ ಕೆಲಸ ನಿರ್ವಹಿಸುವುದು. ಜೊತೆಗೆ, ವಿದ್ಯಾರ್ಥಿಗಳು ತರಗತಿಯ ಒಳಗೆ ಮತ್ತು ಹೊರಗೆ ನಿರಂತರವಾಗಿ ಕಲಿಕೆಯಲ್ಲಿ ತೊಡಗುವಂತೆ ಮತ್ತು ಕಲಿತ ವಿಷಯಗಳನ್ನು ಮುಂದೆ ಅವರ ವೃತ್ತಿ–ಉದ್ಯೋಗಗಳನ್ನಾಗಿ ಪರಿವರ್ತಿಸಿಕೊಳ್ಳಲು ಇರಬಹುದಾದ ಅವಕಾಶಗಳ ಬಗ್ಗೆ ತಿಳಿದುಕೊಳ್ಳಲು ನೆರವಾಗುವಂತಹ ಅಧ್ಯಯನ ವರದಿ, ಕ್ಷೇತ್ರಕಾರ್ಯ, ವರದಿಯ ಮಂಡನೆ, ಚರ್ಚೆ, ಮೊದಲಾದವುಗಳನ್ನು ಕಾರ್ಯಗತಗೊಳಿಸುವುದು.

ನಾಲ್ಕನೆಯದಾಗಿ ಮತ್ತು ಬಹುಮುಖ್ಯವಾಗಿ, ಆರ್ಥಿಕ ಹೊರೆ ಕಾರಣ ನೀಡಿ ಸರ್ಕಾರ ಮತ್ತು ಅಧಿಕಾರಿ ವರ್ಗ ಈ ವರದಿಯನ್ನು ಸಾರಾಸಗಟಾಗಿ ಕೈಬಿಡುವ ಅಥವಾ ತಿಪ್ಪೆ ಸಾರಿಸುವ ರೀತಿಯಲ್ಲಿ ಜಾರಿಗೊಳಿಸಬಹುದಾದ ಸಾಧ್ಯತೆಯಿರುವ ಶಿಫಾರಸೆಂದರೆ, ಬೋಧಕ ಮತ್ತು ವಿದ್ಯಾರ್ಥಿಗಳ ಅನುಪಾತವನ್ನು ೧:೬೦ ಮತ್ತು ೧:೧೫ ಎಂದು ಕ್ರಮವಾಗಿ ಉಪನ್ಯಾಸ ಮತ್ತು ಪ್ರಯೋಗ / ಟ್ಯುಟೋರಿಯಲ್ ತರಗತಿಗಳಿಗೆ ನಿಗದಿಪಡಿಸಿರುವುದು. ಸದ್ಯಕ್ಕೆ ಕಾಲೇಜುಗಳಲ್ಲಿ ಬೋಧನೆ ಎನ್ನುವುದು ಭಾಷಣವಾಗಿ ರೂಪಾಂತರಗೊಂಡಿರುವುದು ಸತ್ಯ. ಈಗಿನ ಸ್ಥಿತಿ ಎಂದರೆ, ಒಟ್ಟು ಅವಶ್ಯಕತೆಯ ಮೂರನೇ ಎರಡರಷ್ಟು ಅಧ್ಯಾಪಕ ಹುದ್ದೆಗಳು ಖಾಲಿ ಇವೆ. ಕಳೆದ ಮೂರು ದಶಕಗಳಲ್ಲಿ ಅಧ್ಯಾಪಕರ ನೇಮಕಾತಿ ನಡೆಯದೆ ಅನುದಾನಿತ ಖಾಸಗಿ ಕಾಲೇಜುಗಳು ಮುಚ್ಚುವ ಹಂತ ತಲುಪಿದ್ದರೆ, ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು ಮತ್ತು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಪದವಿ ತರಗತಿಗಳು ಪ್ರವೇಶ ಮಿತಿಯ ಏರಿಕೆಯಿಂದಾಗಿ ದೊಡ್ಡಿಗಳಂತಾಗಿವೆ. ಸ್ನಾತಕ ಮತ್ತು ಸ್ನಾತಕೋತ್ತರ ಪದವಿಗಳಲ್ಲಿ ಕ್ರಮವಾಗಿ ೧೦೦ ಮತ್ತು ೬೦ ವಿದ್ಯಾರ್ಥಿಗಳನ್ನಿಟ್ಟುಕೊಂಡು ಯಾವ ಪ್ರಾಧ್ಯಾಪಕ ತಾನೆ ಅವರಿಗೆ ವೈಯಕ್ತಿಕ ಗಮನ ನೀಡಿ ಬೋಧಿಸಬಹುದು, ಉಪಕರಣಗಳನ್ನು ನೀಡಿ ಪ್ರಯೋಗ ಮಾಡಿಸಬಹುದು, ವಿಷಯಗಳನ್ನು ನೀಡಿ ಗುಂಪು ಚರ್ಚೆ – ಚರ್ಚಾಸ್ಪರ್ಧೆ ಏರ್ಪಡಿಸಬಹುದು, ಕ್ಷೇತ್ರಕಾರ್ಯದ ಪ್ರಾಜೆಕ್ಟ್ ವರದಿಗಳನ್ನು ತಿದ್ದಬಹುದು ?

**ಅಭಿಪ್ರಾಯಗಳು**

ಸಾಮಾನ್ಯ ಪದವಿ ಶಿಕ್ಷಣ ಪುನಾರಚನೆಯ ಬಗ್ಗೆ ಸಂಬಂಧಿಸಿದ ವಲಯದಲ್ಲಿ ಅಪೇಕ್ಷಿತ ಕಾಳಜಿಯ ಕೊರತೆಯಿಂದಾಗಿಯೇ ಪದವೀಧರರಿಗೆ ಈ ದುಃಸ್ಥಿತಿ ಬಂದೊದಗಿದೆ. ಕಳೆದ ದಶಕದ ಆರಂಭದಿಂದಲೂ ರಾಷ್ಟ್ರೀಯ ಮೌಲ್ಯಮಾಪನ ಮತ್ತು ಮಾನ್ಯತಾ ಪರಿಷತ್ತು (ಎನ್.ಎ.ಎ.ಸಿ.) ವಿದ್ಯಾರ್ಥಿಗಳ ಉದ್ಯೋಗದಾಯಿತ್ವ ಮತ್ತು ಮೌಲ್ಯಾಧಾರಿತ ಬೋಧನೆ, ಕಲಿಕೆ ಮತ್ತು ಪರೀಕ್ಷೆ

**ಡಾ॥ ಚಿದಾನಂದಗೌಡರ ಸಮಿತಿಯ ವರದಿಯನ್ನು ಆಧಾರವಾಗಿಯೋ, ನೆಪವನ್ನಾಗಿಯೋ ಇಟ್ಟುಕೊಂಡು ವಿಸ್ತೃತ ಚರ್ಚೆ-ಸಂವಾದ ನಡೆಸಿ ಅವಶ್ಯವಿರುವ ಮೂಲಸೌಲಭ್ಯ ನಿರ್ಮಾಣ ಮತ್ತು ಆಡಳಿತಾತ್ಮಕ ಬದಲಾವಣೆಗಳನ್ನು ಗಮನದಲ್ಲಿಟ್ಟುಕೊಂಡು ಆದಷ್ಟು ಬೇಗ ಮಾದರಿಯೊಂದನ್ನು ತಯಾರಿಸಿ, ಬರುವ ಶೈಕ್ಷಣಿಕ ವರ್ಷದಿಂದ ಪ್ರಥಮ ಪದವಿಯಿಂದ ಜಾರಿಗೊಳಿಸಬಹುದಾಗಿದೆ. ನಂತರದ ತರಗತಿಗಳಿಗೆ ಪ್ರತಿ ವರ್ಷ ಶೈಕ್ಷಣಿಕ ವರ್ಷ ಆರಂಭವಾಗುವ ಆರು ತಿಂಗಳ ಮೊದಲೇ ಎಲ್ಲ ರೀತಿಯ ಮೂಲ ಸೌಲಭ್ಯಗಳ ನಿರ್ಮಾಣವನ್ನು ಪೂರ್ಣಗೊಳಿಸಿಕೊಂಡು, ಪುನಾರಚಿತ ಪದವಿ ಶಿಕ್ಷಣವನ್ನು ಅನುಷ್ಠಾನಗೊಳಿಸಬಹುದಾಗಿದೆ. ಇಲ್ಲಿ ಇರುವ ಮುಖ್ಯ ಪ್ರಶ್ನೆ ಎಂದರೆ ಬೋಧಕ-ವಿದ್ಯಾರ್ಥಿಗಳ ಅನುಪಾತವನ್ನು ಜಾರಿಗೊಳಿಸುವಲ್ಲಿ ಸರ್ಕಾರದ ಬದ್ಧತೆ. ಆರ್ಥಿಕ ಹೊರೆಯ ಕಾರಣ ಮುಂದಿಟ್ಟುಕೊಂಡು ಮಿತವ್ಯಯ ಮಾಡುವುದನ್ನೇ ದಕ್ಷತೆ ಎಂದು ಅಧಿಕಾರಿ ವರ್ಗ ಭಾವಿಸಿದರೆ ನಮ್ಮ ಬಹುಸಂಖ್ಯಾತ ಬಡ ಮತ್ತು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ತಮ್ಮ ಅಮೂಲ್ಯ ಆಯುಷ್ಯ ವ್ಯಯಿಸಿ ಕಳಪೆ ಶಿಕ್ಷಣ ಪಡೆದು ನಿರುದ್ಯೋಗಿ ಹಣೆಪಟ್ಟಿಯೊಂದಿಗೆ ಬೀದಿಯ ಬದುಕಿಗೆ ಬರಬೇಕಾಗುವುದು ಖಚಿತ. ಎದೆಗೆ ಬಿದ್ದ ಅಕ್ಷರ ಬೀದಿಗೆ ಬಿದ್ದ ಬದುಕಾಗಬಾರದು.**

ಕ್ರಮಗಳನ್ನು ಆಧರಿಸಿ ಶ್ರೇಣಿ ನೀಡುತ್ತಾ ಬಂದಿದ್ದರೂ ಕೆಲವೇ ಕೆಲವು ಕಾಲೇಜುಗಳು, ವಿಶ್ವವಿದ್ಯಾನಿಲಯಗಳಲ್ಲಿ ಮಾತ್ರ ಈ ಬಗೆಯ ಶಿಕ್ಷಣ ಅನುಷ್ಠಾನಗೊಂಡಿದೆ. ಇಂದಿನ ದಿನಮಾನಗಳಲ್ಲಿ ಒಂದು ಕಾಲೇಜು ಅಥವಾ ವಿಶ್ವವಿದ್ಯಾನಿಲಯದ ಗುಣಮಟ್ಟ ನಿಜಕ್ಕೂ ಶ್ರೇಣೀಕರಣಗೊಳ್ಳಬೇಕಾಗಿರುವುದು, ಅಲ್ಲಿಂದ ಹೊರಬಂದ ಪದವೀಧರರ ಔದ್ಯೋಗಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಬದುಕಿನ ಸುಸ್ಥಿರತೆ ಅಥವಾ ಯಶಸ್ಸನ್ನು ಆಧರಿಸಿ ಮಾತ್ರ. ಈ ಸಂಬಂಧ ಈ ವಲಯದ ಆಸಕ್ತಿ ಭಾಗೀದಾರರಾದ ವಿದ್ಯಾರ್ಥಿಗಳು, ಪೋಷಕರು, ಅಧ್ಯಾಪಕರು, ಶಿಕ್ಷಣ ತಜ್ಞರ, ಶೈಕ್ಷಣಿಕ ಆಡಳಿತಗಾರರು ಮತ್ತು ವಿದ್ಯಾರ್ಥಿ ಸಂಘಟನೆಗಳ ಪ್ರತಿನಿಧಿಗಳನ್ನು ಸಂಪರ್ಕಿಸಿ ಡಾ॥ ಚಿದಾನಂದ ಗೌಡರ ಜೊತೆಗೆ ಸಂವಾದ ಕಾರ್ಯಕ್ರಮವನ್ನು ದಾವಣಗೆರೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಮತ್ತು ಸ್ನಾತಕೋತ್ತರ ಕೇಂದ್ರದಲ್ಲಿ ಏರ್ಪಡಿಸಲಾಗಿತ್ತು. ಭಾರತವೊಂದರಲ್ಲೇ, ಇಂದಿನ ಉದ್ಯೋಗ ಮಾರುಕಟ್ಟೆಯಲ್ಲಿ ಖಾಲಿ ಇರುವ ವಲಯವಾರು ಉದ್ಯೋಗಗಳು ಮತ್ತು ಅಷ್ಟೇ ಸಂಖ್ಯೆಯ ನಿರುದ್ಯೋಗಿಗಳ ಚಿತ್ರಣವನ್ನು ಅಂಕಿ–ಅಂಶಗಳನ್ನು ಆಧರಿಸಿ ತಿಳಿಸಿದ ಡಾ॥ ಚಿದಾನಂದ ಗೌಡರು ಪದವಿ ಶಿಕ್ಷಣದ ಪುನಾರಚನೆಯ ಪ್ರಸ್ತಾವನೆ ಕುರಿತು ವಿವರಿಸಿದರು.

ಉದ್ಯೋಗದಾಯಿತ್ವದ ದೃಷ್ಟಿಯಿಂದ ಸಾಮಾನ್ಯ ಪದವಿ ಶಿಕ್ಷಣ ಬಹುಸಂಖ್ಯಾತ ವಿದ್ಯಾರ್ಥಿಗಳಿಗೆ ನಿರುಪಯುಕ್ತವಾಗುತ್ತಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ, ಪುನಾರಚನೆಯ ವಿನ್ಯಾಸ ವಿಧಾನಗಳು ಹಾಲಿ ಸೃಷ್ಟಿಸಬಹುದಾದ ಸಮಸ್ಯೆಗಳ ಬಗ್ಗೆ ಉಪಸ್ಥಿತರಿದ್ದ ಎಲ್ಲಾ ಪ್ರತಿನಿಧಿಗಳು ಗಂಭೀರವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಇದರ ಒಟ್ಟಾರೆ ಸಾರಾಂಶ ಎಂದರೆ :

i. ಏನಾದರೂ ಮಾಡಿ, ಒಟ್ಟಾರೆ ನಮ್ಮ ವಿದ್ಯಾರ್ಥಿಗಳು ಅವರ ಓದಿನ ನಂತರ ಯಾವುದಾದರೂ ಒಂದು ಉದ್ಯೋಗ ಮಾಡುವಂತೆ ಮಾಡಿ – **ಪೋಷಕರು.**
ii. ಮೂರು ವರ್ಷದ ಪದವಿ ಶಿಕ್ಷಣ ಅವಧಿ ಪೂರೈಸುವುದೇ ಬಡ ವಿದ್ಯಾರ್ಥಿಗಳಿಗೆ ಕಷ್ಟಕರವಾಗಿರುವಾಗ ಮತ್ತೆ ಒಂದು ವರ್ಷ ವಿಸ್ತರಿಸಿ, ಅವರಿಗೆ ಹೊರೆ ಮಾಡುವುದು ಬೇಡ. ಬದಲಾಗಿ ಇರುವ ಮೂರು ವರ್ಷಗಳ ಅವಧಿಯಲ್ಲೇ ಅವರಿಗೆ ಉದ್ಯೋಗದಾಯಿತ್ವ ಸಬಲೀಕರಣಗೊಳ್ಳುವಂತಹ ಪಠ್ಯ, ಬೋಧನೆ, ಮೌಲ್ಯಮಾಪನ ಕ್ರಮಗಳನ್ನು ಕೈಗೊಳ್ಳುವುದು – **ವಿದ್ಯಾರ್ಥಿ ಸಂಘಟನೆಗಳ ಮುಖಂಡರು.**
iii. ಕಾಲೇಜು ವಿಶ್ವವಿದ್ಯಾನಿಲಯಗಳಲ್ಲಿ ಸೂಕ್ತ ಮೂಲ ಸೌಲಭ್ಯಗಳಿದ್ದು ಒಳ್ಳೆಯ ಬೋಧನಾ ವ್ಯವಸ್ಥೆಯಲ್ಲಿ ಉದ್ಯೋಗ ಭರವಸೆ ಇರುವ ಶಿಕ್ಷಣವನ್ನು ಒಂದು ವರ್ಷ ಹೆಚ್ಚಾದರೂ ಸರಿ ಓದುತ್ತೇವೆ – **ಹಾಲಿ ಅಂತಿಮ ಪದವಿ ವಿದ್ಯಾರ್ಥಿಗಳು.**
iv. ಕಟ್ಟಡ, ಪ್ರಯೋಗಾಲಯ, ಸೂಕ್ತ ಸಿಬ್ಬಂದಿ ವರ್ಗ ಮೊದಲಾದ ಮೂಲ ಸೌಲಭ್ಯಗಳ ನಿರ್ಮಾಣದ ನಂತರ ವಿದ್ಯಾರ್ಥಿಗಳ ಉದ್ಯೋಗ ಕೇಂದ್ರಿತ ಯಾವುದೇ ಬದಲಾವಣೆಯನ್ನು ತಂದರೂ ಸ್ವಾಗತಿಸುತ್ತೇವೆ. ಇದಿಲ್ಲದೆ, ಮುಂದೆ ಎಂದೋ ಇವುಗಳನ್ನು ನಿರ್ಮಿಸುವ ಭರವಸೆಯಿಂದ ಬದಲಾವಣೆಗೆ ಮುಂದಾಗುವುದು ಬೇಡ. ಎಲ್ಲೋ, ಹೇಗೋ, ಏನೋ ಪಾಠ ಮಾಡಿ, ಪರೀಕ್ಷೆ ಬರೆಸಿ, ಅಂಕಪಟ್ಟಿ ಪ್ರಮಾಣ ಪತ್ರ ನೀಡುವ ಪರಿಪಾಠ ನಿಲ್ಲಬೇಕು – **ಪ್ರಾಂಶುಪಾಲರ ವೇದಿಕೆ ಪದಾಧಿಕಾರಿಗಳು.**

## ಅಭಿನಂದನೆ

ಪ್ರೊ॥ ಜೆ. ಆರ್. ಲಕ್ಷ್ಮಣರಾವ್ ಅವರು ವಿಜ್ಞಾನ ಬರವಣಿಗೆಯಲ್ಲಿ ಮಾಡಿರುವ ಜೀವಮಾನ ಸಾಧನೆಗಾಗಿ ಕರ್ನಾಟಕ ಸಂಘ, ಶಿವಮೊಗ್ಗ ಇವರಿಂದ 'ಡಾ॥ ಶಿವರಾಮ ಕಾರಂತ ವಿಜ್ಞಾನ ಸಾಹಿತ್ಯ' ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು. ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದಿಂದ ಅಭಿನಂದನೆಗಳು.

v. ಪಾಠ, ಪ್ರಯೋಗ, ಕೌಶಲ್ಯಾಭಿವೃದ್ಧಿ, ನೈತಿಕ ಮೌಲ್ಯವರ್ಧನೆ ಆಧಾರಿತ ಡಾ॥ ಚಿದಾನಂದಗೌಡರ ವರದಿ ಪ್ರಸ್ತಾಪಿತ ಅಂಶಗಳು ಇಂದು ಅತ್ಯಂತ ಅವಶ್ಯವಾಗಿದ್ದು, ಅಲ್ಪ–ಸ್ವಲ್ಪ ಅವಶ್ಯ ಬದಲಾವಣೆಯೊಂದಿಗೆ ಇದರ ಅನುಷ್ಠಾನ ರಾಜ್ಯಾದ್ಯಂತ ಏಕರೂಪದಲ್ಲಿ ಏಕಕಾಲಕ್ಕೆ ಜಾರಿಯಾಗಬೇಕು. ಇದಕ್ಕೆ ಮುನ್ನ ಬೋಧಕ ಮತ್ತು ಬೋಧಕ ವರ್ಗಕ್ಕೆ ಸೂಕ್ತ ತರಬೇತಿ ನೀಡಿ ವಿಶ್ವಾಸ – ಪ್ರೇರಣೆಗಳನ್ನು ಮೂಡಿಸಬೇಕು – **ವಿಶ್ವವಿದ್ಯಾನಿಲಯದ ವಿಷಯ ನಿರ್ಣಯಗಳ ಪ್ರತಿನಿಧಿಗಳು.**
vi. ಈಗಿರುವ ಬೋಧಕ ವರ್ಗದವರ ಕೊರತೆಯಿಂದಾಗಿ ಸೆಮಿಸ್ಟರ್ ಪದ್ಧತಿಯಲ್ಲಿ ಪಠ್ಯ ಬೋಧನೆ ಮತ್ತು ಪರೀಕ್ಷಾ ನಿರ್ವಹಣೆಯಲ್ಲಿ ಅಧ್ಯಾಪಕರುಗಳಿಗೆ ವಿಶೇಷ ಅಧ್ಯಯನ, ಸಂಶೋಧನೆ ಮತ್ತು ಲೇಖನ, ಪುಸ್ತಕ ಪ್ರಕಟಣೆಗಳಿಗೆ ಸಮಯವೇ ಇಲ್ಲವಾಗಿದೆ. ಇವೆಲ್ಲವುಗಳೂ ವೃತ್ತಿ ಪದೋನ್ನತಿಗಳಿಗೆ ಅವಶ್ಯವಾಗಿದ್ದು, ಕಾಲೇಜು ಶಿಕ್ಷಣ ಇಲಾಖೆ ಬೋಧನಾ ಅವಧಿಯನ್ನು ವಾರಕ್ಕೆ ೧೬ರಿಂದ ೨೨ ಗಂಟೆಗಳಿಗೆ ವಿಸ್ತರಿಸಿ ಆದೇಶ ಹೊರಡಿಸುತ್ತಿದೆ. ಈ ಪರಿಸ್ಥಿತಿಯಲ್ಲಿ ಈ ವರದಿಯಲ್ಲಿನ ಅಪೇಕ್ಷಿತ ಅಂಶಗಳ ಅನುಷ್ಠಾನ ನಿಜಕ್ಕೂ ಸಾಧ್ಯವಿಲ್ಲ. ಬೋಧಕ ಮತ್ತು ವಿದ್ಯಾರ್ಥಿಗಳ ಅನುಪಾತವನ್ನು ವರದಿಯಲ್ಲಿ ಪ್ರಸ್ತಾಪಿಸಿರುವಂತೆ (೧:೬೦ ಮತ್ತು ೧:೧೫) ಕೊಡಡಿ, ಸಿಬ್ಬಂದಿ ವರ್ಗವನ್ನು ವ್ಯವಸ್ಥೆ ಮಾಡಿಕೊಂಡು ಜಾರಿಗೆ ತರುವುದಾದರೆ ಯಾವ ಅಭ್ಯಂತರವೂ ಇಲ್ಲ. – **ಅಧ್ಯಾಪಕರ ವೇದಿಕೆಗಳ ಪದಾಧಿಕಾರಿ ಪ್ರತಿನಿಧಿಗಳು.**
vii. (IMBHA) Integrated Mind, Body and Heart Activitiesಗೆ ಕ್ರೆಡಿಟ್ ಕೊಡುವ ಕ್ರಮ ನಿಜಕ್ಕೂ ಸ್ವಾಗತಾರ್ಹ. ಕಟ್ಟಡ, ಮೈದಾನ ಮೊದಲಾದವುಗಳ ಕೊರತೆಯಲ್ಲಿ ತರಗತಿಗಳನ್ನು ನಡೆಸುವುದೇ ದುಃಸ್ಥಿತಿಯಾಗಿರುವಾಗ ಈ ಎಲ್ಲಾ ಚಟುವಟಿಕೆಗಳನ್ನು ನಡೆಸುವುದಾದರೂ ಹೇಗೆ ? ಹಾಲಿ ಎನ್.ಸಿ.ಸಿ. ವಿದ್ಯಾರ್ಥಿಗಳಿಗೆ ಪೂರ್ಣವಾಗಿ ಸಮವಸ್ತ್ರಗಳೇ ಪೂರೈಕೆಯಾಗಿಲ್ಲ. ಅರೆ–ಬರೆ ಸಮವಸ್ತ್ರದಲ್ಲಿ ಪರೇಡ್ ನಡೆಸಲು ಕೆಡೆಟ್‌ಗಳಿಗೆ ಪ್ರೇರಣೆಯಾದರೂ ಹೇಗೆ ಬಂದೀತು ? ಇದೆಲ್ಲಾ ಕಾಟಾಚಾರದ ತೋರಿಕೆಯ ಕಾರ್ಯಕ್ರಮಗಳಾಗಿರುವುದು ಎಲ್ಲರಿಗೂ ತಿಳಿದ ವಿಷಯ. ಎನ್.ಎಸ್.ಎಸ್., ಸ್ಕೌಟ್ಸ್ ಮತ್ತು ಗೈಡ್ಸ್ ಅಧಿಕಾರಿಗಳಾಗಲು ಯಾವ ಅಧ್ಯಾಪಕರೂ ಮುಂದೆ ಬರುತ್ತಿಲ್ಲ. ಅಧ್ಯಾಪಕರುಗಳ ಹೆಸರುಗಳನ್ನು ಲಾಟರಿ ಹಾಕಿ ಅಧಿಕಾರಿಗಳನ್ನಾಗಿ ಮಾಡಿದ ಉದಾಹರಣೆಗಳು ಸಾಕಷ್ಟಿವೆ. ಈಗಿರುವ ಪರಿಸ್ಥಿತಿಯಲ್ಲೇ ಒಬ್ಬ ದೈಹಿಕ ಶಿಕ್ಷಕ ಎಷ್ಟು ಆಟಗಳನ್ನು ಎಷ್ಟು ವಿದ್ಯಾರ್ಥಿಗಳಿಗೆ ಯಾವಾಗ, ಎಲ್ಲಿ ಆಡಿಸಲು ಸಾಧ್ಯ ? ಇಂಥ ಪೂರಕ ಚಟುವಟಿಕೆಗಳಿಗೆ ವೇಳಾಪಟ್ಟಿಯಲ್ಲಿ ಅವಕಾಶ ಮಾಡಿಕೊಡುವುದಾದರೆ ಮತ್ತು ಪರೀಕ್ಷೆಯನ್ನು ಕಡ್ಡಾಯ ಮಾಡುವುದಾದರೆ ಮಾತ್ರ ಇದರ ಅನುಷ್ಠಾನ ಸಾಧ್ಯ. ಇಲ್ಲವಾದರೆ ಬರೀ ಪಾಲ್ಗೊಂಡ ಮಾತ್ರಕ್ಕೆ ಕ್ರೆಡಿಟ್ ಕೊಡುವ ಅನಿವಾರ್ಯ ಸಂದರ್ಭ ಬರುತ್ತದೆ. – **ಎನ್.ಎಸ್.ಎಸ್., ಎನ್.ಸಿ.ಸಿ., ಕ್ರೀಡಾ ಅಧಿಕಾರಿಗಳು ಮತ್ತು ಪ್ರಾಚಾರ್ಯರ ವೇದಿಕೆ ಪದಾಧಿಕಾರಿ ಪ್ರತಿನಿಧಿಗಳು.**

ಈ ವರದಿಯ ಬಗ್ಗೆ ಈ ಲೇಖಕ ಸಂದರ್ಶಿಸಿ ಚರ್ಚಿಸಿದ ಎಲ್ಲರಲ್ಲೂ ಬಹುತೇಕ ಇದೇ ಅಭಿಪ್ರಾಯಗಳು ಇವೆ. ಅದರಲ್ಲೂ, ಮುಖ್ಯವಾಗಿ ವಿಶ್ವವಿದ್ಯಾನಿಲಯಗಳ ಕುಲಪತಿಗಳು ಮತ್ತು ಕುಲಸಚಿವರುಗಳಿಗೆ ಈ ಪುನಾರಚನೆ ಪ್ರಸ್ತಾವನೆಗಳು ಯು.ಜಿ.ಸಿ. ನಿಯಮಾವಳಿಗನುಗುಣವಾಗಿಲ್ಲ ಎನ್ನುವ ಸಬೂಬು. ಕೆಲವರಿಗಂತೂ ಯಾವುದಾದರೊಂದು ನೆಪದಲ್ಲಿ ಬದಲಾವಣೆಗೆ ಸ್ಪಂದಿಸಲಾಗದ ಬಡತನ ಮತ್ತು ಜಡತನ. ನಿವೃತ್ತಿಯ ಅಂಚಿನಲ್ಲಿರುವವರಿಗೆ ಹೇಗೋ ಕಾಲ ತಳ್ಳುವ ಕಾತುರ. ನಿವೃತ್ತಿ ಅಂಚಿನಲ್ಲಿರುವವರೆಲ್ಲಾ ನಿರ್ಲಿಪ್ತರಾದರೆ ವಿದ್ಯಾರ್ಥಿಗಳ ವೃತ್ತಿ ಉದ್ಯೋಗಗಳ ಭವಿಷ್ಯದ ಗತಿ ಏನು ? ಅತ್ಯಂತ ಜವಾಬ್ದಾರಿಯುತ ತೀರ್ಮಾನಗಳು ಇದೀಗ ಬೇಕಿವೆ.

**ಪುನಾರಚನೆ ಆಶಯ**

ಸಾಮಾನ್ಯ ಪದವಿ ಶಿಕ್ಷಣ ಇಂದು ವಿದ್ಯಾರ್ಥಿಗಳ ಉದ್ಯೋಗದಾಯಿತ್ವ ಸಬಲೀಕರಣದ ದೃಷ್ಟಿಯಿಂದ ನಿರುಪಯುಕ್ತವಾಗುತ್ತಿದೆ ಎನ್ನುವುದು ಮನದಟ್ಟಾದ ಮೇಲೂ ಸಂಬಂಧಪಟ್ಟ ವ್ಯಕ್ತಿ ಮತ್ತು ಸಂಸ್ಥೆಗಳು ತುರ್ತು ಕ್ರಮಕ್ಕೆ ಮುಂದಾಗದಿರುವುದು ನಿಜಕ್ಕೂ ಈ ವರ್ಗ ಯುವಜನತೆಗೆ ಮಾಡುವ ಅನ್ಯಾಯವಾಗುತ್ತದೆ. ಆದ್ದರಿಂದ, ಕರ್ನಾಟಕ ಸರ್ಕಾರದ ಉನ್ನತ ಶಿಕ್ಷಣ

ಸಚಿವಾಲಯ ಕೂಡಲೇ ಕಾರ್ಯೋನ್ಮುಖವಾಗಬೇಕಿದೆ. ಉನ್ನತ ಶಿಕ್ಷಣ ಸಚಿವರೇ ಅಧ್ಯಕ್ಷರಾಗಿರುವ, 'ಕರ್ನಾಟಕ ಉನ್ನತ ಶಿಕ್ಷಣ ಪರಿಷತ್'ಅನ್ನು ಕ್ರಿಯಾಶೀಲಗೊಳಿಸಬೇಕಿದೆ. ಯಾವ ಕಾರಣಕ್ಕೋ ಏನೋ ಇದರ ಇಂದಿನ ಕಾರ್ಯಶೈಲಿ ನಿಜಕ್ಕೂ ನಿಷ್ಕ್ರಿಯವಾಗಿದೆ. ಈಗಾಗಲೇ ಡಾ॥ ಚಿದಾನಂದ ಗೌಡರ ವರದಿ ಕುರಿತಂತೆ ಈ ಪರಿಷತ್ತು ರಾಜ್ಯದ ವಿಶ್ವವಿದ್ಯಾನಿಲಯಗಳಿಂದ ಅಭಿಪ್ರಾಯಗಳನ್ನು ಪಡೆದಿದ್ದು, ಅವುಗಳನ್ನು ಕ್ರೋಢೀಕರಿಸಿ, ಸೂಕ್ತ ಬದಲಾವಣೆ ಮಾಡಿ, ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲಿ ಏಕಕಾಲಕ್ಕೆ ಜಾರಿಗೊಳಿಸುವ ಕ್ರಮ ಆಗಬೇಕಿದೆ.

ಡಾ॥ ಚಿದಾನಂದ ಗೌಡರ ಸಮಿತಿಯ ವರದಿಯನ್ನು ಆಧಾರವನ್ನಾಗಿಯೋ, ನೆಪವನ್ನಾಗಿಯೋ ಇಟ್ಟುಕೊಂಡು ವಿಸ್ತೃತ ಚರ್ಚೆ-ಸಂವಾದ ನಡೆಸಿ ಅವಶ್ಯವಿರುವ ಮೂಲಸೌಲಭ್ಯ ನಿರ್ಮಾಣ ಮತ್ತು ಆಡಳಿತಾತ್ಮಕ ಬದಲಾವಣೆಗಳನ್ನು ಗಮನದಲ್ಲಿಟ್ಟುಕೊಂಡು ಆದಷ್ಟು ಬೇಗ ಮಾದರಿಯೊಂದನ್ನು ತಯಾರಿಸಿ, ಬರುವ ಶೈಕ್ಷಣಿಕ ವರ್ಷದಿಂದ ಪ್ರಥಮ ಪದವಿಯಿಂದ ಜಾರಿಗೊಳಿಸಬಹುದಾಗಿದೆ. ನಂತರದ ತರಗತಿಗಳಿಗೆ ಪ್ರತಿ ವರ್ಷ ಶೈಕ್ಷಣಿಕ ವರ್ಷ ಆರಂಭವಾಗುವ ಆರು ತಿಂಗಳ ಮೊದಲೇ ಎಲ್ಲ ರೀತಿಯ ಮೂಲ ಸೌಲಭ್ಯಗಳ ನಿರ್ಮಾಣವನ್ನು ಪೂರ್ಣಗೊಳಿಸಿಕೊಂಡು, ಪುನಾರಚಿತ ಪದವಿ ಶಿಕ್ಷಣವನ್ನು ಅನುಷ್ಠಾನಗೊಳಿಸ ಬಹುದಾಗಿದೆ. ಇಲ್ಲಿ ಇರುವ ಮುಖ್ಯ ಪ್ರಶ್ನೆ ಎಂದರೆ ಬೋಧಕ-ವಿದ್ಯಾರ್ಥಿಗಳ ಅನುಪಾತವನ್ನು ಜಾರಿಗೊಳಿಸುವಲ್ಲಿ ಸರ್ಕಾರದ ಬದ್ಧತೆ. ಆರ್ಥಿಕ ಹೊರೆಯ ಕಾರಣ ಮುಂದಿಟ್ಟುಕೊಂಡು ಮಿತವ್ಯಯ ಮಾಡುವುದನ್ನೇ ದಕ್ಷತೆ ಎಂದು ಅಧಿಕಾರಿ ವರ್ಗ ಭಾವಿಸಿದರೆ ನಮ್ಮ ಬಹುಸಂಖ್ಯಾತ ಬಡ ಮತ್ತು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ತಮ್ಮ ಅಮೂಲ್ಯ ಆಯುಷ್ಯ ವ್ಯಯಿಸಿ ಕಳಪೆ ಶಿಕ್ಷಣ ಪಡೆದು ನಿರುದ್ಯೋಗಿ ಹಣೆಪಟ್ಟಿಯೊಂದಿಗೆ ಬೀದಿಯ ಬದುಕಿಗೆ ಬರಬೇಕಾಗುವುದು ಖಚಿತ. ಎದೆಗೆ ಬಿದ್ದ ಅಕ್ಷರ ಬೀದಿಗೆ ಬಿದ್ದ ಬದುಕಾಗಬಾರದು.

ಇಂದಿನ ಪರಿಸ್ಥಿತಿಯಲ್ಲಿ ಸಣ್ಣ ಬದಲಾವಣೆಯ ಕ್ರಮಗಳೂ ಕೂಡ ಬಹು ದೊಡ್ಡ ವಿವಾದವನ್ನು ಸೃಷ್ಟಿಸುವುದು ಸಹಜ. ಆದರೆ ವಿದ್ಯಾರ್ಥಿಗಳ ಭವಿಷ್ಯದ ಮತ್ತು ಆರ್ಥಿಕ ಬದುಕಿನ ದೃಷ್ಟಿಯಿಂದ ದಿಟ್ಟ ಕ್ರಮಗಳನ್ನು ಕೈಗೊಳ್ಳಲೇಬೇಕಿದೆ. ಹೆಚ್ಚು ವಿಶ್ವವಿದ್ಯಾನಿಲಯಗಳ ಸ್ಥಾಪನೆ ಅನಿವಾರ್ಯವಾಗಿದೆ. ಬೆಂಗಳೂರು ವಿಶ್ವವಿದ್ಯಾನಿಲಯವನ್ನು ವಿಕೇಂದ್ರೀಕರಿಸುವ ಕ್ರಮ ತುರ್ತಾಗಿ ಜಾರಿಯಾಗಬೇಕಿದೆ. ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗ ಮತ್ತು ಭಾರತೀಯ ಜ್ಞಾನ ಆಯೋಗದ ಆಶಯದಂತೆ ಜಿಲ್ಲೆಗೊಂದು ವಿಶ್ವವಿದ್ಯಾನಿಲಯ ಅನಿವಾರ್ಯವಾಗಿದೆ. ಹಾಲಿ ಸ್ವಾಯತ್ತ ಕಾಲೇಜುಗಳು ಕೂಡ ಹಿಂದಿನಂತೆ ಅದೇ ಸಾಂಪ್ರದಾಯಿಕ ವಿಧಾನದಲ್ಲಿ ನಡೆಯುತ್ತಿದ್ದು , ಹೆಚ್ಚು ಬದಲಾವಣೆ ಕಾಣುತ್ತಿಲ್ಲವಾದ್ದರಿಂದ ನಿರೀಕ್ಷಿತ ಪ್ರಯೋಜನವಾಗುತ್ತಿಲ್ಲ. ಆದ್ದರಿಂದ ಇದೀಗ ಪದವಿ ಶಿಕ್ಷಣದ ಪುನಾರಚನೆ ಎಂದರೆ ಉನ್ನತ ಶಿಕ್ಷಣ ವ್ಯವಸ್ಥೆಯ ಆಮೂಲಾಗ್ರ ಪುನಾರಚನೆಯೇ ಆಗಿದೆ.

ಉನ್ನತ ಶಿಕ್ಷಣ ಅಧ್ಯಯನ ಅವಕಾಶವನ್ನು ಹೆಚ್ಚಿಸುವ ಕ್ರಮಗಳು ಅತ್ಯಂತ ಅವಶ್ಯ ಮತ್ತು ಅದೊಂದು ಸಂವಿಧಾನಾತ್ಮಕ ಹೊಣೆಗಾರಿಕೆ. ಆದರೆ ಈ ಶಿಕ್ಷಣ ನಿರುಪಯುಕ್ತವಾಗಬಾರದೆಂಬ ಎಚ್ಚರಿಕೆ ಸದಾ ಇರಲೇಬೇಕು. ಪದವಿ ಶಿಕ್ಷಣ ಅಧ್ಯಯನವು ಹಣ ಮತ್ತು ಮಾನವ ಸಂಪನ್ಮೂಲಗಳ ವ್ಯರ್ಥ ವ್ಯಯವಾಗಬಾರದು. ಬದಲಾದ ಸ್ಥಿತಿಗಳಿಗೆ ತಕ್ಕಂತೆ ಬದಲಾಗುವುದೂ ಸಹ ಅಭಿವೃದ್ಧಿಯ ಒಂದು ಲಕ್ಷಣವೆನ್ನುವುದನ್ನು ಮರೆಯುವಂತಿಲ್ಲವಲ್ಲ ?

**ಡಾ॥ ಜಿ. ಎನ್. ಮಲ್ಲಿಕಾರ್ಜುನಪ್ಪ**
ಶೈಕ್ಷಣಿಕ ಚಿಂತಕರು, ಲೇಖಕರು
'ಸ್ನೇಹ', ೩ನೇ ಅಡ್ಡರಸ್ತೆ, ವಿದ್ಯಾನಗರ, ಚಿತ್ರದುರ್ಗ – ೫೭೭ ೫೦೧

ಕಾವ್ಯಲೋಕ



# ಕವಿತೆ ಕಡ ನೀಡುವ ಒಡೆಯರ ಮುಂದೆ ಮೊಣಕಾಲೂರಿ



ಗಂಟೆಗಟ್ಟಲೇ ಬಿಸಿಲಲ್ಲಿ ಬೆವರ ಸುರಿಸುವ
ಅವರ ಮುಂದೆ ಮೊಣಕಾಲೂರಿ ನಾನು
ಒಂದಿಷ್ಟು ಕವಿತೆಯ ಭಿಕ್ಷೆ ಬೇಡುತ್ತೇನೆ

ಅವರ ಬೆವರ ಹನಿಗಳೇ
ಕವಿತೆಯಾಗಿ ನನ್ನ ಒಡಲಲ್ಲಿ
ಮಾತು ಪಡೆಯುವ ಮಜಕೂರಕ್ಕೆ
ನಾನು ದಂಗಾಗುತ್ತೇನೆ

ಅಚ್ಚರಿಯಾಗುತ್ತದೆ ನನಗೆ,
ಒಂದು ಹೊತ್ತಿನ ತುಂಬು ಊಟಕ್ಕೂ
ತತ್ವಾರಪಡುವ ಅವರು
ಅವರಿವರ ಮುಂದೆ ಕೈಯೊಡ್ಡದೆ
ಛಲದಿಂದ ಬದುಕುವುದ ಕಂಡು

ಕನಸುಗಳ ತೇರು ಎಳೆದು,
ಮಕ್ಕಳು ಮರಿಗಳ ಹರಕು ಪಾಟಿಚೀಲದಲ್ಲಿ
ಭವಿಷ್ಯ ಅರಸುವಾಗ
ನನ್ನೊಳಗೂ ಉದಯಿಸುತ್ತಾನೆ.
ಹೊಸ ಭರವಸೆಯ ಸೂರ್ಯ
ಕೃತಜ್ಞನಾಗುತ್ತೇನೆ
ಅವರು ತುಂಬುವ ಚೈತನ್ಯಕ್ಕೆ

ಮತ್ತೆ ನನ್ನ ಕವಿತೆಗೆ
ಹೊಸ
ಮಳೆಗಾಲ ಪ್ರಾಪ್ತವಾಗುತ್ತದೆ.

**ಡಾ॥ ವೈ. ಎಂ. ಯಾಕೊಳ್ಳಿ**
ಉಪನ್ಯಾಸಕರು, ಜಿ. ಜಿ. ಚೋಪ್ರಾ
ಸರ್ಕಾರಿ ಪದವಿಪೂರ್ವ ಕಾಲೇಜು, ಸವದತ್ತಿ, ಬೆಳಗಾವಿ



ತಿಂಗಳ ಕಥೆ

# ಈದಿ

**ಡಾ॥ ಷಾಕಿರಾ ಖಾನಂ**

"ಹಲೋ ಅಕ್ಕ, ನಾವು ಈ ವರ್ಷ ಉಮ್ರಾಗೆ ಹೋಗ್ತಾ ಇದ್ದೀವಿ."

"ಹೌದಾ !... ಸಂತೋಷ... ಮಕ್ಕಳೂ ಬರ್ತಾ ಇದ್ದಾರ...?"

"ಇಲ್ಲ... ಮಕ್ಕಳನ್ನ ನಿಮ್ಮ ಹತ್ತಿರ ಬಿಟ್ಟು ಹೋಗೋಣ ಅಂತ ಬಂದೆ. ನಿಮ್ಮತ್ರ ಅಮ್ಮ ಎಲ್ಲಾ ಇರ್ತಾರೆ. ಮಕ್ಕಳು ಹೇಗೋ ದಿನ ಕಳೆದುಬಿಡ್ತಾರೆ."

"ತುಂಬ ಒಳ್ಳೇದು. ತಂದು ಬಿಡು ಪರ್ವಾಗಿಲ್ಲ. ಬೆಂಗಳೂರಿಗೆ ಯಾವಾಗ ಬರ್ತಾ ಇದ್ದೀರ ?"

"ನಮ್ಮ ಫ್ಲೈಟು ಚೆನ್ನೈಯಿಂದಲೇ ಇರೋದು, ಮುಂದಿನ ವಾರ."

"ಸರಿ, ಬಂದು ಎಲ್ಲರನ್ನು ಮಾತಾಡಿಸಿಕೊಂಡು ಹೋಗ್ತೀವಿ. ಹಬ್ಬಕ್ಕೆ ಮಕ್ಕಳು ನಿಮ್ಮ ಹತ್ರಾನೇ ಇರ್ತಾರೆ."

"ಆಗ್ಲಿ... ಹೋಗ್ ಬನ್ನಿ."

"ಹೋದ ವರ್ಷ ಉಮ್ರ. ಈ ವರ್ಷ ಹಜ್. ದುಡ್ಡಿರೋರು ವರ್ಷವರ್ಷಕ್ಕೆ ಹೋಗ್ತಾರೆ. ಜೀವನದಲ್ಲಿ ಒಂದು ಸಲ ಹಜ್ ಅಷ್ಟೇ ಅಂತ ಭಗವಂತ ಕಡ್ಡಾಯ ಮಾಡಿದ್ದಾನೆ. ಒಮ್ಮೆಯಾದರೂ ಹಜ್ ಕಡ್ಡಾಯ ಅಂತ ಕುರಾನ್ ಹೇಳಿದೆ. ಪಾಪ ಮಾಡೋದು ಇಲ್ಲಿ. ಅದನ್ನ ತೊಳೆಯಕ್ಕೆ ಹೋಗೋದು ಅಲ್ಲಿಗೆ. ಪಾಪ ಮಾಡೋವ್ರು ಹಜ್‌ಗೆ ಹೋಗಬೇಕು ಎಂದು ಹದೀಸ್ ಹೇಳಿದ್ದಿದ್ರೆ ಎಷ್ಟು ಚೆನ್ನಾಗಿರ್ತಾ ಇತ್ತು ! ಯಾರಿಗೂ ಆಗ ಅಲ್ಲಿಗೆ ಹೋಗೋ ಯೋಗ್ಯತೇನೆ ಇರ್ತಾ ಇರಲಿಲ್ಲ.

* * *

"ಅಮ್ಮನ ಫೋನ್ ಬಂದಿತ್ತೇನೋ ?"

"ಇಲ್ಲ ಚಿಕ್ಕಮ್ಮ. ಈವತ್ತು ಬರಲಿಲ್ಲ"

"ಅಜ್ಜಿ ಮನೇಲಿ ಏನ್ ತಿಂದೆ ?"

"ದೋಸೆ."

"ನಿಮ್ಮ ಕಡೆ ನೀವು ಈದ್ ಹೇಗೆ ಮಾಡ್ತೀರಾ ?"

"ನಮ್ಮ ಕಡೆ ತುಂಬ ಚೆನ್ನಾಗಿರುತ್ತೆ ಚಿಕ್ಕಮ್ಮ. ಈದ್ ಮುಬಾರಕ್ ಹೇಳಕ್ಕೆ ತುಂಬ ಜನ ಬರ್ತಾರೆ... ಎಲ್ಲರೂ ನಮಗೆ ಈದಿ ಕೊಡ್ತಾರೆ."

ಈದಿ ಎಂದು ಹೇಳುವಾಗ ಹನ್ನೆರಡು ವರ್ಷದ ತಂಗಿಯ ಮಗನ ಮುಖ ಅರಳಿ ಹೋಗಿತ್ತು. ಮಕ್ಕಳಿಗೆ ಈದ್‌ಗಿಂತ ಈದಿ ಬಹಳ ಮುಖ್ಯ. ವರ್ಷಕ್ಕೆ ಎರಡು ಬಾರಿ ಕಾಣಿಕೆ ರೂಪದಲ್ಲಿ ದೊಡ್ಡವರೆಲ್ಲಾ ಚಿಕ್ಕವರಿಗೆ ಒಂದೇ ಮನಸ್ಸಿನಿಂದ ತುಂಬ ಈದಿ ಕೊಡ್ತಾರೆ.

"ಎಲ್ಲಾರೂ ಈದಿ ಕೊಡ್ತಾರ ?"

"ಹೂಂ..." ಎಂದು ಹೆಮ್ಮೆಯಿಂದ ತಲೆ ಅಲ್ಲಾಡಿಸಿದ.

"ಎಷ್ಟು ಕಲೆಕ್ಷನ್ ಆಗತ್ತೆ ?"

"ಐದು ಸಾವಿರದ ಮೇಲಾಗುತ್ತೆ. ಅಬ್ಬುನೇ ನಮಗೆ ಒಂದು ಸಾವಿರ ಕೊಡ್ತಾರೆ."

ಪಕ್ಕದಲ್ಲಿ ನಿಂತಿದ್ದ ನನ್ನ ಮಗ "ಅಷ್ಟೊಂದು" ಎಂದು ದೊಡ್ಡದಾಗಿ ಬಾಯಿ ತೆರೆದ. ತಂಗಿ ಮಗ ಇಬ್ಬರೂ ಹೇಳುತ್ತಿರುವುದು ಉತ್ಪ್ರೇಕ್ಷೆ ಅನಿಸಿದರೂ ಎಲ್ಲರೂ ಈದಿ ಕೊಟ್ಟೇ ಕೊಡ್ತಾರೆ, ದೊಡ್ಡವರು ಅದನ್ನು ಕೇಳುವ ಹಾಗಿಲ್ಲ. ಮಕ್ಕಳು ಏನು ಬೇಕಾದರೂ ಮಾಡಬಹುದು.

"ಅಷ್ಟೊಂದು ದುಡ್ಡು ಏನ್ ಮಾಡ್ತೀರಾ"? ಮಗಳ ಮುಗ್ಧ ಪ್ರಶ್ನೆ. "ಅರ್ಧ ಉಡಾಯಿಸ್ತೀವಿ. ಉಳಿದದ್ದು ಅಮ್ಮಂಗೆ ಕೊಡ್ತೀವಿ" "ಅಮ್ಮ ಈ ಸತಿ ನೀನೂ ನಮಗೆ ಜಾಸ್ತಿ ಈದಿ ಕೊಡಬೇಕು" ಮಗಳು ಆಸೆ ಭರಿತ ಧ್ವನಿಯಿಂದ ಗೋಗರೆದಳು.

ನಾಳೆ ಈದ್. ಮಕ್ಕಳ ಸಂಭ್ರಮವೋ ಸಂಭ್ರಮ, ಕೆಲಸದವಳು ಈದ್ ದಿನ ಬರಲ್ಲ. ಅವಳು ಇರುವಾಗಲೇ ಎಲ್ಲ ಕೆಲಸ ಮುಗಿಸಿಕೊಳ್ಳಬೇಕು. ಎಷ್ಟೇ ಮುಗಿದರೂ ಈದ್–ದಿನ ಕೆಲ್ಸ ಇದ್ದದ್ದೆ, ಬಿರಿಯಾನಿ, ಬದನೆಕಾಯಿ ಹುಳಿ, ಶೀರ್ ಖುರ್ಮಾ (ಸೇವಿಗೆ), ಆಲೂಗಡ್ಡೆ ಹಲ್ವ , ಮೊಸರು ಚಟ್ನಿ, ಪುದೀನ ಚಟ್ನಿ, ಟೊಮೆಟೋ ಚಟ್ನಿ, ಚಿಕನ್ ಲಾಲಿಪಾಪ್ ಇವೆಲ್ಲಾ ಮಕ್ಕಳ ಬೇಡಿಕೆಗಳು, ಮೂವತ್ತು ದಿನದ ಉಪವಾಸ ಇದ್ದಮೇಲೆ ಏನೇನೋ ತಿನ್ನುವ ಆಸೆ ಆಗುತ್ತೆ, ಆದರೆ ಅವರು ತಿನ್ನೋದು ಅಷ್ಟರಲ್ಲೇ ಇರತ್ತೆ. ಆದರೂ ಮಾಡಲೇ ಬೇಕು. ವರ್ಷಕ್ಕೆ ಒಮ್ಮೆಯಾದರೂ ಅವರ ಮಾತು ಕೇಳಬೇಕಲ್ಲವೇ...?

ಮಗಳ ಪುಟ್ಟ ಪುಟ್ಟ ಕೈಗಳು ಮೆಹಂದಿಯಿಂದ ಸುಂದರವಾಗಿ ಕಾಣುತ್ತಿದ್ದವು, ಮಗ ಈದಿ ಆಸೆಯಲ್ಲಿ ಉತ್ಸಾಹದ ಚಿಲುಮೆಯಾಗಿದ್ದ.

ನಮಾಜಿನಲ್ಲಿ ಅತ್ತು ಅತ್ತು ದುವಾ ಮಾಡಬೇಕಂತೆ ಅಳು ಬರದಿದ್ದರೂ ಅಳುವ ಹಾಗೆ ನಟಿಸಬೇಕಂತೆ. ನಮ್ಮ ಅಮ್ಮಾನೂ ನಮಾಜಿನಲ್ಲಿ ತುಂಬಾ ಅಳ್ತಾ ಇದ್ಲು. ಕೈಚಾಚಿ ಗೋಗರೀತಾ ಇದ್ಲು. ಅವಳನ್ನ ನೋಡೇನೆ ನಾವೂ ಅಳೋದನ್ನ ಕಲ್ತಿದ್ದು. ನಾನೊಬ್ಬಳೆ ನಮಾಜ್ ಮಾಡಿದಾಗ ತುಂಬಾ ಅಳ್ತೀನಿ. ಮಗಳು ಜೊತೇಲಿದ್ದಾಗ ಅವಳಿಗೆ ಅಳೋದನ್ನ ಕಲಿಸಬಾರದು ಅಂತ ನಾನು ಅಳ್ತಾ ಇರಲ್ಲ. ಭಗವಂತ ಮನ ನೋಯಿಸಿದರೆ ಅಳು ತಂತಾನೇ ಬಂದುಬಿಡುತ್ತದೆ. ಅದಕ್ಕೆ ನಟನೆಯೇ ಬೇಕಾಗಿಲ್ಲ. ಇಡೀ ನಮಾಜ್ ಮಗಳ ಕಣ್ಣೀರಿನಲ್ಲಿ ತೋಯ್ದುಹೋಗಿತ್ತು. ಭಗವಂತ ಬಹಳ ವಿಶಾಲಹೃದಯಿ. ಹೆಜ್ಜೆ ಹೆಜ್ಜೆಗೂ ಪರೀಕ್ಷೆಗಳನ್ನು ಒಡ್ಡುತ್ತಿರುತ್ತಾನೆ. ಏನ್ ಸಾಧಿಸಕ್ಕೋ !

"ಹೋಗೋ ಅಹಮದ, ಮಸೀದಿಲೇ ಇವತ್ತು ಇದ್ದು ಇಫ್ತಾರಿ ಮಾಡಿಕೊಂಡು ಹಬ್ಬ ನಾಳೆನಾ ಅಂತ ತಿಳಿದುಕೊಂಡು ಬಾ." "ಅಮ್ಮಿ, ನೀನು ನಿನ್ನೆ ಆಶ್ ಮಾಡಿಕೊಟ್ಟಿದ್ದೆ ಅಲ್ವಾ? ಮಸೀದೀಲಿ ತುಂಬಾ ಚೆನ್ನಾಗಿದೆ ಅಂತ ಹೇಳ್ತಾ ಇದ್ರು. ಅಬ್ಬಜಾನ್ ಬಂದ್‌ಬಿಡ್ಲಿ ಹೋಗ್ತೀನಿ."

"ಅವರು ಎಲ್ಲಿದ್ದಾರಪ್ಪ! ನೀನು ಚಾಂದ್ ನೋಡಿಕೊಂಡು ಬಾ."

"ಅಬ್ಬಜಾನ್ ಬರಲಿ."

"ಅವರು ಬರಲ್ಲ ಅಹಮದಿ. ಅವರು ಬರೋದು ನಾಳೆ ಬೆಳಿಗ್ಗೇನೇ."

"ಅವರ ಫ್ಯಾಕ್ಟರಿ ಹತ್ರ ಹೋಗಿ ನೋಡಿಕೊಂಡು ಬರ್ತೀನಿ."

"ನೀನು ಹೇಳಿದರೆ ಅರ್ಥ ಮಾಡಿಕೊಳ್ತಾ ಇಲ್ಲ. ನಿನ್ನಿಷ್ಟ. ಬೇಗ ಹೋಗು. ಟೈಂ ಆಗ್ತಾ ಇದೆ."

ಮಗನ ಕೈಗೆ ಐವತ್ತು ರೂಪಾಯಿ ಕೊಟ್ಟು ಒಳನಡೆದಳು. ಮಗನಿಗೆ ಹೇಗೆ ಹೇಳಲಿ? ಅಬ್ಬಜಾನ್‌ನನ್ನು ನಾನು ಇಪ್ಪತ್ತು ವರ್ಷಗಳಿಂದ ನೋಡ್ತಾ ಇದ್ದೀನಿ. ಅವರಿಗೆ ಮನೇಗಿಂತ ಊರ ಜನರ ಚಿಂತೆ ಜಾಸ್ತಿ. ಮಕ್ಕಳಿಗೂ ಗೊತ್ತು ಅವರಪ್ಪನ ವರ್ತನೆ. ಆದರೂ ಮುಗ್ಧ ಮನಸ್ಸುಗಳು ತಂದೆಯನ್ನು ಬಯಸುತ್ತವೆ. ಅವರು ಯಾವಾಗ ಬರ್ತಾರೆ, ಯಾವಾಗ ಹೋಗ್ತಾರೆ ಒಂದೂ ಗೊತ್ತಾಗೊಲ್ಲ. ತಂದೆ–ತಾಯಿ ಇಲ್ಲದೆ ಅನಾಥರಾಗಿ ಬೆಳೆದ ಅವರಿಗೆ, ಎಲ್ಲಿ ಯಾವ ಅವಶ್ಯಕತೆ ಪೂರ್ತಿ ಮಾಡಿಕೊಳ್ಳ ಬೇಕೆಂದು ಚೆನ್ನಾಗಿ ಗೊತ್ತಿತ್ತು. ಅವರಿಗೆ ಮನೆಯ ಚಿಂತೇನೆ ಇಲ್ಲ. ಆಚೆ ಬೇಸರವೆನಿಸಿದಾಗ ಮನೆಗೆ ಬರ್ತಾರೆ. ಮನೆಯಲ್ಲೇ ಇದ್ದು ಬೇಸರ ಆದಾಗ ಆಚೆ ಹೋಗ್ತಾರೆ. ಮನೆಗೆ ಬಂದ್ರೆ ಮಕ್ಕಳಿಗೆ ಅಪ್ಪ, ಹಾಸಿಗೆಗೆ ಬಂದ್ರೆ ಗಂಡ, ಅಷ್ಟೆ. ನನ್ನನ್ನ ಯಾವಾಗ್ಲೂ ಹೊಗಳ್ತಾ ಇರ್ತಾರೆ, ತುಂಬ ವಿದ್ಯಾವಂತೆ, ಸಂಸಾರನಾ ತುಂಬ ಚೆನ್ನಾಗಿ ನಡೆಸಿಕೊಂಡು ಹೋಗ್ತಾ ಇದ್ದಿಯಾ ನನಗಂತೂ ಏನೂ ಚಿಂತೇನೆ ಇಲ್ಲ. ಹತ್ತು ಗಂಡಸರು ಮಾಡುವ ಕೆಲ್ಸಾನಾ ನೀನೊಬ್ಬಳೇ ಮಾಡಿ ಮುಗಿಸುವಷ್ಟು ಧೈರ್ಯ ನಿನಗಿದೆ, ಬುದ್ಧಿವಂತೆ ಎಂದೆಲ್ಲಾ ಉಬ್ಬಿಸ್ತಾ ಇದ್ದ. ಹಾಗೆ ನಿಂದಿಸುವವರನ್ನು ಹತ್ತಿರ ಕರೆದುಕೊಳ್ಳಬೇಕಂತೆ. ಪ್ರಶಂಸಿಸುವವರನ್ನು ದೂರ ಇಡಬೇಕಂತೆ. ಆದರೆ ಈತ ನನ್ನ ಯಜಮಾನ, ಇವರ ಕಾಲ ಕೆಳಗೆ ನನ್ನ ಸ್ವರ್ಗ. ತುಂಬ ಆದರ್ಶವಾದಿ. ಅಧರ್ಮ ಅನ್ನೋದೇ ಗೊತ್ತೇ ಇಲ್ಲ. ಕೆಲ್ಸಕ್ಕೆ ತಪ್ಪದೆ ಹೋಗ್ತಾ ಇದ್ದರು. ಆದರೆ ಮನೆಗೆ ತರ್ತಾ ಇದ್ದದ್ದು ಬರೀ ಒಂದು ವಾರದಷ್ಟು, ಹೆಚ್ಚೆಂದರೆ ಹತ್ತು ದಿನಗಳಾಗುವಷ್ಟು ದಿನಸಿ ಮಾತ್ರ! "ತಂದಾಗ, ತಿನ್ನು. ಕೊಟ್ರೆ ಮಾಡು." ಇದು ಮನೆ ಒಡೆಯನ ಫರ್ಮಾನು. ಬೆಳೆಯುವ ಮಕ್ಕಳು ಏನೂ ಕೇಳಬಾರದು. ನಾವು ಎಂದೂ ಏನೂ ಕೇಳಲಿಲ್ಲ? ನಮ್ಮ ತಲೆಗೆ ಓದು ಹತ್ತಲಿಲ್ಲ, ಅಷ್ಟೆ. ಹೆಂಡತಿಯ ಒಂದು ಪೈಸೇನೂ ತೆಗೆದುಕೊಳ್ಳಲ್ಲ. "ಅವಳ ದುಡ್ಡು ನನಗೇಕೆ ಬೇಕು, ಏನಾದ್ರೂ ಮಾಡಿಕೊಳ್ಳಲಿ. ನಾನು ಬೆಳಿಗ್ಗೆ ಹೋದ್ರೆ ರಾತ್ರಿ ಬರ್ತೀನಿ. ಕೆಲ್ಸ ಇದ್ರೆ ಒಂದೊಂದು ಸತಿ




ಹೀಗೇ ದೇಶದ ಎಲ್ಲ ನಾಯಕರ ಸೂಟು – ಬೂಟುಗಳೂ ಕೋಟಿ ಬೆಲೆಗೆ ಹರಾಜಾಗಿದ್ರೆ... ಅಂತ ಲೆಕ್ಕಾಚಾರ ಹಾಕ್ತಿದ್ದೆ!

ಮನೇಗೂ ಬರಕ್ಕಾಗಲ್ಲ." "ಅವಳ ಸಂಬಳ ಎಷ್ಟು ಅಂತ ಇದುವರೆಗೂ ನನಗೆ ಗೊತ್ತಿಲ್ಲ. ನಾನು ಕೆಲಸಕ್ಕೆ ಹೋಗಲೇ ಬೇಡ ಅಂತೀನಿ, ಆದರೆ ಅದೇನ್ ಸಾಧಿಸಕ್ಕೆ ಹೋಗ್ತಾಳೋ ಗೊತ್ತಿಲ್ಲ. ಏನ್ ಮಾಡಿದ್ರೂ ಮುಸ್ರೆ ತಿಕ್ಕೋದು ತಪ್ಪತ್ತಾ", ಬಿರ್ಯಾನಿ ತಿನ್ನುತ್ತ ಗೆಳೆಯನೊಂದಿಗೆ ಹರಟುತ್ತಿದ್ದುದನ್ನ ಕೇಳಿ ಮೈ ಉರಿದುಹೋಗ್ತಾ ಇತ್ತು. ಅಮೃತಾನ ನುಂಗುವ ಹಾಗೂ ಇಲ್ಲ, ಉಗುಳುವ ಹಾಗೂ ಇಲ್ಲ. ಒಳಗಡೆ ಕುಳಿತಿದ್ದ ಮಕ್ಕಳು ಇದನ್ನು ಕೇಳಿ ಎಷ್ಟೋ ಬಾರಿ ನಕ್ಕಿದ್ದುಂಟು, ಮಕ್ಕಳ ನಗುವಿನಲ್ಲಿ ವಕ್ರ ವ್ಯಂಗ್ಯ ಇರ್ತಾ ಇತ್ತು. ಇದಾವುದರ ಬಗ್ಗೆಯೂ ತಲೆ ಕೆಡಿಸಿಕೊಳ್ಳದೆ ನಾನು ಯಾವುದಾದರೊಂದು ಪುಸ್ತಕ ಓದುವುದರ ಮೂಲಕ ತನ್ನ ನೋವನ್ನು ಮರೀತಾ ಇದ್ದೆ. ಈ ಬಾರಿ ಓದಲು ಕೈಗೆತ್ತಿಕೊಂಡ ಪುಸ್ತಕ 'ಸೂಫಿ ಮಹಿಳೆಯರು'. ಅವರ ತ್ಯಾಗ, ಬಲಿದಾನಗಳ ಮುಂದೆ ನಾವು ಏನೂ ಇಲ್ಲ! ಸಮಾಜ, ಸಂಸಾರ, ಧರ್ಮ ಎಲ್ಲವೂ ಹೆಣ್ಣಿನ ತ್ಯಾಗ ಬಲಿದಾನಗಳ ಖಣಿಯೇ ಇದುವರೆಗೂ! ಇಡೀ ಪ್ರಕೃತಿ ಹೆಣ್ಣಿನ ಹಂಗಿನಲ್ಲಿದೆ. ಆದರೆ ಗಂಡಿನದು ಒಣ ದರ್ಪ. ಹಲಾಲ್ ಹಣವನ್ನು ಹೆಂಡತಿ ಮಕ್ಕಳ ಮೇಲೆ ಖರ್ಚುಮಾಡುವುದು ಪುಣ್ಯದ ಕೆಲಸ, ಹೆಂಡತಿ ಮಕ್ಕಳ ಜವಾಬ್ದಾರಿ ಮರೆತು ದಿನಗಟ್ಟಲೆ ಜಮಾತ್‌ನಲ್ಲಿ ಹೋಗುವುದು?

"ಅಮ್ಮಿ, ನಾಳೆ ಈದ್."

"ನಾನು ಅಂದುಕೊಂಡಿದ್ದೆ, ಅಬ್ಬಿಜಾನ್ ಫ್ಯಾಕ್ಟರಿಗೆ ಹೋಗಿದ್ರಾ?"

ಮಸೀದಿಲೇ ಅಬ್ಬಿ ಜಾನ್ ಸಿಕ್ಕಿದ್ರು. ನಾವು ಜೊತೇಲೇ ಇಫ್ತಾರಿ ಮಾಡಿದ್ವಿ.

"ಈವತ್ತು ಇಫ್ತಾರಿ. ಏನ್ ಏನ್ ಇತ್ತು?"

"ಆಷ್ ಖರ್ಜೂರ, ಬೇರೆ ಹಣ್ಣೆಲ್ಲ ಇತ್ತು."

"ನೀನು ಏನ್ ತೆಗೆದುಕೊಂಡು ಹೋಗಿದ್ದೆ?"

"ಎರಡು ಸಮೋಸ, ಎರಡು ವಡೆ, ಒಂದೆರಡು ಸೌತೆಕಾಯಿ ಹೋಳು, ಜ್ಯೂಸು."

"ಅಬ್ಬಾಜಾನ್ ಏನ್ ತಂದಿದ್ರು?"

"ಏನೂ ಇಲ್ಲ ಅಮ್ಮಿ. ಅವರು ಅವರ ಜಮಾತ್ ಗೆಳೆಯರೊಂದಿಗಿದ್ದರು, ನನ್ನನ್ನ ನೋಡಿ ನನ್ನ ಜೊತೆ ಇಫ್ತಾರಿ ಮಾಡಿದ್ರು, ನನಗೆ ಸಿಕ್ಕಿದ್ದು ಒಂದೇ ಸಮೋಸ ಅಷ್ಟೆ." ಮಗ ಪೆಚ್ಚುಮೋರೆ ಹಾಕಿಕೊಂಡು ಹೇಳಿದ.

"ಹೋಗ್ಲಿ ಬಿಡು, ಅಲ್ಲಾ ನಿನಗೆ ಕೊಡ್ತಾನೆ, ಯಾವಾಗಲೂ ಹಂಚಿ ತಿನ್ನಬೇಕು." "ಆದ್ರೆ ಮಮ್ಮಿ, ಮಗರೀಬ್ ನಮಾಜ್ ಆದ ಮೇಲೆ ಮಸೀದಿ ಕಡೆಯಿಂದ ಎಲ್ರಿಗೂ ಬಿರ್ಯಾನಿ ಊಟ ಇತ್ತು. ನಾನಂತೂ ಸಖತ್ತಾಗಿ ತಿಂದೆ. ಈಗ ರಾತ್ರಿ ಊಟ ಮಾಡಕ್ಕಾಗಲ್ಲ. ನೋಡು ವಾಸನೆ" ಎಂದು ಕೈಯನ್ನು ಮೂಗಿನ ಬಳಿ ಹಿಡಿದ. ಸುಮಾರು ಹೊತ್ತಾಗಿದ್ದರೂ ಕೈ ಘಮ–ಘಮಿಸುತ್ತಿತ್ತು.

"ನೋಡ್ದಾ! ನೀನು ಒಳ್ಳೆ ಕೆಲ್ಸ ಮಾಡಿದೆ ಅಂತ ನಿನಗೆ ಬಿರ್ಯಾನಿ ಸಿಕ್ತು,"

"ನಾಳೆ ರಜೆ."

"ಬೆಳಿಗ್ಗೆ ಬೇಗ ಎದ್ದು ಚೀಟೀಲಿ ಬರೆದಿರೋ ಸಾಮಾನನ್ನೆಲ್ಲಾ ತಂದು ಬಿಡು."

"ಆಯ್ತು, ನಾಳೆ ಈದಿ ಕೊಡ್ತೀಯಾ?"

"ಹೂಂ... ಅಬ್ಬಿಜಾನ್ ಎಲ್ಲಿ ಹೋದ್ರು?"

"ಗೊ ತ್ತಿಲ್ಲ ನಾಳೆ ಬರ್ತೀನಿ ಅಂದ್ರು."

ವಾರದ ಹಿಂದೆ ಮನೆಯಲ್ಲಿ ರಂಪ ಮಾಡಿ ಹೋಗಿದ್ದ ವ್ಯಕ್ತಿ. "ಈ ಬಾರಿ ಅಹಮದ್‌ನ ನನ್ನ ಜೊತೆ ಕರೆದುಕೊಂಡು ಹೋಗ್ತೀನಿ" ಅಂದರು. ನನ್ನ ಮೌನ ಅವರನ್ನು ಕೆರಳಿಸುವಂತಿತ್ತೇನೋ.

"ನಿನ್ನನ್ನ ಏನ್ ಕೇಳೋದು, ನಮ್ಮ ಅಸೋಸಿಯೇಷನ್‌ನವರು ಬಡವರಿಗೆ ಮೆಡಿಕಲ್ ಕ್ಯಾಂಪ್ ಹಾಕೊಂಡಿದ್ದಾರೆ."

"ಇಲ್ಲ... ಬೇಡ ಅವನು ಈಗ ಹತ್ತನೇ ಕ್ಲಾಸಲ್ಲಿದ್ದಾನೆ ತೊಂದರೆ ಆಗತ್ತೆ ಅವನಿಗೆ."

"ನೀನೇನು ರ್‍ಯಾಂಕ್ ಬರಸ್ತೀಯಾ?"

"ನೀವು ಕರೆದುಕೊಂಡು ಹೋಗಿ ಬರಸ್ತೀರೇನೋ"... ಇನ್ನೂ ನನ್ನ ಮಾತು ಪೂರ್ತಿಯಾಗಿರಲಿಲ್ಲ, ಕಾಲಿನಿಂದ ಅವನು ಒದ್ದ ಒದೆಗೆ ಮುಗ್ಗರಿಸಿ ಬಿದ್ದಿದ್ದೆ. ಇವರ ಜಮಾತ್‌ನಲ್ಲಿದ್ದವರೆಲ್ಲ ಹೆಚ್ಚು ಇಂತಹವರೆ, ಮನೆ ಮಕ್ಕಳನ್ನ ಬಿಟ್ಟವರೆ! ಇನ್ನು ಯುವಕರನ್ನು ಕೇಳಬೇಕೇ? ಟೈಂಪಾಸ್ ಮಾಡಕ್ಕೆ ಜಮಾತ್, ತೀಟೆ ತೀರಿಸಿಕೊಳ್ಳಕ್ಕೆ ಹೆಂಡತಿ, ಅಧಿಕಾರ ಚಲಾಯಿಸಕ್ಕೆ ಮಕ್ಕಳು. ಗಂಡ–ಹೆಂಡತಿ ಹೇಗೇ ಇರಲಿ, ನಾಲ್ಕು ಗೋಡೆ ಮಧ್ಯೆ ಇದ್ರೆ ಸಾಕು...! ಪ್ರಪಂಚ ಒಪ್ಪತ್ತೆ.

✶ ✶ ✶

"ಜನ್ನತುಲ್ ಫಿರ್ದೋಸ್ ಎಲ್ಲಿದೆ?" ಎಂದು ಕೇಳಿದ ಮಗ.

ಖಾಲಿಯಾಗಿದ್ದ ಸೆಂಟಿನ ಬಾಟಲಿ ತಂದು ಹಿಡಿದ. "ಹೋದ್ ಸರ್ತಿ ತಂದಿದ್ದು ಎಲ್ಲಾ ಮುಗಿಸಿ ಬಿಟ್ರಾ" ಮತ್ತೊಂದು ಪ್ರಶ್ನೆ ಅವನಿಂದ.

"ಇಲ್ಲ ಅಬ್ಬ, ಇದರಲ್ಲಿ ಸ್ವಲ್ಪ ಇದೆ"...ಎಂದು ತಂದೆಯ ಬಟ್ಟೆಗಳ ಮೇಲೆ ಒದರತೊಡಗಿದ.

"ಸಾಕು... ಸಾಕು ಬೇಗ ಹೋಗೋಣ ಈದ್‌ಗಾದಲ್ಲಿ ಜಾಗ ಸಿಗಲ್ಲ... ನಮ್ಮೋರೆಲ್ಲ ಬಂದಿರ್ತಾರೆ...! ಬೇಗ ಹೊರಡು" ಎಂದೆ.

"ಅಬ್ಬಜಾನ್, ನಾನೂ ಬರಲಾ ?" ಮಗಳು ಕುಣಿಯುತ್ತಾ ಕೇಳಿದಳು.

ಅವಳನ್ನು ದುರುಗುಟ್ಟಿ ನೋಡಿ, "ಹೋಗೆ, ತಿಂಡಿ ತೊಗೊಂಡು ಬಾ..." ಎಂದ. ಅವಳು ಓಡಿ ಬಂದು ನನ್ನ ಹಿಂದೆ ಅವಿತುಕೊಂಡಳು. ಬದುಕು ಎಷ್ಟು ವಿಚಿತ್ರ! ಮನುಷ್ಯ ಹೆಂಗೆಲ್ಲ ಬದುಕುತ್ತಾನೆ! ತನ್ನ ಸ್ವಾರ್ಥಕ್ಕೆ ಲೋಕವನ್ನು ಬಳಸಿ ಧರ್ಮ-ಅಧರ್ಮಗಳ ಅಂತರವನ್ನರಿಯದೆ ಸಂಸ್ಕೃತಿಗಳ ಜಾಲದಲ್ಲಿ ಸಿಲುಕಿ ಒಣ ಪ್ರತಿಷ್ಠೆ ಕಾಪಾಡಿಕೊಳ್ಳಲು ಹೆಣಗಾಡುತ್ತಾನೆ.

ಅಡುಗೆಮನೆಯಲ್ಲಿ ನನ್ನ ಹತ್ತಿರಕ್ಕೆ ಬಂದು "ಜಮೀಲ, ನಿನ್ನ ಹತ್ತಿರ ಏನಾದ್ರು ದುಡ್ಡಿದ್ರೆ ಕೊಡು" ಎಂದು ಕೇಳಿದರು ಪಿಸುದನಿಯಲ್ಲಿ. ಕರಳು ಕಿತ್ತು ಬಾಯಿಗೆ ಬಂದಂತಾಯಿತು.

"ಬೇರೆ ಪರ್ಸಲ್ಲಿ ಏನಾದ್ರು ಇದ್ರೆ ತಗೋಳಿ."

"ನೂರೇ ರೂಪಾಯಿ ಇರೋದು. ತಗೋಳ್ಳಾ...?"

"ಹೂಂ..."

"ನೀನು ರೊಟ್ಟೀನ ತುಂಬಾ ಮೃದುವಾಗಿ ಮಾಡೋದನ್ನ ಕಲ್ತ್‌ಬಿಟ್ಟೆ, ಚಿಕನ್ ಪಲಾವ್ ತುಂಬಾ ಚೆನ್ನಾಗಿತ್ತು. ಹೊಟ್ಟೆ ತುಂಬ್ಹೋಯ್ತು. ಹೊಟ್ಟೆ ತುಂಬಾ ಊಟ ಮಾಡಿ ಸುಮಾರು ದಿನಗಳೇ ಆಗಿತ್ತು. ನೀನು ಇದೆಲ್ಲ ನನ್ನ ಅಕ್ಕನಿಂದ ಕಲ್ತಿದ್ದಲ್ವ?" ನಿನ್ನೆ ಮಸೀದೀಲಿ ಬಿರ್ಯಾನಿ ತಿಂದಿದ್ದು ಮಗ ಹೇಳಿಲ್ಲ ಅಂದುಕೊಂಡಿರ ಬಹುದು. ಇವರಕ್ಕ ಇಲ್ಯಾಕೆ ಬಂದ್ಲು? ಮದುವೆ ಹೊಸದರಲ್ಲಿ ನನಗೆ ಅಡುಗೆ ಮಾಡಕ್ಕೆ ಬರ್ತಾ ಇರಲಿಲ್ಲ, ನಿಜ. ಅವಳು ಅಡುಗೆ ಮಾಡೋದನ್ನ ನೋಡೋವಾಗ ನನ್ನ ಕಣ್ಣು ತಪ್ಪಿಸಿ ಮಸಾಲೆ ಹಾಕ್ತಾ ಇದ್ದಳು. ಈಗ ಅವರಪ್ಪನಂತೆ ಅಡುಗೆ ಮಾಡ್ತೀನಿ. ಪರಿಸ್ಥಿತಿ ಮನುಷ್ಯನಿಗೆ ಎಲ್ಲಾ ಕಲಿಸಿಬಿಡುತ್ತೆ. ನನ್ನ ಕಣ್ಣೀರು ಚಪಾತಿಯ ಮೇಲೆ ತೊಟ್ಟಿಕ್ಕಿತು.

"ಭೈಯ್ಯಾ, ನೀನು ನಮಾಜಿನಿಂದ ಬಂದು ನನಗೆ ಈದಿ ಕೊಡಬೇಕು..."

"ಈದಿ ಹಂಗಿರಲಿ. ತಗೋ ಈ ಚಿಲ್ಲರೇನ. ಬಡವರಿಗೆ ಹಂಚಿಬಿಡು ಈ ದುಡ್ಡು ನಮ್ಮೆಲ್ಲರ ಫಿತ್ರ. ಮಗನ ಕೈಯಲ್ಲಿ ಹಣ ಇಡೋದನ್ನ ನನ್ನ ಯಜಮಾನ ದುರುಗುಟ್ಟಿ ನೋಡ್ತಾ ಇದ್ದರು.

"ನನ್ನ ಫಿತ್ರಾ ಹಣಾನೂ ಕೊಟ್ಟಿದ್ದೀಯಾ ?" ಗಂಡನ ದನಿಯಲ್ಲಿ ದರ್ಪವಿತ್ತು. ನನ್ನ ಬಳಿ ಇದ್ದಿದ್ದೇ ಮೂವರಿಗೆ ಕೊಡುವಷ್ಟು ಮಾತ್ರ. "ಮಮ್ಮಿ ಫಿತ್ರಾ ಅಂದ್ರೆ ಏನು ? ಅದನ್ನ ಯಾಕ್ ಕೊಡ್ತಾರೆ ?" ಮಧ್ಯೆ ಮಗಳ ಪ್ರಶ್ನೆ.

"ಈದ್ ನಮಾಜ್‌ಗೆ ಮೊದಲು ಪ್ರತಿ ಒಬ್ಬರು ಎರಡೂವರೆ ಕೆ.ಜಿ. ಗೋಧಿ ಅಥವಾ ಅದರಷ್ಟು ಹಣವನ್ನು ಬಡವರಿಗೆ ದಾನ ಮಾಡಬೇಕು. ಬಡವರೂ ಕೈಲಾಗದವರೂ ಹಬ್ಬ ಮಾಡಬೇಕಲ್ಲವೇ ? ಅದಕ್ಕೆ, ಫಿತ್ರಾ ಕೊಡೋದು."

ಮಗ ನನ್ನ ಕೈಯಿಂದ ಹಣವನ್ನೆಲ್ಲಾ ಬಾಚಿಕೊಂಡು ಹೊರಗೆ ಕಾಯ್ತಾ ಇದ್ದ ಅಪ್ಪನ ಕಡೆ ಓಡಿದ. ತಲೆಯ ಮೇಲಿನ ಟೋಪಿ ಓಡುವ ರಭಸಕ್ಕೆ ಹಾರಿ ಹೋಗ್ತಾ ಇತ್ತು. ಒಂದು ಕೈಯಲ್ಲಿ ಸರಿ ಮಾಡಿಕೊಂಡು, ಇನ್ನೊಂದು ಕೈಯಲ್ಲಿ ಚಾಪೆ ಹಿಡಿದು ಕೊಂಡು ಅಪ್ಪ ಎಲ್ಲಿ ಕೋಪ ಮಾಡ್ಕೋತಾನೋ ಎಂದು ಒಂದೇ ಉಸಿರಿಗೆ ಓಡುತ್ತ ನಮಾಜಿಗೆ ಹೋದ. ಅಪ್ಪ ಮಗನ್ನ ನೋಡಿ ನಿಟ್ಟುಸಿರು ಬಿಡುತ್ತ, "ಭಗವಂತ! ನನ್ನ ಮಗನ್ನ ಕಾಪಾಡು. ಅವನಿಗೆ ಯಾರ ದೃಷ್ಟಿಯೂ ಬೀಳದಿರಲಿ" ಎಂದು ಪ್ರಾರ್ಥಿಸಿ ಮನೆ ಒಳಗೆ ಕಾಲಿರಿಸಿದ ತಕ್ಷಣ,

"ಅಮ್ಮಿ, ನನ್ನ ಹುಂಡಿ ಇಲ್ಲ."

"ಎಲ್ಹೋಗುತ್ತೆ ನೋಡು. ಅಲ್ಲೆ ಎಲ್ಲಾದ್ರೂ ಇರುತ್ತೆ."

"ಎಲ್ಲೂ ಇಲ್ಲ ಅಮ್ಮಿ."

"ಆಮೇಲೆ ಹುಡುಕುವಂತೆ ಬಾ. ನಾವು ಮೊದಲು ನಮಾಜ್ ಮಾಡೋಣ."

ಕಾವ್ಯಲೋಕ

# ಜೈಲು ಕೋಣೆ

ಇದು ಸಾಧ್ಯ
ಕೆಲವೊಮ್ಮೆ ಮಾತ್ರ ಸಾಧ್ಯ,
ವಿಶೇಷವಾಗಿ ಈಗಂತೂ ಖಂಡಿತ ಸಾಧ್ಯ.
ಜೈಲು ಕೋಣೆಯೊಳಗೇ
ಒಂದು ಕುದುರೆಯನೇರಿ
ಓಡಿಹೋಗುವುದು...

ಜೈಲು ಗೋಡೆಗಳು ಮಾಯವಾಗಬಲ್ಲವು
ಜೈಲೇ ರಣರಂಗವಿರದ
ದೂರದ ನಾಡಾಗಬಲ್ಲದು.

'ಈ ಗೋಡೆಗಳನೇನು ಮಾಡಿದಿ ?'
'ಅವನ್ನು ಕಲ್ಲುಬಂಡೆಗಳಿಗೆ ತಿರುಗಿ ಕೊಟ್ಟುಬಿಟ್ಟೆ.'
'ಅದರ ಚಾವಣಿ ?'
'ಕುದುರೆಯ ಜೀನಾಗಿಸಿದೆ.'
'ನಿನ್ನ ಬಂಧಿಸಿದ ಸರಪಳಿ ?'
'ಅದನೊಂದು ಪೆನ್ಸಿಲ್ ಮಾಡಿದೆ.'

ಜೈಲು ಕಾವಲುಗಾರನಿಗೆ ಸಿಟ್ಟು ಬಂತು.
ಮಾತು ನಿಲಿಸಿದ.
ತನಗೆ ಕವಿತೆಯೆಂದರೆ ನಿಕೃಷ್ಟ ಎಂದ.
ನನ್ನ ಕೋಣೆಯ ಚಿಲಕ ಹಾಕಿ ಹೋದ.

ಮರು ಬೆಳಿಗ್ಗೆ ಬಂದವನು
ಬೆಳಬೆಳಿಗ್ಗೆಯೇ
ನನ್ನ ನೋಡಿ ಕಿರುಚಿದ :



'ಇಷ್ಟೆಲ್ಲ ನೀರು ಎಲ್ಲಿಂದ ಬಂತು ?'
'ನೈಲ್ ನದಿಯ ಬಳಿ ಕಡ ಪಡೆದೆ.'
'ಇವೆಲ್ಲ ಮರ ?'
'ಡಮಾಸ್ಕಸಿನ ತೋಟಗಳದ್ದು.'

'ಈ ಹಾಡು ?'
'ನನ್ನೆದೆ ಮಿಡಿತ...'

ಕಾವಲುಗಾರ ಹುಚ್ಚಾದ
ನನ್ನೊಡನೆ ಮಾತು ನಿಲಿಸಿದ.
ನನ್ನ ಕವಿತೆ ತನಗಿಷ್ಟವಿಲ್ಲ ಎಂದ.
ಕೋಣೆಯ ಬಾಗಿಲು ಹಾಕಿ ಹೋದ.

ಆದರೆ
ಸಂಜೆಗೇ ವಾಪಸಾದ.

'ಈ ಚಂದ್ರ ಎಲ್ಲಿಂದ ಬಂದ ?'
'ಬಾಗ್ದಾದಿನ ಇರುಳುಗಳಿಂದ.'
'ವೈನ್ ?'
'ಅಲ್ಜೀರಿಯಾದ ದ್ರಾಕ್ಷಾ ತೋಟಗಳಿಂದ.'
'ಸ್ವಾತಂತ್ರ್ಯ ?'
'ಕಳೆದ ಇರುಳು ನನ್ನ ಕಟ್ಟಿದ ಈ ಸರಪಳಿಯಿಂದ...'

ಜೈಲು ಕಾವಲುಗಾರ ದುಃಖಿತನಾದ...
ಯಾಚಿಸತೊಡಗಿದ,
'ನನ್ನ ಸ್ವಾತಂತ್ರ್ಯ ನನಗೆ ಮರಳಿ ಕೊಡು...'

ಮೂಲ : **ಮಹಮೂದ್ ದರ್ವೇಶ್**
ಕನ್ನಡಕ್ಕೆ : **ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ
ಕಾವಲಕ್ಕಿ ಅಂಚೆ – ೫೮೧ ೩೬೧
ಹೊನ್ನಾವರ ತಾಲೂಕು, ಉತ್ತರ ಕನ್ನಡ ಜಿಲ್ಲೆ

"ಇಲ್ಲ ಅಮ್ಮಿ, ನನ್ನ ಹುಂಡಿ ಬೇಕು."

ಹೆಂಗಸರಿಗೆ ಮನೆಯಲ್ಲೇ ಹಬ್ಬದ ನಮಾಜ್. ಹಬ್ಬದ ನಮಾಜ್ ಬರೀ ಎರಡು ರಕಾತು. ಬೇಗ ಮುಗಿದುಹೋಗತ್ತೆ. ದುವಾ ಮಾತ್ರ ತುಂಬ ಉದ್ದ ಎಳೆಯತ್ತೆ. ಮಹಿಳೆಯರು ಮಸೀದಿಯಲ್ಲಿ ನಮಾಜ್ ಮಾಡಬೇಕೇ ಬೇಡವೇ, ಎಂದು ಗಂಡಸರು ಚರ್ಚಿಸಿ ನಿರ್ಣಯಿಸುವ ವಿಷಯ.

ಜೀವನದ ಅವಶ್ಯಕ ಬೇಕುಬೇಡಗಳನ್ನು ಕೊಡುವವನು ಅವನೇ. ಅವನ ಬಳಿ ಬೇಡಲೇ ಬೇಕು. ಅವನು ಕೋಪ ಮಾಡಿಕೊಂಡರೆ ಬದುಕು ನರಕ. ಮಗಳ ಜೊತೆ ಮನೆಯೆಲ್ಲ ತಡಕಾಡಿದೆ. ಮಗಳ ಹುಂಡಿ ಎಲ್ಲೂ ಕಾಣಲಿಲ್ಲ. ವರ್ಷಕ್ಕೆ ಒಮ್ಮೆ ಅವಳು ಹುಂಡಿ ಒಡೆದು, ಅರ್ಧ ಹಣ ದಾನ ಮಾಡಿ, ಇನ್ನು ಅರ್ಧವನ್ನು ಬ್ಯಾಂಕಿಗೆ ಹಾಕ್ತಾ ಇದ್ಲು. ಆದರೆ ಹುಂಡಿ ಹೋದದ್ದಾದರೂ ಎಲ್ಲಿ! ಮನೆಗಂತೂ ಯಾರೂ ಬರಲಿಲ್ಲ. ಮನೆಯ ಯಜಮಾನ ಬಂದದ್ದು ಅರ್ಧರಾತ್ರಿಗಷ್ಟೆ. ನಾನು ಗಾಢನಿದ್ರೆಯಲ್ಲಿದ್ದೆ. ಈಗ ತಾನೆ ನಮಾಜಿಗೆ ಹೋಗಿ ಬಂದೆ. ಹಾಗಾದ್ರೆ ಹುಂಡಿ ಹೋದದ್ದಾದರು ಎಲ್ಲಿ ?

"ಒಂದ್ ಕೆಲ್ಸ ಮಾಡೋಣ. ಮೊದಲು ನಮಾಜ್ ಮಾಡೋಣ. ಅಲ್ಲಾ ನಮ್ಮ ಹುಂಡಿ ಎಲ್ಲಿದೆ ಅಂತ ಹೇಳ್ತಾನೆ. ಆಯ್ತಾ ?" ಮಗಳ ಬಿಕ್ಕಳಿಕೆ ಕಡಿಮೆ ಆಗಲೇ ಇಲ್ಲ. ಹಬ್ಬದ ದಿನವೂ ಕಣ್ಣೀರು! ನಮಾಜಿನಲ್ಲಿ ಅತ್ತು ಅತ್ತು ದುವಾ ಮಾಡಬೇಕಂತೆ. ಅಳು ಬರದಿದ್ದರೂ ಅಳುವ ಹಾಗೆ ನಟಿಸಬೇಕಂತೆ. ನಮ್ಮ ಅಮ್ಮಾನೂ ನಮಾಜಿನಲ್ಲಿ ತುಂಬಾ ಅಳ್ತಾ ಇದ್ಲು. ಕೈಚಾಚಿ ಗೋಗರೀತಾ ಇದ್ಲು. ಅವಳನ್ನ ನೋಡೇನೆ ನಾವೂ ಅಳೋದನ್ನ ಕಲ್ತಿದ್ದು. ನಾನೊಬ್ಬಳೆ ನಮಾಜ್ ಮಾಡಿದಾಗ ತುಂಬಾ ಅಳ್ತೀನಿ. ಮಗಳು ಜೊತೇಲಿದ್ದಾಗ ಅವಳಿಗೆ ಅಳೋದನ್ನ ಕಲಿಸಬಾರದು ಅಂತ ನಾನು ಅಳ್ತಾ ಇರಲಿಲ್ಲ. ಭಗವಂತ ಮನ ನೋಯಿಸಿದರೆ ಅಳು ತಂತಾನೇ ಬಂದುಬಿಡುತ್ತದೆ. ಅದಕ್ಕೆ ನಟನೆಯೇ ಬೇಕಾಗಿಲ್ಲ. ಇಡೀ ನಮಾಜ್ ಮಗಳ ಕಣ್ಣೀರಿನಲ್ಲಿ ತೋಯ್ದುಹೋಗಿತ್ತು. ಭಗವಂತ ಬಹಳ ವಿಶಾಲಹೃದಯಿ. ಹೆಜ್ಜೆ ಹೆಜ್ಜೆಗೂ ಪರೀಕ್ಷೆಗಳನ್ನು ಒಡ್ಡುತ್ತಿರುತ್ತಾನೆ. ಏನ್ ಸಾಧಿಸಕ್ಕೋ!

ಮನೆ ಬಿರ್‍ಯಾನಿ ವಾಸನೆಯಿಂದ ಘಮಘಮಿಸ ತೊಡಗಿತು. ಬಿರ್‍ಯಾನಿ ಕುದಿಯುವುದಕ್ಕಿಂತಲೂ ಬೇಯುವಾಗ ಬಹಳ ಸುವಾಸನೆ ಹರಡುತ್ತದೆ. ಮಗಳ ಹುಂಡಿ ಸಿಗಲಿಲ್ಲ. ಅವಳ ಕಣ್ಣೀರು ನಿಲ್ಲಲಿಲ್ಲ. ಅದನ್ನು ನೋಡಲಾಗದೆ ಆಚೆ ಗೇಟಿನ ಬಳಿ ಬಂದು ನಿಂತು ಕೊಂಡೆ. ಅಷ್ಟು ಹೊತ್ತಿಗಾಗಲೇ ಹುಡುಗರೆಲ್ಲಾ ನಮಾಜ್ ಮುಗಿಸಿಕೊಂಡು ಆನಂದದಿಂದ ಕಿರಿಚುತ್ತ ತಮ್ಮ ಗಾಡಿಗಳ ಸೈಲನ್ಸರ್‌ಗಳನ್ನು ಕಿತ್ತು ಬಿಸಾಡಿ ವಿಚಿತ್ರವಾಗಿ ಶಬ್ದ ಮಾಡುತ್ತ ಉತ್ಸಾಹದಿಂದ ಅತ್ತಿತ್ತ ಹೋಗುತ್ತಿದ್ದರು. ಇವರೆಲ್ಲರೂ ಈದ್ ನಮಾಜ್‌ನಲ್ಲಿ ಖಂಡಿತವಾಗಿ ಅತ್ತಿರುತ್ತಾರೆ. ಏಕೆಂದರೆ ದುವಾ ಹಂಗ್ ಮಾಡಿರ್‍ತಾರೆ ಎಂದು ನನಗೆ ನಾನೇ ಸಮಾಧಾನ ಮಾಡಿಕೊಂಡು ನಿಂತುಕೊಂಡಿದ್ದೆ.

ಪ್ರತಿ ದಿನ ಬೆಳಿಗ್ಗೆ ಬೇಗ ಬೀದಿ ಗುಡಿಸಿಕೊಂಡು ಹೋಗುವವಳು ಇವತ್ತು ಈದ್ ಅಂತ ಏನೋ ತಡವಾಗಿ ಗುಡಿಸಿಕೊಂಡು ಹೋಗ್ತಾ ಇದ್ಲು. ಎರಡೂ ಕೈಗಳಲ್ಲೂ ಪೊರಕೆ, ಕಸವನ್ನು ಅತ್ತ-ಇತ್ತ ಎರಡೂ ಕಡೆ ಹೊಡೆದುಕೊಂಡು ಒಂದು ಕಡೆ ಸೇರಿಸಿ ಎತ್ತಿ ಗಾಡಿ ಒಳಕ್ಕೆ ಹಾಕುತ್ತಿದ್ದಳು. ಮನೆಯ ಮುಂದಿನ ಗಿಡದ ಕೆಳಗಿನಿಂದ ಕಸವನ್ನು ತೆಗೆಯುವಾಗ ಹಸಿರು, ಹಳದಿ, ಕೇಸರಿ ಬಣ್ಣದ ಮಣ್ಣಿನ ತುಂಡುಗಳು ನನ್ನ ಕಣ್ಣಿಗೆ ಬಿದ್ದವು. ಹಬ್ಬ ಅಂದ್ರೆ ಊರೆಲ್ಲಾ ಕಸಾ ತಾನೇ! ಕಸ ಜಾಸ್ತಿ ಇತ್ತು. ಅವಳು ಅವನ್ನೆಲ್ಲಾ ಪೊರಕೆಯಿಂದ ಒಂದು ಕಡೆಗೆ ಎಳೆಯುತ್ತಿದ್ದಳು. ಅವಳ ಪೊರಕೆಯನ್ನು ಲೆಕ್ಕಿಸದೆ ಬಿದ್ದ ಚೂರುಗಳನ್ನು ಹುಚ್ಚಿಯಂತೆ ಹೆಕ್ಕತೊಡಗಿದೆ. ಅವಳು ತಬ್ಬಿಬ್ಬಾಗಿ ನನ್ನನ್ನು ನೋಡತೊಡಗಿದಳು. ಮೊನಚಾದ ಪೊರಕೆ ಕಡ್ಡಿಗಳು ನನ್ನ ಕೈಗೆ ಚುಚ್ಚಿಕೊಂಡವು. ಸಿಕ್ಕಿದ್ದು ಹುಂಡಿಯ ಚೂರುಗಳು ಮಾತ್ರ. ಮಿಕ್ಕ ಅಷ್ಟಿಷ್ಟು ಚೂರುಗಳು ? ಅದರ ದುಡ್ಡು ? ಯಕ್ಷ ಪ್ರಶ್ನೆಯಾಯಿತು.

"ಅಮ್ಮಾವ್ರೆ ಏನು...?"

"ಏನಿಲ್ಲ ನನ್ನ ಓಲೆ ಕಳೆದುಹೋಗಿತ್ತು. ಅದಕ್ಕೆ ಓಡಿಬಂದೆ."

ಮನೆಯ ಸುತ್ತಮುತ್ತಲೆಲ್ಲಾ ಬಿರ್‍ಯಾನಿ ಘಮಘಮ. "ಬಿರಿಯಾನಿ ವಾಸನೆಯಿಂದ ನಮಗೆಲ್ಲ ಮನೇಲಿ ಇರಕ್ಕಾಗ್ತಾ ಇಲ್ಲ." ಪಕ್ಕದ ಮನೆ ಉಮಕ್ಕ ನಗುವಿನ ಚಟಾಕಿ ಹರಿಸಿದರು. ಅವರಿಗೆ ಉತ್ತರವಾಗಿ ಸುಮ್ಮನೆ ಮುಗುಳ್ನಗುತ್ತ ಒಳ ಬಂದೆ. ಕೈಯಲ್ಲಿದ್ದ ಚೂರುಗಳನ್ನು ಡೈನಿಂಗ್ ಟೇಬಲ್ ಮೇಲಿಟ್ಟೆ. ಬೋರಲಾಗಿ ಬಿದ್ದು ಅಳುತ್ತಿದ್ದ ಮಗಳ ಕಣ್ಣು ಅದರ ಮೇಲೆ ಬಿದ್ದ ತಕ್ಷಣ ಅವಳ ಅಳು ನಿಂತುಹೋಯಿತು. ಏನು ಹೇಳಬೇಕೆಂದು ತೋಚಲಿಲ್ಲ. ನನ್ನನ್ನು ವಿಚಿತ್ರವಾಗಿ ನೋಡಿ ಅಲ್ಲಿಂದ ಎದ್ದು ಮೇಲೆ ಹೋಗಿ ಮಲಗಿಬಿಟ್ಟಳು.

ಅಲ್ಲಿ 'ಈದ್ ಮುಬಾರಕ್'. ಶಿಲೆಯಾಗಿ ಕುಳಿತಿದ್ದ ನನಗೆ ಈ ದನಿ ಎಚ್ಚರಿಸಿತು.

ಮಗ ಒಳಗೆ ಕಾಲಿಡುತ್ತಲೇ,

"ಫರಿದಾ ಎಲ್ಲಿ! ಅವಳಿಗೆ ಈದಿ ಕೊಡಬೇಕು. ಅವಳಿಗೆ ಕೊಟ್ಟಮೇಲೆ ನೀನೂ ನನಗೆ ಕೊಡ್ತಿಯಾ ತಾನೇ ?" ಮಗ ಆತುರದಿಂದ ಕೇಳಿದ.

"ನೀನೂ" ಅಂದ್ರೆ ಇವನಿಗೆ ಮೊದಲೇ ಈದಿ ಸಿಕ್ಕಿದೆ ಎಂದಾಯಿತು. ಆಶ್ಚರ್ಯದಿಂದ ಯಾರು ಕೊಟ್ಟಿರಬಹುದು ಎಂದು ಯೋಚಿಸಿದೆ. ನನ್ನ ಕುತೂಹಲವನ್ನು ಗ್ರಹಿಸಿ "ಅಪ್ಪ ಕೊಟ್ರು" ಎಂದ ಮೆಲುದನಿಯಲ್ಲಿ. ಮಗನಿಗೆ ಹುಂಡಿಯ ವಿಷಯ ಹೇಳುವುದು ಉಚಿತವೆನಿಸಲಿಲ್ಲ. ಮಗ ನಮಾಜಿಗೆ ಹೋಗಿ ಖಬರಸ್ತಾನಕ್ಕೆ ಹೋಗಿ ಬಂದಿದ್ದ. ನನ್ನ ಯಜಮಾನ ಆಚೆ ಇನ್ನೂ ಗೆಳೆಯರೊಂದಿಗೆ ಮಾತಾಡ್ತಾ ನಿಂತಿದ್ದರು. ಏನೂ ಕೇಳುವ ಹೇಳುವ ಗೋಜಿಗೆ ಹೋಗದೆ ನಾನು ನನ್ನ ಕಾರ್ಯದಲ್ಲಿ ಮಗ್ನಳಾದೆ. ಸುಮಾರು ಹೊತ್ತಿನ ನಂತರ ಪತಿ ದೇವರು ಒಳ ಬಂದರು. ಎಷ್ಟೇ ವೈರಿ ಆಗಿದ್ದರೂ ಈದ್ ದಿನ ಅವರನ್ನು ಕ್ಷಮಿಸಿ ಅಪ್ಪಿಕೊಂಡು 'ಈದ್ ಮುಬಾರಕ್' ಹೇಳಲೇ ಬೇಕು. ಪರಸ್ಪರ ದ್ವೇಷ ಅಸೂಯೆ ವೈಮನಸ್ಯಗಳನ್ನು ಮರೆತು ಈದ್ ಆಚರಿಸಬೇಕು. ಇದು ಪರಂಪರೆ, ಧರ್ಮ! ನಾನೂ ಸಹ ಧರ್ಮಿಷ್ಠ ಪತಿರಾಯನಿಗೆ ಈದ್ ಮುಬಾರಕ್ ಹೇಳಲು ಕೈ ಮುಂದುಮಾಡಿದೆ. ಕೈ ಕುಲುಕಿ ಆಲಂಗಿಸಿ ಕೊಂಡು 'ಈದ್ ಮುಬಾರಕ್' ಹೇಳಬೇಕಾಗಿದ್ದವರು ಕೈ ಹಿಂದೆ ತೆಗೆದುಕೊಂಡು, "ನಡಿ, ಊರಿಗೆ ಹೋಗೋಣ. ಅಲ್ಲಿ ಎಲ್ಲಾರೂ ಇರ್‍ತಾರೆ. ಅಲ್ಲಿ ಈದ್ ಮಾಡೋಣ ಇಲ್ಲೇನಿದೆ ಸುಡುಗಾಡು. ನನ್ನ ಅಕ್ಕಂದಿರು ಕಾಯ್ತಾ ಇರ್‍ತಾರೆ" ಎಂದರು.

ನಾನು ಬಲವಂತದಿಂದ ನನ್ನ ಕೈಗಳನ್ನು ಹಿಂದೆ ಸರಿಸಿಕೊಂಡೆ.

"ಇಲ್ಲ, ನನಗೆ ನಾಳೆ ರಜೆ ಇಲ್ಲ."

"ನಿಂದೇನು ಮಹಾ ಕೆಲ್ಸ. ಒಂದು ದಿನ ರಜ ಹಾಕು"

"ನನ್ನ ರಜೆ ಎಲ್ಲಾ ಮುಗಿದುಹೋಗಿದೆ. ಮಕ್ಕಳ ಪರೀಕ್ಷೆ ಇದ್ದಾಗ ಸುಮಾರು ರಜೆ ಹಾಕಿದ್ದೀನಿ"

"ಹಿಂಗಾಗುತ್ತೆ ಅಂತ ಗೊತ್ತಿದ್ದಿದ್ರೆ ನಾನು ಈದ್ ಮುಗಿಸಿಕೊಂಡು ಬರ್‍ತಾ ಇದ್ದೆ."

"ರಾತ್ರಿ ಪಕ್ಕ ಮಲಗೋವಾಗ ಗೊತ್ತಿರಲಿಲ್ಲವೇನು ? ಸುಮ್ನೆ ಯಾಕ್ ಬಡಕೋತೀರ್‍ರಿ...?

"ಏನೇ ? ಎದುರು ಜವಾಬು ಕೊಡ್ತಿಯಾ ? ನಿನ್ನ ಯೋಗ್ಯತೆ ಏನು ಅಂತ ಚೆನ್ನಾಗಿ ಗೊತ್ತು. ನಾಲ್ಕು ಕಾಸು ದುಡೀತೀನಿ ಅಂತ ಕೊಬ್ಬು ಮಾಡ್ತೀಯಾ, ಹೂ ಮುಡಕೊಂಡು ಹೋದವರೆಲ್ಲ ದುಡ್ಡು ಸಂಪಾದಿಸ್ತಾರೆ. ನೀನ್ ಏನ್ ಮಹಾ."

ಮುಷ್ಟಿ ಬಿಗಿದು ಹೊಡೆದ ಹೊಡೆತಕ್ಕೆ ಕಣ್ಣು ಮಂಜಾಗಿ ತಲೆ ತಿರುಗಿತು. ಮಕ್ಕಳಿಬ್ಬರೂ ನನ್ನನ್ನು ತಬ್ಬಿಕೊಂಡು ಅಳತೊಡಗಿದರು.

"ಈ ಛಿನಾಲಿಗೆ ಈದ್ ಬೇರೆ ಕೇಡು. ನಡೀಯೋ ಹೋಗೋಣ" ಎನ್ನುತ್ತ ಇಬ್ಬರನ್ನೂ ದರದರನೆ ಎಳೆದರು. ಇಬ್ಬರೂ ಕೈ ಬಿಡಿಸಿಕೊಂಡು, "ನಾವು ಬರಲ್ಲ" ಎಂದು ಗಡುಸಾಗಿ ಉತ್ತರಿಸಿ ಸೆಟೆದು ನಿಂತರು.

**ಡಾ॥ ಷಾಕಿರಾ ಖಾನಂ**
ನಂ. ೪೩/ಎ, ೫ನೇ 'ಎ' ಅಡ್ಡರಸ್ತೆ
ಜೆ. ಪಿ. ನಗರ ೧ನೇ ಹಂತ, ಟಿ.ಎಮ್.ಸಿ.ಎಲ್. ಲೇಔಟ್
ಬೆಂಗಳೂರು – ೫೬೦ ೦೭೮

## ಅಮಾನುಷರು

ಮಾತನ್ನಾಡುವೆಯೆಂದ ಮಾತ್ರಕ್ಕೆ ನೀನು
ಜೀವಂತ ಎಂಬುದನು ನಂಬೆನೋ
ನಾನು
ಮನುಷ್ಯತ್ವ ಸತ್ತದಿನ ನೀ ಕೂಡ ಸತ್ತೆ
ಸುಡದೇನೆ ನಿನ್ನ ಹೆಣ ಕೊಳೆಯುತಿದೆ
ಗೊತ್ತೆ ?

**ವಿ. ಜೆ. ಭಂಡಾರಿ (ವಿಡಂಬಾರಿ)**
ಕಡತೋಕ – ೫೮೧ ೩೩೮, ಉತ್ತರ ಕನ್ನಡ ಜಿಲ್ಲೆ



# ಋಗ್ವೇದ ಪ್ರವೇಶಿಕೆ



## ಐತಿಹ್ಯ ಮತ್ತು ವಾಸ್ತವ

'ಅಸ್ಯ ವಾಮಸ್ಯ' ಸೂಕ್ತದಲ್ಲಿ ಹಲವು ಎಳೆಗಳಿವೆಯೆಂಬುದನ್ನು ಈವರೆಗೆ ಗಮನಿಸಲಾಗಿದೆ. ಇನ್ನುಳಿದ ಭಾಗದಲ್ಲಿ ಪ್ರಧಾನವಾಗಿ ಯಜ್ಞವೇ ಮುಖ್ಯ ವಸ್ತು. ಪ್ರಸ್ತುತ ಇಪ್ಪತ್ತನಾಲ್ಕನೆಯ ಕಂತಿನಲ್ಲಿ ಅದನ್ನು ಪರಿಶೀಲಿಸೋಣ.

ಯಜ್ಞದಲ್ಲಿ ಆಹುತಿ ನೀಡಲಾಗುವ ಅನೇಕ ದ್ರವ್ಯಗಳಲ್ಲಿ ಹಾಲು ಸಹ ಒಂದು. ಅದನ್ನು ನೀಡುವ ಗೋವನ್ನುದ್ದೇಶಿಸಿ ಹೇಳುವಾಗ ಕವಿಯು ಗೋವಿಗೆ ಪ್ರಶಸ್ತವಾದ ಹುಲ್ಲುಗಾವಲು ದೊರೆಯಲೆಂದು ಆಶಿಸುತ್ತಾನೆ. ಗೋವಿಗೆ ಅದು ದೊರೆತರೆ ಯಜ್ಞ ಮಾಡುವವರು ಸಂಪದ್ಭರಿತರಾಗುತ್ತಾರೆಂಬ ಸುಳಿವನ್ನಿಲ್ಲಿ ನೀಡಲಾಗಿದೆ. ಗೋವಿಗೆ ಸರ್ವದಾ, ಅಂದರೆ ಎಲ್ಲ ಋತುಗಳಲ್ಲೂ, ಒಳ್ಳೆಯ ಹುಲ್ಲು ಸಿಗುವಂತಿರಬೇಕು ಮತ್ತು ಹುಲ್ಲುಗಾವಲಿನಿಂದ ಗೋಶಾಲೆಗೆ ಹಿಂದಿರುಗುವಾಗ ಹಾದಿಯಲ್ಲಿ ಶುದ್ಧವಾದ ನೀರನ್ನು ಕುಡಿಯಲು ಅನುಕೂಲವಿರಬೇಕು. (೪೦ : ಸೂಯವಸಾದ್ಭಗವತೀ ಹಿ ಭೂಯಾಃ ಅಥೋ ವಯಂ ಭಗವಂತಃ ಸ್ಯಾಮ। ಅದ್ಧಿ ತೃಣಂ ಅಘ್ನ್ಯೇ ವಿಶ್ವದಾನೀಂ ಪಿಬ ಶುದ್ಧಂ ಉದಕಂ ಆಚರಂತೀ॥). ಗೋವು 'ಭಗವತೀ' ಆದರೆ ಯಾಜ್ಞಿಕನು 'ಭಗವಂತ'ನಾಗುತ್ತಾನೆ. ಗೋವಿನ ಸಂದರ್ಭದಲ್ಲಿ 'ಭಗ' ಎಂದರೆ ಸುಖ ಮತ್ತು ಸಂತೃಪ್ತಿ ನೀಡುವ ಯವ (ಬಾರ್ಲಿ) ಮುಂತಾದ ಆಹಾರ ಪದಾರ್ಥಗಳು. ಬಹುಶಃ ಕಾಳನ್ನು ತೆಗೆದನಂತರದ ಹುಲ್ಲು ಗೋವಿಗೆ ಆಹಾರವೆಂಬ ಸೂಚನೆ ಇದೆಂದು ತೋರುತ್ತದೆ. ಯಾಜ್ಞಿಕನ ಸಂದರ್ಭದಲ್ಲಿ 'ಭಗ' ಎಂದರೆ ಸಂಪತ್ತು. ಗೋವನ್ನು 'ಅಘ್ನ್ಯೇ' ಎಂದು ಸಂಬೋಧಿಸಲಾಗಿದೆ. ಅಂದರೆ, ಅದು ಕೊಲ್ಲುವಿಕೆಗೆ ಗುರಿಯಾಗುವಂಥದಲ್ಲ ಎಂದರ್ಥ. ಋಗ್ವೇದದಲ್ಲಿ 'ಕೊಲ್ಲಲ್ಪಡದ' ಗೋವು, ಮುಂದೆ ಅತಿಥಿಗಳ ಔತಣಕ್ಕಾಗಿ "ಕೊಲ್ಲಲ್ಪಡಬಹುದೆಂಬ" ಅರ್ಥದಲ್ಲಿ ಅತಿಥಿಗೆ 'ಗೋಘ್ನ' ಎಂಬ ನಾಮಪದದ ಪ್ರಯೋಗಕ್ಕೆ ಹಾದಿ ಮಾಡಿಕೊಟ್ಟಿದೆ. ಕುನ್ಹನ್ ರಾಜ ಈ ಮಂತ್ರದಲ್ಲಿ ಜ್ಞಾನದ ವೈಭವೀಕರಣವಿದೆಯೆಂದು ವ್ಯಾಖ್ಯಾನಿಸಿದ್ದಾರೆ. ಜ್ಞಾನದಿಂದ ಅಖಂಡ ತೃಪ್ತಿ ದೊರೆಯುತ್ತದೆಂಬ ತತ್ತ್ವವನ್ನು ಅವರು ಈ ಮಂತ್ರದಲ್ಲಿ ಸಂಶೋಧಿಸಿದ್ದಾರೆ. ಅದಕ್ಕಾಗಿ ಕವಿಯ ವಾಣಿಯನ್ನು ಇಲ್ಲಿ 'ಗೋವು' ಎಂದು ಕರೆಯಲಾಗಿದೆಯೆಂದು ಅವರ ಅಂಬೋಣ. ಗೋವು ಆಹಾರಕ್ಕಾಗಿ ಎಲ್ಲೆಲ್ಲೂ ಮುಕ್ತವಾಗಿ ಅಡ್ಡಾಡುವಂತೆ ಕವಿಯು ಜ್ಞಾನಕ್ಕಾಗಿ ತಹತಹಿಸಿ ಎಲ್ಲೆಲ್ಲೂ ಅದನ್ನು ಅರಸುತ್ತಾನೆ. ಆತ್ಮತೃಪ್ತಿ ಭಾವದ ಕವಿಯ ವ್ಯಕ್ತಿತ್ವ ದರ್ಶನವು ಈ ಮಂತ್ರದ ಸಾರವೆಂದು ಕುನ್ಹನ್ ರಾಜ ಅಭಿಪ್ರಾಯಪಟ್ಟಿದ್ದಾರೆ. 'ಗೋ' ಶಬ್ದಕ್ಕೆ ಋಗ್ವೇದದಲ್ಲಿ 'ಮಾತು' ಎಂಬರ್ಥವಿರುವುದು ಈ ರೀತಿಯ ಅವರ ವ್ಯಾಖ್ಯಾನಕ್ಕೆ ಪ್ರೇರಣೆ ನೀಡಿದೆ. 'ತಿಳಿದವನು' ಮತ್ತು 'ತಿಳಿಯದವನು' ಎಂಬ ಭೇದವನ್ನು 'ಅಸ್ಯ ವಾಮಸ್ಯ' ಸೂಕ್ತದಲ್ಲಿ ಪ್ರಸ್ತಾಪಿಸಿರುವುದನ್ನು ನಾವೀಗಾಗಲೆ ನೋಡಿದ್ದೇವೆ. ತೃಪ್ತಿಯ ಸಾಕಾರ ರೂಪವನ್ನು ಕವಿಯಲ್ಲಿ ಕಾಣಬಹುದೆಂದು ಈ ಮಂತ್ರದ ವ್ಯಾಖ್ಯಾನದಲ್ಲಿ ಕುನ್ಹನ್ ರಾಜ ಸೂಚಿಸಿದ್ದಾರೆ. 'ಗೋ' ಶಬ್ದವು 'ಮಾತು' ಎಂಬರ್ಥ ಹೊಂದಿದೆಯೆಂಬುದು ಮುಂದಿನ ಮಂತ್ರಕ್ಕೆ ಸೂಕ್ತ ಹಿನ್ನೆಲೆಯನ್ನು ಕಲ್ಪಿಸಿಕೊಟ್ಟಿದೆ. ಶಬ್ದಗಳು ವಿವಿಧ ಕ್ರಮಗಳಲ್ಲಿ ಅಥವಾ ಛಂದಸ್ಸುಗಳಲ್ಲಿ ನಿಬದ್ಧವಾದಾಗ ಅರ್ಥಗಳ ಮಳೆಯು ಸುರಿಯುತ್ತದೆ. ಮಾತಿನಲ್ಲಿ ಪ್ರಯೋಗವಾಗುವ ಅಕ್ಷರಗಳು ನಿರ್ದಿಷ್ಟ ಸಂಖ್ಯೆಯವು, ಆದರೆ ಆ ಅಕ್ಷರಗಳ ಜೋಡಣೆಯು ಸಾವಿರಾರು ರೂಪಗಳನ್ನು ನೀಡುತ್ತದೆ. "ಸ್ವರ್ಗದಲ್ಲಿ ಅಕ್ಷರಗಳು ಅಸಂಖ್ಯ" ಎಂದು ಮಂತ್ರವು ಹೇಳಿದಾಗ ಇದೇ ತಾತ್ಪರ್ಯವು ಸೂಚಿತವಾಗುತ್ತದೆ. "ಗೋವು ಶಬ್ದವನ್ನುಂಟುಮಾಡಿದಾಗ ನೀರು ಸುರಿಯುತ್ತದೆ" ಎಂಬ ಮಂತ್ರದಲ್ಲಿನ ಪದಗಳನ್ನು ವ್ಯಾಖ್ಯಾನಿಸುವಾಗ 'ಗೋವು' ಎಂಬುದನ್ನು 'ಮೋಡ' ಎಂಬರ್ಥದಲ್ಲಿ ತೆಗೆದುಕೊಳ್ಳಬಹುದೆಂದು ಗ್ರಿಫಿತ್ ಸೂಚಿಸಿದ್ದಾನೆ. ಯಾಸ್ಕನ 'ನಿರುಕ್ತ'ವನ್ನು ಅನುಸರಿಸಿ ಸಾಯಣನು 'ಏಕಪದೀ,' 'ದ್ವಿಪದೀ' ಇತ್ಯಾದಿಯಾಗಿ 'ಮಾತು' ಪರಿವರ್ತನೆಗೊಳ್ಳುತ್ತದೆ ಎಂಬುದನ್ನು ಬೇರೊಂದು ರೀತಿಯಲ್ಲಿ ಅರ್ಥೈಸಿದ್ದಾನೆ. "ಮೋಡದ ಚಲನೆಗೆ ಕಾರಣವಾದ ಗಾಳಿಯು" ಒಂದು; ಮೋಡ ಮತ್ತು ಅಂತರಿಕ್ಷ ಎರಡನ್ನೂ ಗಣನೆಗೆ ತೆಗೆದುಕೊಂಡರೆ ಎರಡು; ನಾಲ್ಕು ದಿಕ್ಕುಗಳೆಂದು ತೆಗೆದುಕೊಂಡರೆ ನಾಲ್ಕು,

ಜಿ. ರಾಮಕೃಷ್ಣ







ಇತ್ಯಾದಿ. ಕುನ್ಹನ್ ರಾಜ ಮಾತ್ರ 'ನೀರು' ಎಂಬುದನ್ನು 'ಅಸಾಮಾನ್ಯವಾದ ಸುಖ' ಎಂಬರ್ಥದಲ್ಲಿ ವ್ಯಾಖ್ಯಾನಿಸಿದ್ದಾರೆ. ಮಾತಿನಿಂದ ಲಭಿಸುವ ಜ್ಞಾನದ ಫಲ ಅದೆಂಬುದು ಅವರ ಇಂಗಿತ (೪೧: ಗೌರೀಃ ಮಿಮಾಯ ಸಲಿಲಾನಿ ತಕ್ಷತೀ ಏಕಪದೀ ದ್ವಿಪದೀ ಸಾ ಚತುಷ್ಪದೀ। ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಪರಮೇ ವ್ಯೋಮನ್॥). ಈ ಸೂಕ್ತದ ಭಾಷ್ಯದ ಆರಂಭದಲ್ಲಿ ಸಾಯಣನು ಶೌನಕನ 'ಋಗ್ವಿಧಾನ' ಎಂಬ ಗ್ರಂಥದಿಂದ ಒಂದು ಶ್ಲೋಕವನ್ನು ಉದ್ಧರಿಸಿದ್ದಾನೆ (೧.೧೧೪). ಋಗ್ವೇದ ಮಂತ್ರಗಳ ವಿನಿಯೋಗವನ್ನು ಹೇಳುವ ಗ್ರಂಥ ಅದು. 'ಅಸ್ಯ ವಾಮಸ್ಯ' ಸೂಕ್ತದ ಬಗ್ಗೆ ಅಲ್ಲಿ ಹೇಳಲಾಗಿರುವುದಿದು : "ದ್ವಿಜನು ಮೋಹಿತನಾಗಿ ಏನನ್ನಾದರೂ ಕಳವು ಮಾಡಿದ್ದರೆ ಮೂರು ರಾತ್ರಿ ಉಪವಾಸ ಮಾಡಿ ಶುಚಿರ್ಭೂತನಾಗಿ ಈ ಸೂಕ್ತವನ್ನು ಜಪಿಸಿದರೆ ಪಾಪ ವಿಮುಕ್ತನಾಗುತ್ತಾನೆ" (ಸ್ತೇಯಂ ಕೃತ್ವಾ ದ್ವಿಜೋ ಮೋಹಾತ್ ತ್ರಿರಾತ್ರೋ ಪೋಷಿತಃ ಶುಚಿಃ। ಸೂಕ್ತಂ ಜಪ್ತ್ವಾ ಅಸ್ಯವಾಮೀಯಂ ಕ್ಷಿಪ್ರಂ ಮುಚ್ಯೇತ ಕಿಲ್ಬಿಷಾತ್॥). ಪಾಪವಿಮುಕ್ತರಾಗುತ್ತಾರೋ ಇಲ್ಲವೋ ತಿಳಿಯದು, ಆದರೆ ದ್ವಿಜರು ಮೋಹಿತರಾಗಿ ಕಳವನ್ನಂತೂ ಮಾಡಲು ಹೇಸುತ್ತಿರಲಿಲ್ಲವೆಂದು ಶೌನಕನ ಮಾತಿನಿಂದ ತರ್ಕಿಸಬಹುದು. ಕಳವು ಮಾಡುವುದಕ್ಕೂ ಈ ಸೂಕ್ತಕ್ಕೂ ಸಂಬಂಧ ಕಲ್ಪಿಸುವುದು ಅತಿರೇಕ ಎನಿಸುತ್ತದೆ. ನಿಜಕ್ಕೂ ಸೂಕ್ತದ ಈ ಭಾಗದಲ್ಲಿ ಚರ್ಚೆಗೆ ಬಂದಿರುವುದು ಮಾತಿನ ಓಘ, ಅದರಿಂದ ದಕ್ಕುವ ಆನಂದ, ಮಾತಿನ ಅಸಂಖ್ಯ ರೂಪಗಳು, ಇತ್ಯಾದಿ. ಆದರೆ ಮಂತ್ರಗಳ ವಿನಿಯೋಗವು ಎಷ್ಟು ವಿಚಿತ್ರವಾಗಿ ಮತ್ತು ಅಸಂಬದ್ಧವಾಗಿ ಬೆಳೆದುಬಂದಿದೆಯೆಂದರೆ ಪೂಜಾಕಾರ್ಯದಲ್ಲಿ ದುರ್ಗಿ, ಪಾರ್ವತಿ, ಮುಂತಾದ ಹೆಸರುಗಳ ದೇವತೆಯ ಆವಾಹನೆ ಮಾಡುವಾಗ ಈ ಮಂತ್ರವನ್ನು ಹೇಳುವುದು ರೂಢಿಯಲ್ಲಿದೆ. "ಗೌರೀಃ" ಎಂಬ ಪದದ ಬಳಕೆಯಾಗಿರುವುದಷ್ಟೇ ಇಂತಹ ವಿನಿಯೋಗಕ್ಕೆ ಕಾರಣವಾಗಿರಬೇಕು !

'ಅಸ್ಯ ವಾಮಸ್ಯ' ಸೂಕ್ತದ ಈ ಭಾಗವನ್ನು, ಅಂದರೆ ೪೦ನೆಯ ಮಂತ್ರದಿಂದ ಕೊನೆಯವರೆಗೆ, ಮಾತು (ವಾಕ್) ಮತ್ತು ಯಜ್ಞ, ಈ ಎರಡು ನೆಲೆಗಳಲ್ಲಿ ಅರ್ಥೈಸಿಕೊಳ್ಳಲು ಅವಕಾಶವಿದೆ. ಸಾಯಣನು 'ಗೋ' ಶಬ್ದವನ್ನು ಮೋಡ ಎಂಬರ್ಥದಲ್ಲಿ ತೆಗೆದುಕೊಂಡು ವ್ಯಾಖ್ಯಾನಿಸುವಾಗ ಮುಂದಿನ ಮಂತ್ರಕ್ಕೆ ಯಾಸ್ಕನು ನೀಡಿರುವ ವಿವರಣೆಯನ್ನು ಸ್ವೀಕರಿಸಿದ್ದಾನೆ. "ಮೋಡವು ಸುರಿಸುವ ಮಳೆಯಿಂದಾಗಿ ಸಮುದ್ರವು ತುಂಬಿದೆ, ಪ್ರಪಂಚದ ನಾಲ್ಕು ದಿಕ್ಕುಗಳೂ ಅಸ್ತಿತ್ವವನ್ನು ಪಡೆದಿವೆ, ಪ್ರಪಂಚದ ಜೀವಕ್ಕೆ ಅದೇ ಆಧಾರ" ಎಂಬುದು ಅವನ ವಿವರಣೆ. (೪೨ : ತಸ್ಯಾಃ ಸಮುದ್ರಾಃ ಅಧಿ ವಿ ಕ್ಷರಂತಿ ತೇನ ಜೀವಂತಿ ಪ್ರದಿಶಃ ಚತಸ್ರಃ। ತತಃ ಕ್ಷರತಿ ಅಕ್ಷರಂ ತತ್ ವಿಶ್ವಂ ಉಪ ಜೀವತಿ॥). "ಅಕ್ಷರಂ" ಎಂಬುದನ್ನು ಈ ಕಾರಣದಿಂದಾಗಿ ಸಾಯಣನು 'ನೀರು' ಎಂದು ಅರ್ಥೈಸಿದ್ದಾನೆ. ಈವರೆಗೆ "ಮಾತು" (ವಾಕ್) ಎಂಬುದರ ಅಗಾಧ ವ್ಯಾಪ್ತಿಯನ್ನು ಪ್ರಸ್ತಾಪಿಸಿರುವ ಮಂತ್ರಗಳ ಹಿನ್ನೆಲೆಯಲ್ಲಿ ಅದನ್ನು ಹಾಗೆಯೇ 'ಅಕ್ಷರ'

ಗಾಯ

ಆಗಿದ್ದಾಗ ನೆಲಕ್ಕೆ ಬಿದ್ದೆ
ಕೈ ಕಾಲಿಗೆ ಪೆಟ್ಟಾಗಿತ್ತು
ಆನೆದ್ದು ಹೋದಾಗ
ಮೇಲಕ್ಕೆದ್ದೆ
ಹೃದಯಕ್ಕಾದ ಗಾಯ
ರಕ್ತಾಗಿತ್ತು !!

ಬಸವರಾಜ ಪಾಲವಾದಿ
ಉಪನ್ಯಾಸಕರು
ಶಾಂತಸಿದ್ಧೇಶ್ವರ ಕಾಲೇಜು
ಕೆನಾಲ ರೋಡ
ಜಮಖಂಡಿ.

ಅಥವಾ ನಶಿಸುವಿಕೆ ಇಲ್ಲದ್ದು ಎಂದು ಸಹ ಅರ್ಥೈಸಿಕೊಳ್ಳಬಹುದು. ಕವಿತ್ವದ ಅಮೋಘ ಅಥವಾ ಅನ್ಯಾದೃಶ ಶಕ್ತಿಯನ್ನು ಸೂಚಿಸುವ ಮಂತ್ರ ಇದೆಂದಾದರೆ ಕಾವ್ಯವು ಜೀವನದಲ್ಲಿ ನಿಜವಾದ ಬೆಳಕು ಮೂಡಿಸುವ ಸಾಮಗ್ರಿ ಎಂಬ ಅರ್ಥವು ಹೊಮ್ಮುತ್ತದೆ. 'ವಾಕ್' ಎಂಬುದು ಅಕ್ಷರಗಳ ಸಮುದ್ರವಾಗಿ ರಂಜಿಸುವುದು ಕಾವ್ಯದಲ್ಲಿ. ಕಾವ್ಯಕ್ಕೆ ಹೊರತಾಗಿಯೂ 'ಮಾತು' ಸಮುದ್ರದೋಪಾದಿಯಲ್ಲಿ ವ್ಯಾಪಕವಾಗಿದೆ, ಸಂವಹನದ ನೂರಾರು ಪ್ರಕ್ರಿಯೆಗಳಿಗೆ ಮೂಲವಾಗಿದೆ; ಮಾತು ಸಹ ಜೀವ ತುಂಬುವ ಅನನ್ಯ ಶಕ್ತಿಯನ್ನು ಹೊಂದಿದೆ.

ಮುಂದಿನ ಮಂತ್ರವು ನಿಶ್ಚಿತವಾಗಿ ಯಜ್ಞ ಸಂದರ್ಭವನ್ನು ಹಿನ್ನೆಲೆಯಾಗಿ ಹೊಂದಿದೆ ಎನಿಸುತ್ತದೆ. ಆದರೆ ಗ್ರಿಫಿತ್ ಇಲ್ಲಿಯೂ ಮಳೆ ಸುರಿಸುವ ಮೋಡಗಳ ರೂಪಕವನ್ನು ವಿಸ್ತರಿಸಿ ಅರ್ಥೈಸಿದ್ದಾನೆ. ಯಾವುದನ್ನು ಆಧರಿಸಿ ವ್ಯಾಖ್ಯಾನಿಸ ಹೊರಟರೂ ಮಂತ್ರವು ಸಂದಿಗ್ಧವಾಗಿಯೇ ಉಳಿಯುತ್ತದೆ (೪೩ : ಶಕಮಯಂ ಧೂಮಂ ಆರಾತ್ ಅಪಶ್ಯಂ ವಿಷುವತಾ ಪರಃ ಏನಾ ಅವರೇಣ। ಉಕ್ಷಾಣಂ ಪೃಶ್ನಿಂ ಅಪಚಂತ ವೀರಾಃ ತಾನಿ ಧರ್ಮಾಣಿ ಪ್ರಥಮಾನಿ ಆಸನ್॥). "ವೀರಾಃ" ಎಂದರೆ ದೇವತೆಗಳೆಂದು ಗ್ರಹಿಸಬೇಕೆಂದು ತೋರುತ್ತದೆ. ಯಜ್ಞಗೃಹದ ಬಳಿಗೆ ಸಾರುವಾಗ ದೂರದಿಂದಲೇ ಹೊಗೆಯು ಗೋಚರಿಸುತ್ತದೆ. ಅದು ಬೆರಣಿಯನ್ನು ಸುಡುವುದರಿಂದ ಹೊಮ್ಮುವ ಹೊಗೆ. ಅದನ್ನು ಕಂಡು ಅಗ್ನಿಯ ಅಸ್ತಿತ್ವವನ್ನು ತರ್ಕಿಸಬಹುದು. ಯಜ್ಞಗೃಹದಲ್ಲಿ 'ವೀರರು' (ಅಂದರೆ ದೇವತೆಗಳು) ಬಿಳಿ ಬಣ್ಣದ ಎತ್ತನ್ನು (ಉಕ್ಷನ್) ಸಿಂಗರಿಸಿದ್ದಾರೆ. ಅದು ಸೋಮ. ಆರಂಭದ ಹಂತದಲ್ಲಿದ್ದ ಆಚರಣೆಗಳು ಇಂಥವು. ಅಂದರೆ, ಯಜ್ಞದ ಕ್ರಿಯೆಗಳು ಹಂತಹಂತವಾಗಿ ಬೆಳೆದು ಸಂಕೀರ್ಣಗೊಂಡಿವೆ. ಇಲ್ಲಿ 'ಧರ್ಮ' ಎಂಬ ಪದವು 'ಆಚರಣೆ' ಅಥವಾ ಪದ್ಧತಿ ಎಂಬರ್ಥದಲ್ಲಿ ಪ್ರಯೋಗವಾಗಿದೆ. ಸೋಮರಸದ ಪಾನ ಮಾಡಲು ಅದನ್ನು ತಯಾರಿಸುವುದು ಯಜ್ಞದ ಆಚರಣೆಯಲ್ಲಿ ಪ್ರಮುಖವಾದೊಂದು ಅಂಗ. 'ವಾಕ್' ಎಂಬುದರ ಮುಂದುವರಿಕೆ ಇಲ್ಲದೆ ಹಿಂದಿನ ಮಂತ್ರದಲ್ಲೇ ಅದು ಕೊನೆಗೊಂಡಿದೆ, ಆದರೆ ಮುಂದೆ ಮತ್ತೊಮ್ಮೆ ಅದರ ಪ್ರಸ್ತಾಪವು ಬರಲಿದೆ.

ಸೋಮವನ್ನು 'ಎತ್ತು' ಎಂದು ಸಂಕೇತಿಸಿದ ನಂತರ ಕೇಶರಾಶಿ ಇರುವ ಮೂರು ಅಶ್ವಗಳನ್ನು ಮುಂದಿನ ಮಂತ್ರದಲ್ಲಿ ಉಲ್ಲೇಖಿಸಲಾಗಿದೆ. (೪೪ : ತ್ರಯಃ ಕೇಶಿನಃ ಋತುಥಾ ವಿ ಚಕ್ಷತೇ ಸಂವತ್ಸರೇ ವಪತೇ ಏಕಃ ಏಷಾಂ। ವಿಶ್ವಮೇಕಃ ಅಭಿ ಚಷ್ಟೇ ಶಚೀಭಿಃ ಧ್ರಾಜಿಃ ಏಕಸ್ಯ ದದೃಶೇ ನ ರೂಪಂ॥). ಅವು ಬೇರೆ ಬೇರೆ ಕಾಲಗಳಲ್ಲಿ ಭೂಮಿಗೆ ಬೇರೆ ಬೇರೆ ಲಕ್ಷಣಗಳನ್ನು ನೀಡುತ್ತವೆ; ಅಂದರೆ, ಅವುಗಳ ಕಾರ್ಯವಿಧಾನದ ಲಕ್ಷಣಗಳು ಒಂದೇ ತೆರನಾದುವಲ್ಲ. ಅಗ್ನಿಯು ವರ್ಷಾಂತ್ಯದಲ್ಲಿ ವನರಾಶಿಯನ್ನು, ಅಂದರೆ ಓಷಧಿ–ವನಸ್ಪತಿಗಳನ್ನು, ಸುಟ್ಟು ಬಿಡುತ್ತಾನೆ. ಅವು ಒಣಗಿಹೋಗುತ್ತವೆ (ಮತ್ತು ಹೊಸ ವರ್ಷದಲ್ಲಿ ಚೈತನ್ಯಪೂರ್ಣವಾಗಿ ಪುನರವತರಿಸುತ್ತವೆ). ಇನ್ನೊಬ್ಬನು ಸೂರ್ಯ. ಅವನು ಪ್ರಕಾಶಮಾನವಾಗಿ ಇರುತ್ತಾ ಭೂಮಿಯ ಮೇಲಿನ ಆಗುಹೋಗುಗಳನ್ನು ವೀಕ್ಷಿಸುತ್ತಿರುತ್ತಾನೆ. ಅವನಿಂದಲೇ ವೃದ್ಧಿ, ಮಳೆ–ಬೆಳೆ. ಇನ್ನೊಂದು ಶಕ್ತಿಯು ವಾಯು. ಅದರ ಇರುವಿಕೆಯು ಸ್ವತಸ್ಸಿದ್ಧ, ಆದರೆ ಅದರ ರೂಪವು ಅಗೋಚರ. ಸೂಕ್ತದ ಮೊದಲ ಮಂತ್ರದಲ್ಲಿ ಹೋತೃವಿನ ಸೋದರರ ಪ್ರಸ್ತಾಪ ಇದ್ದುದನ್ನು ನೆನೆಯಬಹುದು. ಆ ಮುದುಕ ಹೋತೃವಿಗೆ ಇಬ್ಬರು ಸೋದರರು : ಮಿಂಚು ಮತ್ತು ಅಗ್ನಿ. ಭೂಮಿಯ ಧಾರಕ ಶಕ್ತಿಗಳೆಂದು ಅಗ್ನಿ, ಸೂರ್ಯ ಮತ್ತು ವಾಯು ಈ ಮಂತ್ರದಲ್ಲಿ ಗಣನೆಗೆ ಬಂದಿವೆ. ಸೂರ್ಯನಿಂದ ಮಳೆ–ಬೆಳೆ ಇತ್ಯಾದಿಗಳೆಲ್ಲಾ ಫಲಿಸುವುದರಿಂದ ಮೋಡ–ಮಳೆ–ನೀರು ಪ್ರತ್ಯೇಕವಾಗಿ ಹೇಳಲ್ಪಟ್ಟಿಲ್ಲವೆಂದು ತೋರುತ್ತದೆ.

ಮುಂದಿನ ಮಂತ್ರವು (೪೫ : ಚತ್ವಾರಿ ವಾಕ್ ಪರಿಮಿತಾ ಪದಾನಿ ತಾನಿ ವಿದುಃ ಬ್ರಾಹ್ಮಣಾಃ ಯೇ ಮನೀಷಿಣಃ। ಗುಹಾ ತ್ರೀಣಿ ನಿಹಿತಾ ನ ಇಂಗಯಂತಿ ತುರೀಯಂ ವಾಚಃ ಮನುಷ್ಯಾಃ ವದಂತಿ॥) ಮತ್ತೆ 'ವಾಕ್'ಗೆ (ಮಾತಿಗೆ) ಹಿಂದಿರುಗುತ್ತದೆ. ವಾಗ್ದೇವತೆಗೆ ಹವಿಸ್ಸು ನೀಡುವಾಗ ಈ ಮಂತ್ರವನ್ನು ಹೇಳುವುದು ವಾಡಿಕೆ. ನಾವು ಬಳಸುವ ಭಾಷೆಯ ಪದಗಳನ್ನು ನಾಲ್ಕು ವಿಧದವೆಂದು ಇಲ್ಲಿ ವಿಭಜಿಸಲಾಗಿದೆ. ಅವನ್ನೆಲ್ಲಾ ತಿಳಿದ ಮೇಧಾವಿಗಳಿದ್ದಾರೆ. ಅವರನ್ನು ಇಲ್ಲಿ "ಬ್ರಾಹ್ಮಣಾಃ" ಎಂದು ಕರೆಯಲಾಗಿದೆ. ಬಹುಶಃ ಅದು ವರ್ಣ ವಿಭಜನೆಯಲ್ಲಿ ಬ್ರಾಹ್ಮಣರೆಂದು ಕರೆಸಿಕೊಂಡಿರುವವರನ್ನು ಸೂಚಿಸುವುದಿಲ್ಲ. ಪ್ರಸ್ತುತ ಸೂಕ್ತವು ರಚಿತವಾದ ಕಾಲದಲ್ಲಿ ವರ್ಣವಿಭಜನೆಯ ಪ್ರಕ್ರಿಯೆ ಆರಂಭಗೊಂಡಿತ್ತು, ಆದರೆ 'ಬ್ರಾಹ್ಮಣರೆಲ್ಲಾ ತಿಳಿದವರು' (ಮನೀಷಿಗಳು) ಎಂಬ ಭ್ರಾಂತಿ ಮತ್ತು ಮಿಥ್ಯೆ ಇನ್ನೂ ದಟ್ಟವಾಗಿ ಆವರಿಸಿರಲಿಲ್ಲ. 'ವಾಕ್'ನ ನಾಲ್ಕು ವಿಧಗಳಲ್ಲಿ ಒಂದು ಮಾತ್ರ ಜನರಿಗೆಲ್ಲಾ ಲಭ್ಯ, ಇನ್ನು ಮಿಕ್ಕ ಮೂರು ಜನರಿಗೆ ಪ್ರಕಾಶವಾಗದಂತೆ ಎಲ್ಲೋ ಗವಿಯಲ್ಲಿ ಅಡಗಿವೆ.

ಅಜ್ಞರಾಗಲಿ, ತಜ್ಞರಾಗಲಿ, ಅವರಿಗೆ ಲಭ್ಯವಾಗಿರುವುದು ಒಂದೇ ವಿಧದ 'ವಾಕ್.' ಅರಿವಿಗೆ ನಿಲುಕದ ಮೂರು 'ವಾಕ್'ಗಳು ಮೂರು ವೇದಗಳಿರಬಹುದೆಂಬ ಪ್ರಶ್ನೆಯನ್ನು ಭಾಷ್ಯಕಾರರು ಎತ್ತಿದ್ದಾರೆ. ಆದರೆ ಅವು 'ಪ್ರಕಾಶವಾಗದಂತೆ ಎಲ್ಲೋ ಗವಿಯಲ್ಲಿ ಅಡಗಿವೆ' ಎಂದು ಋಗ್ವೇದದ ಕವಿಯು ಭಾವಿಸಿಕೊಳ್ಳಲಾರ, ಏಕೆಂದರೆ ಅವನು ಅದರ ಕರ್ತೃ. ಪ್ರತಿಭಾನ್ವಿತ ಕವಿಗೆ 'ವಾಕ್' ದಕ್ಕಿರುವುದರಿಂದಲೇ ಅವನು ಕವಿತ್ವಕ್ಕೆ ಕೈಹಾಕಿದ್ದಾನೆ. ಮಂತ್ರದಲ್ಲಿ "ನ ಇಂಗಯಂತಿ" ಎಂದಿದೆ. ಅಂದರೆ ಅವು ಚಲಿಸುವುದಿಲ್ಲ ಎಂದರ್ಥ. ಅವು ಜನರ ನಡುವೆ ರೂಢಿಯಲ್ಲಿಲ್ಲ ವೆಂಬುದು ಅದರ ತಾತ್ಪರ್ಯ. ಈ ಮಂತ್ರದ ವ್ಯಾಖ್ಯಾನಕಾರರೆಲ್ಲಾ ಈ ನಾಲ್ಕು ವಿಧಗಳು ಯಾವುವೆಂದು ಗೊಂದಲದಲ್ಲಿ ಸಿಲುಕಿದ್ದಾರೆ. ನಾಲ್ಕು ವೇದಗಳು ನಿಗೂಢಾರ್ಥದವೆಂದು ಬೇಕಾದರೆ ಅರ್ಥೈಸಿ ಕೊಳ್ಳಬಹುದು, ಆದರೆ ಸ್ವತಃ ವೇದಗಳ ಕರ್ತೃಗಳು ತಮ್ಮ ರಚನೆಗಳನ್ನು ನಿಗೂಢವೆಂದೇಕೆ ಬಗೆಯುತ್ತಾರೆ! ಭಾಷೆಯ ವಿಕಾಸದ ನಾಲ್ಕು ಹಂತಗಳನ್ನಿಲ್ಲಿ ಗಮನಿಸ ಲಾಗಿದೆಯೆಂದು ಹೇಳಬಹುದು, ಆದರೆ ಆ ಹಂತಗಳು ಯಾವುವೆಂಬ ಪ್ರಶ್ನೆ ಹಾಗೇ ಉಳಿಯುತ್ತದೆ. ಪುರುಷಸೂಕ್ತದಲ್ಲಿ (೧೦.೯೦.೧೩ : ತ್ರಿಪಾತ್ ಊರ್ಧ್ವ ಉದೈತ್) ಮೂರು ಪಾದಗಳು ದ್ಯುಲೋಕದಲ್ಲಿ ಉಳಿದು ಹೋಗಿವೆಯೆಂಬ ಮಾತಿದೆ. ಅಲ್ಲಿಯಂತೆ ಇಲ್ಲಿಯೂ ಮೂರು ಅಗೋಚರವಾಗಿ ಉಳಿದಿವೆ. ಈ 'ನಾಲ್ಕುಗಳನ್ನು' ಗುರುತಿಸಲು ಸಾಯಣನು ಬಹುವಾಗಿ ಯತ್ನಿಸಿದ್ದಾನೆ. ಭೂಃ ಭುವಃ ಸ್ವಃ (ಸುವಃ) ಮತ್ತು ಓಂ ಸೇರಿ ನಾಲ್ಕು ಆಗುತ್ತವೆ. ಅವು ಒಟ್ಟಾಗಿ 'ವಾಕ್'ನ ಸರ್ವಸ್ವವನ್ನೂ ತಮ್ಮಲ್ಲಿ ಅಡಗಿಸಿಕೊಂಡಿವೆ. ಇದು ಒಂದು ವ್ಯಾಖ್ಯಾನ. ಇನ್ನೊಂದು 'ವಾಕ್'ನಲ್ಲಿ ನಾಮಪದ, ಆಖ್ಯಾತಪದ, ಉಪಸರ್ಗ ಮತ್ತು ನಿಪಾತಗಳಿವೆ ಎಂದು ಹೇಳುವುದು. ಆದರೆ ಅವುಗಳು ನಾಲ್ಕೂ ತಿಳಿದಿರುವಂಥವೇ ಆಗಿವೆ; ಗವಿಯಲ್ಲಿ ಅಡಗಿ ಕುಳಿತಿರುವಂಥದೇನೂ ಇಲ್ಲ. ಮಂತ್ರ, ಕಲ್ಪ, ಬ್ರಾಹ್ಮಣ, ಲೌಕಿಕೀ ಎಂಬುವು ನಾಲ್ಕೆಂಬ ಪ್ರಭೇದವನ್ನೂ ಸಾಯಣ ಹೇಳುತ್ತಾನೆ. ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂಬ ವಿಭಜನೆಯೂ ಉಂಟು. ಆದರೆ ಇವೆಲ್ಲಾ ಋಗ್ವೇದದ ಕವಿಯ ವ್ಯಾಪ್ತಿಗೆ ಸೇರಿಲ್ಲ; ಅವು ನಂತರದ ಕಲ್ಪನೆಗಳು. ನಿರುಕ್ತಕಾರ ಯಾಸ್ಕನು ರಥಂತರ, ವಾಮದೇವ್ಯ, ಬೃಹತಿ ಎಂಬ ಮೂರನ್ನು ಹೇಳಿ "ನಾಲ್ಕನೆಯದು ಪಶುಗಳಲ್ಲಿದೆ" ಎನ್ನುತ್ತಾನೆ. ಮೊದಲ ಮೂರು ಅಗ್ನಿ, ವಾಯು ಮತ್ತು ಆದಿತ್ಯರಲ್ಲಿವೆ. ಪ್ರಾಜ್ಞರಿಗೆ ಈ ನಾಲ್ಕೂ ತಿಳಿದಿರುತ್ತವೆ ಎಂಬುದು ಅವನ ಅಭಿಮತ. ಮೂಲತಃ ಭಾಷೆಯ ಅಪರಿಮಿತ ಅಭಿಧಾನ ಶಕ್ತಿಯ ವೈಭವವನ್ನು ವಿಸ್ಮಿತನಾದ ಕವಿಯು ಇಲ್ಲಿ ಉಲ್ಲೇಖಿಸಿದ್ದಾನೆ.

ಮುಂದಿನ ಮಂತ್ರವು ಸುಪರಿಚಿತವಾದದ್ದು. ವಿವೇಕಾನಂದರು ಅದನ್ನು ನೂರಾರು ಬಾರಿ ಉದ್ಧರಿಸಿ ಪ್ರಖ್ಯಾತವಾಗಿಸಿದ್ದಾರೆ. ಉಪನಿಷತ್ತುಗಳಲ್ಲಿ ಆಗಾಗ್ಗೆ ಬರುವ 'ಸತ್' ಎಂಬುದರ ಪ್ರತಿಪಾದನೆಯು ಈ ಮಂತ್ರ ದಲ್ಲಿದೆಯೆಂಬ ಆಶಯದಿಂದ ಅವರು ಅದನ್ನು ಪದೇ ಪದೇ ಉದಾಹರಿಸುತ್ತಾರೆ. ವೇದಾಂತದ ದೃಷ್ಟಿಯನ್ನು ಋಗ್ವೇದದಲ್ಲಿ ಅರಸುವುದು ಅನೈತಿಹಾಸಿಕವಾದ್ದು, ಆದರೆ ಮುಂದಿನ ಕಾಲಘಟ್ಟಗಳಲ್ಲಿ ಮೂಡಿಬಂದ ಅನೇಕ ಚಿಂತನೆಗಳ ಆದಿಮ ರೂಪವನ್ನು ಋಗ್ವೇದದಲ್ಲಿ ಕಾಣಬಹುದು. ಮಾತು (ವಾಕ್) ಪದಾರ್ಥದ ವಿವಿಧ ರೂಪಗಳನ್ನು ಬೇರೆಬೇರೆ ಪದಗಳಿಂದ ವ್ಯವಹರಿಸುತ್ತದೆ, ಆದರೆ ಮೂಲತಃ ಪದಾರ್ಥವು ಒಂದೇ ಆಗಿರುತ್ತದೆ. ಮಣ್ಣಿನಿಂದ ಏನೇನೆಲ್ಲಾ ಮಾಡಬಹುದು! ಮಡಿಕೆ, ಕುಡಿಕೆ, ಹರಿವಾಣ, ರಥ, ಮನೆ, ಹೀಗೆ ನೂರಾರು ಪ್ರಭೇದಗಳು ಸಾಧ್ಯ. ಆದರೆ ಅವುಗಳೆಲ್ಲವುಗಳ ಮೂಲವಸ್ತು ಮಾತ್ರ ಒಂದೇ, ಅದು ಮಣ್ಣು (ಅಥವಾ ಜೇಡಿಮಣ್ಣು). ಛಾಂದೋಗ್ಯ ಉಪನಿಷತ್ತು ಇದನ್ನು ಪ್ರಸ್ತಾಪಿಸಿ 'ಮಣ್ಣಿನ ಒಂದು ಮುದ್ದೆಯನ್ನು ತಿಳಿದರೆ ಮಣ್ಣಿನಿಂದ ಮಾಡಲಾದ ಎಲ್ಲವುಗಳ ತಿಳಿವಳಿಕೆ ಸಾಧ್ಯ' ಎನ್ನುತ್ತದೆ (೬.೪ : ...ಏಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕಾ ಇತ್ಯೇವ ಸತ್ಯಂ ॥). ಮಾತು ವಸ್ತುವಿಗೆ ರೂಪ ಕೊಡುತ್ತದೆ; ಮಣ್ಣು ಎಂಬ ಒಂದು ದ್ರವ್ಯವು ಮಡಿಕೆ ಮುಂತಾದ ರೂಪಗಳನ್ನು ಧರಿಸುತ್ತದೆ ಎಂದರೆ ಅದೇ ಅರ್ಥ. 'ಸತ್' ಎಂಬ ಒಂದು ವಸ್ತುವನ್ನು ಹಲವು ನಾಮಧೇಯಗಳನ್ನು ಕೊಟ್ಟು ತಿಳಿದವರು (ವಿಪ್ರಾಃ) ವ್ಯವಹರಿಸುತ್ತಾರೆ ಎಂಬ ಋಗ್ವೇದದ ಮಾತು ಇದನ್ನೇ ಧ್ವನಿಸುತ್ತದೆ. (೪೬ : ಇಂದ್ರಂ ಮಿತ್ರಂ ವರುಣಂ ಅಗ್ನಿಂ ಆಹುಃ ಅಥೋ ದಿವ್ಯಃ ಸ ಸುಪರ್ಣಃ ಗರುತ್ಮಾನ್ । ಏಕಂ ಸತ್ ವಿಪ್ರಾಃ ಬಹುಧಾ ವದಂತಿ ಅಗ್ನಿಂ ಯಮಂ ಮಾತರಿಶ್ವಾನಂ ಆಹುಃ ॥). ಬಹುದೇವತೆಗಳನ್ನು ಮಾನ್ಯಮಾಡುವ ಋಗ್ವೇದವು ಏಕದೇವೋಪಾಸನೆಯತ್ತ ಹರಿದಿದೆಯೆಂದು ಈ ಮಂತ್ರದ ಆಧಾರದಿಂದ ಕೆಲವರು ತರ್ಕಿಸಿರುವುದು ಉಂಟು. 'ಎಲ್ಲ ದೇವತೆಗಳೂ ಒಂದೇ' ಎಂಬುದು ಮಂತ್ರದ ಆಕಾಂಕ್ಷೆಯಲ್ಲ. ಬದಲಾಗಿ, ಮಾತು (ವಾಕ್) ದೇವತೆಗಳ ಹಲವು ರೂಪಗಳನ್ನು ಗುರುತಿಸುತ್ತದೆಂಬುದು ಇಲ್ಲಿಯ ಅರ್ಥ. ಅಚ್ಚರಿಯೆಂದರೆ ಈ ಮಂತ್ರದಲ್ಲಿ ಅಗ್ನಿಯನ್ನು ಎರಡು ಬಾರಿ ಹೆಸರಿಸಲಾಗಿರುವುದು. ಅಲ್ಲದೆ 'ಸತ್' ಎಂಬುದು ವೇದಾಂತದ ಸದ್ವಸ್ತುವಿಗೆ ಸಮಾನವಾದ ಕಲ್ಪನೆಯಲ್ಲ. "ಸೂರ್ಯನನ್ನು ಬಹು ವಿಧವಾಗಿ ಇಂದ್ರ, ಮಿತ್ರ, ವರುಣ, ಅಗ್ನಿ, ಎಂದೆಲ್ಲಾ ಕರೆಯುತ್ತಾರೆ; ಆದರೆ ಅವನು ದಿವ್ಯ ಪಕ್ಷಿಯಾದ ಗರುತ್ಮಾನ್. ಅವನನ್ನೇ ಅಗ್ನಿ, ಯಮ, ಮಾತರಿಶ್ವನ್ (ವಾಯು) ಎನ್ನುತ್ತಾರೆ" ಎಂಬುದು ಮಂತ್ರದ ಸ್ಥೂಲಾರ್ಥ. ಯಜ್ಞ ಗೃಹದಲ್ಲಿ ಸ್ಥಾಪಿಸಲಾದ ಅಗ್ನಿಯು ಸೂರ್ಯನ ಒಂದು ರೂಪ. ಆ ಸೂರ್ಯನ ಕಿರಣಗಳು ಭೂಮಿಯ ಮೇಲಿನ ಕತ್ತಲೆಯ ಪ್ರದೇಶಗಳನ್ನೆಲ್ಲಾ ಪ್ರವೇಶಿಸುತ್ತವೆ; ಅವು ದ್ಯುಲೋಕಕ್ಕೆ ಹೋಗಿ ಮತ್ತೆ (ಮಳೆಯ) ನೀರಿನ ರೂಪದಲ್ಲಿ ಭೂಮಿಗೆ ಮರಳುತ್ತವೆ. ಈ ರೀತಿಯ ಚಲನೆಯನ್ನು 'ಋತ'ದ ಪರಿಕಲ್ಪನೆಯು ಅಂತರ್ಗತಗೊಳಿಸಿಕೊಂಡಿದೆ (೪೭ : ಕೃಷ್ಣಂ ನಿಯಾನಂ ಹರಯಃ ಸುಪರ್ಣಾಃ ಅಪಃ ವಸಾನಾಃ ದಿವಂ ಉತ್ ಪತಂತಿ । ತೇ ಆ ಅವವೃತ್ರನ್ ಸದನಾತ್ ಋತಸ್ಯ ಆತ್ ಇತ್ ಘೃತೇನ ಪೃಥಿವೀ ವಿ ಉದ್ಯತೇ ॥).

ಋತವೆಂಬ ಜಗನ್ನಿಯಾಮಕ ಪರಿಕಲ್ಪನೆಯನ್ನು ವಿಶ್ವದ ಮೂರ್ತವಾದ ಅಂಶಗಳ ಆಧಾರದಿಂದ ಮುಂದಿನ ಮಂತ್ರದಲ್ಲಿ ವಿಸ್ತರಿಸಲಾಗಿದೆ. ಈ ಸೂಕ್ತದ ೧೧ನೆಯ ಮಂತ್ರದಲ್ಲಿ ಹೇಳಿದ್ದುದರ ಪುನರಾರ್ತನೆ ಎಂಬಂತಿದೆ ಈ ಮಂತ್ರ (೪೮ : ದ್ವಾದಶ ಪ್ರಧಯಃ ಚಕ್ರಂ ಏಕಂ ತ್ರೀಣಿ ನಭ್ಯಾನಿ ಕಃ ಉ ತತ್ ಚಿಕೇತ । ತಸ್ಮಿನ್ ಸಾಕಂ ತ್ರಿಶತಾಃ ನ ಶಂಕವಃ ಅರ್ಪಿತಾಃ ಷಷ್ಟಿಃ ನ ಚಲಾಚಲಾಸಃ ॥). ಸಂವತ್ಸರದ ಚಕ್ರಕ್ಕೆ ಹನ್ನೆರಡು ಪರಿಧಿಗಳು (ತಿಂಗಳುಗಳು). ಅವು ಮೂರು ದೂರಿಗಳಿಗೆ (ನಭ್ಯಾನಿ) ಲಗತ್ತಿಸಿಕೊಂಡಿವೆ (ಅಂದರೆ ಗ್ರೀಷ್ಮ, ವರ್ಷ ಮತ್ತು ಹೇಮಂತ ಋತುಗಳು). ಅವಕ್ಕೆ ೩೬೦ ಅರಗಳು ಹೊಂದಿಕೊಂಡಿವೆ (ಅಂದರೆ ದಿನಗಳು). ಈ ಚಲನೆಯು ನಿರಂತರ. ಅವನ್ನು ಸಡಿಲಗೊಳಿಸುವುದು ಅಸದಳ.

ಮುಂದಿನ ಮಂತ್ರದಲ್ಲಿ ಅನಿರೀಕ್ಷಿತವಾಗಿ ಸರಸ್ವತಿಯ ಅತಿಶಯ ಪಾಲನೆ ಮತ್ತು ಪೋಷಣೆಯನ್ನು ಸ್ಮರಿಸಿ ಶ್ಲಾಘಿಸಲಾಗಿದೆ. ಭೂಮಿಯು ಸಂಪದ್ಭರಿತ. 'ರತ್ನಗರ್ಭಾ ವಸುಂಧರಾ' ಎನ್ನುವುದು ಆ ಕಾರಣಕ್ಕೆ. ಕಾಲವು ಏನನ್ನು ತಾನೆ ನೀಡಲಾರದು ಎಂಬ ಭಾವ ಇಲ್ಲಿದೆ. ಸರಸ್ವತಿಯ ಸ್ತನಗಳು ಸುಖಕರವಾದುವು (ಮಯೋಭೂಃ), ಎಲ್ಲವನ್ನೂ ಪೋಷಿಸುವಂಥವು. ಅವಳು ಸಂಪತ್ತು, ಶ್ರೇಯಸ್ಸು, ಎಲ್ಲವನ್ನೂ ನೀಡುತ್ತಾಳೆ (೪೯ : ಯಸ್ತೇ ಸ್ತನಃ ಶಶಯಃ ಯಃ ಮಯೋಭೂಃ ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ । ಯಃ ರತ್ನಧಾಃ ವಸುವಿತ್ ಯಃ ಸುದತ್ರಃ ಸರಸ್ವತಿ ತಂ ಇಹ ಧಾತವೇ ಕಃ ॥). ಎಲ್ಲಕ್ಕೂ ಮಾತೃಸ್ಥಾನೀಯಳು ಎಂಬ ನೆಲೆಯಲ್ಲಿ ಸರಸ್ವತಿಯನ್ನು ನೆನೆಯಲಾಗಿದೆ. ತಾಯಿ-ಮಗು ಎಂಬ ಸಂಬಂಧವು ಈ ಸೂಕ್ತದ ಹಲವು ಮಂತ್ರಗಳಲ್ಲಿ ವ್ಯಕ್ತವಾಗಿರುವುದನ್ನು ನಾವೀಗಾಗಲೆ ನೋಡಿದ್ದೇವೆ. ಜ್ಞಾನ ಮತ್ತು ವಾಕ್ ಪ್ರಸ್ತಾಪಕ್ಕೆ ಬಂದಿರುವ ಸೂಕ್ತದಲ್ಲಿ ಸರಸ್ವತೀ ದೇವತೆಯ ಉಲ್ಲೇಖವು ಅಪ್ರಸ್ತುತವಂತೂ ಅಲ್ಲ. ಅದರೊಟ್ಟಿಗೆ ಯಜ್ಞದ ಪ್ರಸ್ತಾಪವೂ ಬಂದಿದ್ದಿತು. ಅದನ್ನು ಮುಂದುವರಿಸಿ ಅದರ ಅಗ್ರಸ್ಥಾನವನ್ನು ಮುಂದಿನ ಮಂತ್ರದಲ್ಲಿ ಪ್ರಶಂಸಿಸಲಾಗಿದೆ (೫೦ : ಯಜ್ಞೇನ ಯಜ್ಞಂ ಅಯಜಂತ ದೇವಾಃ ತಾನಿ ಧರ್ಮಾಣಿ ಪ್ರಥಮಾನಿ ಆಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥). ನೈಸರ್ಗಿಕ ನಿಯಮವು ಸ್ಥಿರ ಮತ್ತು ಅನುಲ್ಲಂಘನೀಯ ಎಂಬರ್ಥದಲ್ಲಿ 'ಋತ'ದ ಪರಿಕಲ್ಪನೆಯು ಗಾಢವಾಗಿ ನೆಲೆಗೊಂಡ ತರುವಾಯದಲ್ಲಿ ಅದರ ವ್ಯಾಪ್ತಿಯನ್ನು ಹಿಗ್ಗಿಸಿ ಯಜ್ಞದ ನಿರ್ದಿಷ್ಟ ವಿಧಿಗಳು ಸಹ ಅಷ್ಟೇ ಸ್ಥಿರ ಮತ್ತು ಅನುಲ್ಲಂಘನೀಯ ಎಂಬ ಸೂತ್ರವನ್ನು ಬೆಳೆಸಲಾಯಿತು. ನಿಸರ್ಗದ ಪ್ರತಿರೂಪವೇ ಯಜ್ಞ ಎನ್ನುವಷ್ಟರಮಟ್ಟಿಗೆ ಅದಕ್ಕೆ ಮಾನ್ಯತೆ ನೀಡ ಲಾಯಿತು. ಯಜ್ಞದಲ್ಲಿ ಅಗ್ನಿಯನ್ನು ಸ್ಥಾಪಿಸುವ ವೇಳೆ ಈ ಮಂತ್ರವನ್ನು ಪಠಿಸಬೇಕೆಂಬ ವಿಧಿಯನ್ನು ಆಶ್ವಲಾಯನ ಶ್ರೌತಸೂತ್ರದಲ್ಲಿ ಕಾಣುತ್ತೇವೆ. ಋತವು ಹೇಗೆ ಆದಿನಿಯಮವೋ ಹಾಗೆ ಯಜ್ಞವೂ ಆದಿನಿಯಮ ಎಂದು ಹೇಳಿ ಯಜ್ಞದ ಸ್ಥಾನವನ್ನು ಎತ್ತರಕ್ಕೆ ಏರಿಸ ಲಾಯಿತು. "ದೇವತೆಗಳು ಯಜ್ಞದಿಂದ ಯಜ್ಞ ನೆರವೇರಿಸಿದರು," ಆದ್ದರಿಂದ ಯಜ್ಞದ ನಿಯಮಗಳಿಗೆ ವಿಶೇಷ ಮಾನ್ಯತೆ ದಕ್ಕಿತು. ಯಜ್ಞ ಮಾಡಿದ್ದರ ಫಲವಾಗಿ ಯಾಜ್ಞಿಕರು ದ್ಯುಲೋಕದಲ್ಲಿ ಸ್ಥಾನ ಪಡೆದರು, ಅಲ್ಲಿ

ಮೊದಲಿಂದಲೂ ಇದ್ದ ಪೂರ್ವಕಾಲದ ದೇವತೆಗಳಾದ ಸಾಧ್ಯರೊಂದಿಗೆ ಸೇರಿಕೊಂಡರು. ಋಗ್ವೇದದಲ್ಲಿ ಋಭುಗಳು, ಮರುತ್ತುಗಳು, ಇತ್ಯಾದಿಯಾಗಿ "ಮರ್ತ್ಯರಾಗಿದ್ದವರು ಅಮರ್ತ್ಯರಾಗಿ ಪರಿಣಾಮ ಹೊಂದಿದರು" ಎಂಬ ಮಾತು ಅನೇಕ ವೇಳೆ ಬಂದಿದೆ. ಬಹುಶಃ ಸಾಧ್ಯರು ಸಹ ಇದೇ ಬಣಕ್ಕೆ ಸೇರಿದವರಿರಬಹುದು. ಇಲ್ಲಿ ಒಂದಂಶವನ್ನು ಮನನ ಮಾಡಿಕೊಳ್ಳಬೇಕು : ಪ್ರಕೃತಿಯ ನಿಯಮಗಳನ್ನು ಯಾರೋ ನಿಗದಿಗೊಳಿಸಿ ಅವನ್ನು ಪ್ರಕೃತಿಯ ಮೇಲೆ ಹೇರಲಿಲ್ಲ. ಭೂಮಿಯ ಮೇಲೆ ಮಾನವ ಕಾಣಿಸಿಕೊಳ್ಳುವ ಮೊದಲೂ ಸಹ ಪ್ರಕೃತಿಯ ನಿಯಮಗಳು ಹಾಗೆಯೇ ಇದ್ದವು, ಈಗಲೂ ಇವೆ. ಆ ನಿಯಮಗಳಿಂದಾಗಿ ಯಾವೊಂದು ಮಾನವ ವರ್ಗವೂ ವಿಶೇಷ ಉನ್ನತ ಸ್ಥಾನ ಪಡೆದುಕೊಳ್ಳಲಿಲ್ಲ, ತನ್ನ ಬಣವು ಶ್ರೇಷ್ಠವೆಂದು ಘೋಷಿಸಿಕೊಳ್ಳಲಿಲ್ಲ. ಯಜ್ಞದ ನಿಯಮಗಳು ಹಾಗಲ್ಲ : ಅವನ್ನು ಯಾದೃಚ್ಛಿಕವಾಗಿ ಮಾನವ ಕಲ್ಪಿಸಿಕೊಂಡಿದ್ದಾನೆ. ಅವನ್ನು ಮೀರಿ ನಡೆಯುವುದರಿಂದ ಯಾವ ಅನಾಹುತವೂ ಸಂಭವಿಸುವುದಿಲ್ಲ. ಸಮಿತ್ತೊಂದನ್ನು ಎಡಗಡೆ ಇಟ್ಟರೇನು, ಬಲಗಡೆ ಇಟ್ಟರೇನು, ಯಾವ ಮಹತ್ವದ ಬದಲಾವಣೆಯೂ ಉಂಟಾಗುವುದಿಲ್ಲ. ಯಜ್ಞ ಕ್ರಿಯೆಯಲ್ಲಿ ಏನೋ ನಿಗೂಢತೆ ಇದೆಯೆಂದು ಕೃತಕವಾಗಿ ಕಲ್ಪಿಸಿ ಅದರ ಲಾಭ ಪಡೆದ ಒಂದು ಬಣವಿದೆ. ಮೂಲತಃ ಯಜ್ಞವು ಆದಿಮ ಮಾನವನ ಮಾಂತ್ರಿಕ ಆಚರಣೆಗಳ ಅನುಕರಣೆ. ಒಂದೇ ವ್ಯತ್ಯಾಸವೆಂದರೆ, ಯಜ್ಞದ ಆಚರಣೆಗಳಲ್ಲಿ ಸಂಕೀರ್ಣತೆಯನ್ನು ಹೇರಲಾಗಿದೆ, ಆದರೆ ಆದಿಮ ಮಾಂತ್ರಿಕ ಆಚರಣೆಗಳು ಸ್ವಭಾವತಃ ಸರಳವಾಗಿದ್ದವು. "ದೇವತೆಗಳು ಯಜ್ಞದಿಂದ ಯಜ್ಞ ಮಾಡಿದರು" ಎಂದರೇನು ? 'ಪಿ. ಟಿ. ಉಷಾ ಓಡುವುದರಿಂದ ಓಡಿದಳು' ಎಂಬ ವಾಕ್ಯಕ್ಕೆ ಸಮ ಅದು. ನೇರವಾಗಿ ಹೇಳಿದ್ದರೆ ವಾಕ್ಯವು ಹೀಗಿರುತ್ತಿತ್ತು : "ಆದಿಮ ಮಾಂತ್ರಿಕ ಆಚರಣೆಗಳಿಂದ ಯಜ್ಞವನ್ನು ರೂಪಿಸಿಕೊಂಡರು." ಓಡುವುದರಿಂದ, ಓಡುವುದನ್ನು ಪಿ. ಟಿ. ಉಷಾ ಚೆನ್ನಾಗಿ ಕಲಿತಳು ಎಂದು ಹೇಳಿದಂತಾಯಿತು, ಅಷ್ಟೆ. ಪ್ರಕೃತಿಯ ನಿಯಮವು ವಸ್ತುನಿಷ್ಠವಾಗಿ ಸ್ಥಿರ, ಆದರೆ ಯಜ್ಞದ ಆಚರಣೆಗಳು ಕೃತಕವಾಗಿ ಸ್ಥಿರೀಕರಿಸಲ್ಪಟ್ಟಿವೆ. ಅವು ಅಸ್ಥಿರಗೊಂಡರೆ ಆಚರಣೆಯ ವಿಧಾನವು ಬದಲಾದಂತಾಗುತ್ತದೆ, ಆದರೆ ಅದು ಹಾನಿಕಾರಕವಲ್ಲ. ಋಗ್ವೇದದ ರಚನೆಯ ಕೊನೆಯ ಭಾಗದಲ್ಲಾಗಲೆ ಸಮಾಜದಲ್ಲಿ ವರ್ಣವಿಭಜನೆ ಮತ್ತು ಯಜ್ಞದ ಪಾರಮ್ಯ ಹೊಸದಾಗಿ ಹುಟ್ಟಿಕೊಳ್ಳಲಾರಂಭಿಸಿತ್ತು ಎಂಬುದಷ್ಟೇ ವಾಸ್ತವ. ಸಾಯಣನು "ಯಜ್ಞದಿಂದ ದೇವತೆಗಳು ಯಜ್ಞ ಮಾಡಿದರು" ಎಂಬುದನ್ನು ಸುಲಭವಾಗಿ ವ್ಯಾಖ್ಯಾನಿಸಿದ್ದಾನೆ. ಅವನ ವಿವರಣೆ ಇದು : "ದೇವಾಃ" ಎಂದರೆ ಯಜ್ಞವನ್ನು ಮಾಡುವ ಯಜಮಾನರು, ಯಾರು ಅದರ ಫಲಾನುಭವಿಗಳೋ ಅವರು. ಅವರು ಅಗ್ನಿಯನ್ನು ಸ್ಥಾಪಿಸಿ ಹೋಮಸಾಧನವಾದ ಆಹವನೀಯ ಎಂಬ ವೇದಿಯನ್ನು ರಚಿಸಿದರು." ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯ, ಅನ್ವಾಹರ್ಯ ಮತ್ತು ಆವಸಥ್ಯ ಎಂಬುವು ಯಜ್ಞಶಾಲೆಯಲ್ಲಿನ ಐದು ವೇದಿಗಳು. ತನ್ನ ವಿವರಣೆಗೆ ಪೂರಕವಾಗಿ ಸಾಯಣನು ತೈತ್ತಿರೀಯ ಸಂಹಿತೆಯ ವಾಕ್ಯವೊಂದನ್ನು ಉದ್ಧರಿಸಿದ್ದಾನೆ : "ಅಗ್ನಿಂ ಮಥಿತ್ವಾ ಪ್ರಹರತಿ ತೇನೈವ ಅಗ್ನಯ ಆತಿಥ್ಯಂ ಕ್ರಿಯತೇ." (ಅಗ್ನಿಯನ್ನು ಸ್ಥಾಪಿಸಿ ಅದರಲ್ಲಿ ಆಹುತಿ ನೀಡುತ್ತಾನೆ, ಹೀಗೆ ಅಗ್ನಿಗೆ ಅಗ್ನಿಮುಖೇನ ಆತಿಥ್ಯ ನೀಡಲಾಗುತ್ತದೆ).

ಕಾರ್ಯ-ಕಾರಣ ಸಂಬಂಧವಿಲ್ಲದ ಹಲವು ಹೇಳಿಕೆಗಳು ಭಗವದ್ಗೀತೆಯಲ್ಲಿ ಇರುವುದು ಪ್ರಸಿದ್ಧ. ಗೀತೆಯ ಕರ್ತೃವು ತಥ್ಯ ಮತ್ತು ಮಿಥ್ಯಗಳನ್ನು ಅಕ್ಕಪಕ್ಕದಲ್ಲಿಟ್ಟು ಒಂದು ವಾಸ್ತವವಾದ್ದರಿಂದ ಇನ್ನೊಂದೂ ವಾಸ್ತವವೇ ಇರಬೇಕೆಂಬ ಕಲ್ಪನೆಯನ್ನು ಮೂಡಿಸುತ್ತಾನೆ. ಉದಾಹರಣೆಗೆ, "ಹುಟ್ಟಿದವರೆಲ್ಲಾ ಗತಿಸುತ್ತಾರೆ ಮತ್ತು ಗತಿಸಿದವರೆಲ್ಲಾ ಮರುಹುಟ್ಟು ಪಡೆಯುತ್ತಾರೆ" (೨.೨೭ : ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ). ಇಲ್ಲಿ ಮೊದಲ ಹೇಳಿಕೆಯು ಅನುಭವಸಿದ್ಧ, ಆದರೆ ಎರಡನೆಯ ಹೇಳಿಕೆಯು ಅನುಭವಕ್ಕೆ ಅಗಮ್ಯ. ಇಂಥದೇ ಅತರ್ಕವನ್ನು ಯಜ್ಞದ ಸಂಬಂಧದಲ್ಲಿಯೂ ಮಂಡಿಸಲಾಗಿದೆ : "ಆಹಾರದಿಂದ ಜೀವಿಗಳು ಸುಸ್ಥಿರಗೊಳ್ಳುತ್ತವೆ, ಆಹಾರವು ಮಳೆಯಿಂದ ಬೆಳೆಯುತ್ತದೆ. ಯಜ್ಞದಿಂದ ಮಳೆಯು ಬರುತ್ತದೆ ಮತ್ತು ಯಜ್ಞಕ್ಕೆ ಕರ್ಮವು ಜನ್ಮಸ್ಥಾನ" (೩.೧೪ : ಅನ್ನಾತ್ ಭವಂತಿ ಭೂತಾನಿ ಪರ್ಜನ್ಯಾತ್ ಅನ್ನಸಂಭವಃ। ಯಜ್ಞಾತ್ ಭವತಿ ಪರ್ಜನ್ಯಃ ಯಜ್ಞಃ ಕರ್ಮಸಮುದ್ಭವಃ ॥). ಮಳೆಯಿಂದ ಬೆಳೆ ಎಂಬುದು ಅನುಭವ, ಆದರೆ ಯಜ್ಞದಿಂದ ಮಳೆ ಎಂಬುದು ಅನುಭವ ಗೋಚರವಲ್ಲ. ಸುಡುಬೇಸಿಗೆಯಲ್ಲಿ ರಾಜಸ್ತಾನದ ಮರುಭೂಮಿಯಲ್ಲಿ ಯಜ್ಞ ಮಾಡಿ ನೋಡಿದರೆ ಮಳೆಯು ಯಜ್ಞದಿಂದ ಸಂಭವಿಸುತ್ತದೋ ಇಲ್ಲವೋ ಎಂಬುದು ಸ್ಥಿರಗೊಳ್ಳುತ್ತದೆ. ಅದನ್ನು ಮಾಡದೆ ಗೀತಾವಾಕ್ಯವನ್ನು ನಿರರ್ಥಕವಾಗಿ ಪಠಿಸುತ್ತಿರುವುದು ತೀರಾ ಅಪ್ರಕೃತ. ಯಜ್ಞ ಮತ್ತು ಮಳೆ, ಇವುಗಳ ನಡುವೆ ಕಾರ್ಯ-ಕಾರಣ ಭಾವವು ಸ್ಥಾಪಿತವಾಗಿಲ್ಲ. ಅದನ್ನು ಗೀತೆಯು ಋಗ್ವೇದದ 'ಅಸ್ಯ ವಾಮಸ್ಯ ಸೂಕ್ತ' ೫೧ನೆಯ ಮಂತ್ರದಿಂದ ಉದ್ಧರಿ ಪಡೆದಿದೆ (ಸಮಾನಂ ಏತತ್ ಉದಕಂ ಉತ್ ಚ ಏತಿ ಅವ ಚ ಅಹಭಿಃ। ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತಿ ಅಗ್ನಯಃ ॥). "ಮಳೆಯ ನೀರಿದೆಯಲ್ಲಾ, ಅದು ದಿನದಿಂದ ದಿನಕ್ಕೆ ಮೇಲೇರುತ್ತದೆ ಮತ್ತು ಕೆಳಕ್ಕೆ ಸುರಿಯುತ್ತದೆ; ಅದಕ್ಕೆ ಬಾಧಕವೆಂಬುದಿಲ್ಲ. ಮಳೆಯು ಭೂಮಿಯನ್ನು ಜೀವಂತಗೊಳಿಸುತ್ತದೆ ಮತ್ತು ಅಗ್ನಿಗಳು ದ್ಯುಲೋಕವನ್ನು ಜೀವಂತವಿರಿಸುತ್ತವೆ." ಮಳೆ ಮತ್ತು ಭೂಮಿಯ ಮೇಲಿನ ಜೀವ, ಇವುಗಳ ಸಂಬಂಧ ಸ್ಪಷ್ಟವಾಗಿದೆ. ಕೆಳಗೆ ಬಿದ್ದ ನೀರು ಮೇಲೇರಿಹೋಗದಿದ್ದರೆ ಮತ್ತೆ ಮಳೆಯು ಅಸಂಭವ. ಸೂರ್ಯದೇವನು ನೀರನ್ನು ಮೇಲಕ್ಕೇರಿಸಿ ಜೀವವನ್ನು ಪೊರೆಯುತ್ತಾನೆ. ಇದು ನಿಸರ್ಗ ನಿಯಮ. ಯಜ್ಞದಲ್ಲಿ ನೀಡುವ ಹವಿಸ್ಸು ದ್ಯುಲೋಕವನ್ನು ಜೀವಂತವಿರಿಸುತ್ತದೆ ಎಂಬುದು ನಂಬಿಕೆ. ಸ್ವತಃ ಋಗ್ವೇದವು ಅದನ್ನು ಐತಿಹ್ಯ ಎಂದೀತೆ ! ಯಜ್ಞದ ಪ್ರಸ್ತಾಪವು ಈ ಮಂತ್ರದಲ್ಲಿದ್ದರೂ ಮೂಲಭೂತವಾಗಿ ಮಂತ್ರವು ನಿಸರ್ಗ ನಿಯಮವನ್ನು ಹೇಳುತ್ತಿದೆ, ಸೂರ್ಯನ ಪಾತ್ರವನ್ನು ವ್ಯಂಜಿಸುತ್ತಿದೆ. ಭೂಮಿ ಮತ್ತು ದ್ಯುಲೋಕಗಳ ನಡುವಣ ಪರಸ್ಪರ ಸಹಕಾರ ಸಂಬಂಧವನ್ನು ಎತ್ತಿಹಿಡಿಯುತ್ತಾ ಯಜ್ಞಾದಿ ಆಚರಣೆಗಳ ಮಹತ್ವವನ್ನು ಮಂತ್ರವು ಶ್ಲಾಘಿಸಿದೆ.



ನಾನು ನಾಸ್ತಿಕ ಕಣಯ್ಯ, ತಿರುಪತಿಗೆ ಹೋಗಿಲ್ಲಾಂದ್ರು, ನೀನು ಕೇಳ್ತಾಇಲ್ಲವಲ್ಲಾ...!

ಸೂಕ್ತದ ಕೊನೆಯ ಮಂತ್ರದಲ್ಲಿ ಕರ್ತೃವಿನ ವಿನೀತ ಭಾವವು ಪ್ರಕಟಗೊಂಡಿದೆ. ಸೂರ್ಯದೇವನನ್ನು ಇಲ್ಲಿ 'ಸರಸ್ವಾನ್' ಎನ್ನಲಾಗಿದೆ. ಅದು ನದಿದೇವತೆಯ ಹೆಸರು ಸಹ. ಅವನು ಸರಸ್ವತೀ ದೇವಿಯ ಪ್ರಾಣಸಖ. 'ಸರಸ್ವತೀ' ಎಂಬುದು ಋಗ್ವೇದದಲ್ಲಿ ಒಂದು ನದಿಯ ಹೆಸರೆಂಬುದನ್ನೂ ಇಲ್ಲಿ ನೆನಪಿನಲ್ಲಿಡಬೇಕು. ಸೂರ್ಯನ ಮಹತ್ವವನ್ನು ಅವನ ವಿವಿಧ ಪೋಷಕ ಕ್ರಿಯೆಗಳಿಂದ ವಿಶದೀಕರಿಸಲಾಗಿದೆ : "ಅವನು ದ್ಯುಲೋಕದ ಸುವರ್ಣಮಯ ಹಕ್ಕಿ, ಭೂಮಿಗೆ ಶಾಖ ಮತ್ತು ಬೆಳಕು ನೀಡುವವನು. ಅವನ ಮಹಾನ್ ವ್ಯಕ್ತಿತ್ವವು ಅವನ ಪ್ರಕಾಶದಿಂದ ತಿಳಿಯುತ್ತದೆ. ಅವನು ನೀರಿಗೆ ಮತ್ತು ಓಷಧಿ-ವನಸ್ಪತಿಗಳಿಗೆ ಮೂಲ. ಅಂತಹ ಸೂರ್ಯನನ್ನು ನಮ್ಮ ರಕ್ಷಣೆಗಾಗಿ ಪುನಃಪುನಃ ಆಹ್ವಾನಿಸುತ್ತೇನೆ." (೫೨ : ದಿವ್ಯಂ ಸುಪರ್ಣಂ ವಾಯಸಂ ಬೃಹಂತಂ ಅಪಾಂ ಗರ್ಭಂ ದರ್ಶತಂ ಓಷಧೀನಾಂ। ಅಭೀಪತಃ ವೃಷ್ಟಿಭಿಃ ತರ್ಪಯಂತಂ ಸರಸ್ವಂತಂ ಅವಸೇ ಜೋಹವೀಮಿ ॥)

ಒಟ್ಟಿನಲ್ಲಿ ಇದೊಂದು ಕ್ಲಿಷ್ಟವಾದ ಸೂಕ್ತ. ಅದನ್ನು ಸಮರ್ಥವಾಗಿ ವ್ಯಾಖ್ಯಾನಿಸಿಕೊಂಡಿದ್ದೇವೆಂಬ ಹಮ್ಮಿಗೆ ಅವಕಾಶವಿಲ್ಲ. ಸುಲಭಗ್ರಾಹ್ಯವಾದ ಅನೇಕ ಸೂಕ್ತಗಳನ್ನು ಈವರೆಗೆ ನಾವು ಗಮನಿಸಿದ್ದೇವೆ. ಅವಕ್ಕೆ ಅಪವಾದದಂತಿದೆ ಪ್ರಸ್ತುತ ಸೂಕ್ತ. ಗೆಲ್ಡ್‌ನರ್ ಸಾರಾಂಶರೂಪದಲ್ಲಿ ಹೇಳಿದ್ದಂತೆ 'ಅಸ್ಯ ವಾಮಸ್ಯ ಸೂಕ್ತ'ದಲ್ಲಿ ಪ್ರಕೃತಿ ಹಾಗೂ ಮಾನವ ಜೀವನದ ವಿಸ್ಮಯಗಳ ಚಿತ್ರಣವಿದೆ, ಕಾಲ ಎಂಬುದರ ಬಗ್ಗೆ ಜಿಜ್ಞಾಸೆ ಇದೆ, ಮಾನವನ ಮತ್ತು ಕವಿತ್ವದ ಭಾಷೆಯ ಬಗೆಗಿನ ಮೀಮಾಂಸೆ ಇದೆ. ಸೂಕ್ತದಲ್ಲಿ ಗೂಢಾರ್ಥ ದ್ಯೋತಕವಾದ ಒಗಟುಗಳು ಸಹ ತುಂಬಿವೆ. ಋಗ್ವೇದದಲ್ಲಿ ಕೆಲವೇಳೆ ಕವಿತ್ವವು ಸಂಕೀರ್ಣಬಾಹುಳ್ಯದಿಂದ ಅಭಿವ್ಯಕ್ತವಾಗಬಹುದು ಎಂಬುದಕ್ಕೆ ಈ ಸೂಕ್ತವು ಒಂದು ಒಳ್ಳೆಯ ನಿದರ್ಶನವನ್ನೊದಗಿಸುತ್ತದೆ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಗ್ರಾಮ ಪಂಚಾಯಿತಿ ಉಗುರೂ ಇಲ್ಲ, ಹಲ್ಲೂ ಇಲ್ಲ!

ಸೂರ್ಯದೇವ

ನಮಗೆ ಈಗ ಬೇಕಾಗಿರುವುದು ಅಭಿವೃದ್ಧಿ ಕಾರ್ಯಕ್ರಮಗಳಲ್ಲ. ಅಭಿವೃದ್ಧಿಯ ಜವಾಬ್ದಾರಿ. ಗ್ರಾಮದ ಜನರು ತಮ್ಮ ಅಗತ್ಯಕ್ಕೆ ತಕ್ಕಂತೆ ಯೋಜನೆಗಳನ್ನು ರೂಪಿಸಿಕೊಳ್ಳುವ ವ್ಯವಸ್ಥೆ. ಅದಕ್ಕೆ ತಕ್ಕಷ್ಟು ಹಣಕಾಸು ಸೌಲಭ್ಯಗಳನ್ನು ಒದಗಿಸುವ ಕೆಲಸವನ್ನು ಮಾತ್ರ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಮಾಡಬೇಕು. ೨೯ ಅಭಿವೃದ್ಧಿ ವಿಷಯಗಳ ಬಗ್ಗೆ ಬೇರೆ ಬೇರೆ ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಎಲ್ಲೆಲ್ಲಿ ಏನೇನು ನಡೆಯಬೇಕು ಎಂದು ಗುರುತಿಸಲಾಗಿರುವುದು ಸಮಿತಿಯ ಉತ್ತಮ ಕಾರ್ಯಗಳಲ್ಲಿ ಒಂದು. ಅಭಿವೃದ್ಧಿ ಕಾರ್ಯಕ್ರಮಕ್ಕೆ ಯಾರು ಜವಾಬ್ದಾರರು, ಅದನ್ನು ಹೇಗೆ ನಿರ್ವಹಿಸಬೇಕು ಹಾಗೂ ಅದರಲ್ಲಿ ಗ್ರಾಮಸಭೆಗೆ ಇರುವ ಪಾತ್ರ ಏನು ಎನ್ನುವುದನ್ನು ಗುರುತಿಸಲಾಗಿದೆ. ಇದು ಕೂಡ ಅತ್ಯಂತ ಮಹತ್ವದ್ದು. ಅಭಿವೃದ್ಧಿ ಕಾರ್ಯಕ್ರಮಗಳನ್ನು ಇಲಾಖಾವಾರು ನೋಡದೆ ಯಾವ ಕಾಮಗಾರಿ ಎಲ್ಲಿ ಆಗಬೇಕು, ಎಷ್ಟು ಅಗತ್ಯ ಎನ್ನುವುದನ್ನು ನೋಡಿಕೊಂಡು ಅದನ್ನು ಮಾಡಬೇಕು. ಅಲ್ಲಿಗೇ ಸಂಪನ್ಮೂಲದ ಹರಿವು ಬರುವಂತೆ ಮಾಡಬೇಕು. ವೈಜ್ಞಾನಿಕ ಮತ್ತು ವಾಸ್ತವದ ನೆಲೆಯಲ್ಲಿ ಯೋಜನೆಗಳನ್ನು ಜಾರಿಗೊಳಿಸಬೇಕು.



**ರಾ**ಜ್ಯದಲ್ಲಿ ಅಧಿಕೃತವಾಗಿ ಪಂಚಾಯತ್‌ರಾಜ್ ವ್ಯವಸ್ಥೆ ಜಾರಿಯಾಗಿ ೩೦ ವರ್ಷಗಳಾಗಿದೆ. ಆದರೆ ಇನ್ನೂ ಗ್ರಾಮಗಳು ಸ್ವಾವಲಂಬಿಯಾಗದೇ ಇರುವುದು ಮಾತ್ರ ದುರಂತ. ಈಗ ಮತ್ತೆ ಗ್ರಾಮ ಪಂಚಾಯತಿ ಚುನಾವಣೆ ನಡೆಯಲಿದೆ. ಗ್ರಾಮಗಳ ಬಲವೃದ್ಧಿಗೆ ಹೊಸತಾದ ವಿಭಿನ್ನ ದೃಷ್ಟಿಕೋನದ ವ್ಯವಸ್ಥೆಯೊಂದು ಜಾರಿಗೆ ಬರಬೇಕಾಗಿದ್ದು ಈ ಕಾಲದ ತುರ್ತು ಅಗತ್ಯವಾಗಿತ್ತು. ಅದಕ್ಕೆ ಸಿದ್ದರಾಮಯ್ಯ ನೇತೃತ್ವದ ಸರ್ಕಾರ ಮುಂದಾಗಿದ್ದು ಮೆಚ್ಚಬಹುದಾದ ವಿಷಯ. ೨೦೧೫ರ ಮೇ ತಿಂಗಳಲ್ಲಿ ಗ್ರಾಮ ಪಂಚಾಯಿತಿ ಚುನಾವಣೆ ನಡೆಯಲೇಬೇಕಾಗಿರುವುದರಿಂದ ಅಷ್ಟರಲ್ಲಿಯೇ ಇಂತಹ ಕಾಯ್ದೆ ಜಾರಿಗೆ ತರಬೇಕು ಎಂದು ಕಾಯ್ದೆಯನ್ನು ಈಗಾಗಲೇ ಸಿದ್ಧಪಡಿಸಿ ವಿಧಾನ ಮಂಡಲದ ಒಪ್ಪಿಗೆಯನ್ನೂ ಪಡೆಯಲಾಗಿದೆ. ರಾಜ್ಯಪಾಲರೂ ಅದಕ್ಕೆ ಅಂಕಿತ ಹಾಕಿ ಆಗಿದೆ. ಆದರೆ ಈ ಕಾಯ್ದೆ ಗ್ರಾಮ ಸ್ವರಾಜ್ಯದ ಕನಸು ನನಸು ಮಾಡುವುದಕ್ಕೆ ಇನ್ನಷ್ಟು ಕಠಿಣ ಕ್ರಮಗಳನ್ನು ಒಳಗೊಳ್ಳಬೇಕಿತ್ತು.

೧೯೯೩ರ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ ಅನುಷ್ಠಾನಕ್ಕೆ ಬಂದು ೨೦ ವರ್ಷಗಳು ಸಂದಿರುವ ಹಿನ್ನೆಲೆಯಲ್ಲಿ ಅದರ ಪುನರಾವಲೋಕನ ಮತ್ತು ಅಗತ್ಯವಾದರೆ ಸೂಕ್ತ ತಿದ್ದುಪಡಿಯನ್ನು ಮಾಡಲು ಶಾಸಕ ಕೆ. ಆರ್. ರಮೇಶಕುಮಾರ್ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿತ್ತು. ಈ ಹಿಂದೆ ನಜ಼ೀರ್‌ಸಾಬ್ ಅವರ ಕನಸಿನ ಕೂಸಾಗಿ ಹೊರಬಂದ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿಯೇ ಕೆಲಸ ಮಾಡಿದ ಸಿ. ನಾರಾಯಣಸ್ವಾಮಿ, ಜಿ. ಸಿ. ಬೈರಾರೆಡ್ಡಿ, ಡಿ. ಆರ್. ಪಾಟೀಲ್ ಅವರಲ್ಲದೆ ಪಂಚಾಯತ್‌ರಾಜ್ ವ್ಯವಸ್ಥೆಯ ಬಗ್ಗೆ ಸಾಕಷ್ಟು ಕೆಲಸ ಮಾಡಿದ ಎಂ. ಚಂದ್ರ ಪೂಜಾರಿ, ನಂದನಾ ರೆಡ್ಡಿ, ವೆಂಕಟರಾವ್ ಘೋರ್ಪಡೆ ಮೊದಲಾದ ಒಟ್ಟು ೨೨ ಮಂದಿ ಸಮಿತಿಯಲ್ಲಿದ್ದರು.

ಗ್ರಾಮ ಸ್ವರಾಜ್ಯದ ಕನಸನ್ನು ನನಸು ಮಾಡುವುದಕ್ಕೆ ಇದೊಂದು ಉತ್ತಮ ಹೆಜ್ಜೆ ಎಂದು ಸಮಿತಿಯ ಅಧ್ಯಕ್ಷ ಕೆ. ಆರ್. ರಮೇಶಕುಮಾರ್ ಅವರು ಹೇಳಿದ್ದಾರೆ. ಈ ಸಮಿತಿ ೮೮ ಶಿಫಾರಸುಗಳನ್ನು ಮಾಡಿತ್ತು. ಆದರೆ ಕೇವಲ ೩ ಶಿಫಾರಸುಗಳನ್ನು ಮಾತ್ರ ಸೇರಿಸಿಕೊಂಡು ಹೊಸಕಾಯ್ದೆ ರೂಪಿಸಲಾಗಿದೆ. ಇದಕ್ಕೆ ಸಾಕಷ್ಟು ವಿರೋಧ ವ್ಯಕ್ತವಾದ ನಂತರ ರಾಜ್ಯದ ಪಂಚಾಯತ್‌ರಾಜ್ ಸಚಿವ ಎಚ್. ಕೆ. ಪಾಟೀಲ್ ಅವರು ಸಮಿತಿಯ ಎಲ್ಲ ಶಿಫಾರಸುಗಳನ್ನೂ ರಾಜ್ಯ ಸರ್ಕಾರ ಒಪ್ಪಿಕೊಂಡಿದೆ.

ಎಲ್ಲವನ್ನೂ ಅಳವಡಿಸಿಕೊಂಡು ಸಮಗ್ರ ಕಾಯ್ದೆಯನ್ನು ಜಾರಿಗೆ ತರಲಾಗುವುದು ಎಂದು ಹೇಳಿದ್ದಾರೆ.

ರಮೇಶಕುಮಾರ್ ಸಮಿತಿ ಮೇಲೆ ನಜೀರ್‌ಸಾಬ್ ಜಾರಿಗೆ ತಂದ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿನ ಸಾಕಷ್ಟು ವಿಚಾರಗಳು ಪ್ರಭಾವ ಬೀರಿವೆ ಎನ್ನುವುದನ್ನು ತಳ್ಳಿಹಾಕಲಾಗದು. ನಮ್ಮ ದೇಶದಲ್ಲಿ ಕಾಯ್ದೆ ಮಾಡುವ ಜನರಿಗೆ ಬರವಿಲ್ಲ. ಕಾಯ್ದೆಗಳು ಅತ್ಯುತ್ತಮವಾಗಿಯೇ ಇರುತ್ತವೆ. ಆದರೆ ನಾವು ಯಾವಾಗಲೂ ಕಾಯ್ದೆ ಅನುಷ್ಠಾನದಲ್ಲಿ ಸೋಲುತ್ತೇವೆ. ಈ ಎಚ್ಚರಿಕೆಯನ್ನು ಇಟ್ಟುಕೊಂಡೇ ಪಂಚಾಯತ್‌ರಾಜ್ ಕಾನೂನು ತಿದ್ದುಪಡಿ ಸಮಿತಿ ನೀಡಿದ ವರದಿಯನ್ನು ಅವಲೋಕಿಸಬೇಕು.

ಗ್ರಾಮಗಳು ಅಭಿವೃದ್ಧಿಯಾದರೆ ದೇಶ ಅಭಿವೃದ್ಧಿಯಾಗುತ್ತದೆ ಎಂದು ಮಹಾತ್ಮ ಗಾಂಧೀಜಿ ಅವರು ಹೇಳಿದ್ದರು. ಆದರೆ ಶಾಸಕರು ತಮ್ಮ ಅಧಿಕಾರ ಕಡಿಮೆಯಾಗುತ್ತದೆ ಎಂದು ತಿಳಿದುಕೊಂಡಿದ್ದರಿಂದ ನಮ್ಮ ರಾಜ್ಯದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆ ಹಾಳಾಗಿತ್ತು. ಎಲ್ಲ ಜವಾಬ್ದಾರಿಗಳನ್ನೂ ಶಾಸಕರೇ ಕಸಿದುಕೊಳ್ಳಲು ಮುಂದಾಗಿದ್ದರು. ರಮೇಶಕುಮಾರ್ ಅವರ ನೇತೃತ್ವದ ಸಮಿತಿ ಈಗ ನೀಡಿರುವ ಶಿಫಾರಸುಗಳು ಅದನ್ನು ಕೊಂಚ ಕಡಿಮೆ ಮಾಡುವ ಯತ್ನ ಮಾಡಿದೆ.




ಗ್ರಾಮ ಸಭೆಗಳೇ ಎಲ್ಲ ನಿರ್ಣಯ ಕೈಗೊಳ್ಳುವ ಕೇಂದ್ರಗಳಾಗಬೇಕು. ದುರ್ಬಲ ವರ್ಗದವರು, ಮಹಿಳೆಯರು, ಮಕ್ಕಳು, ಪರಿಶಿಷ್ಟರು ಗ್ರಾಮಸಭೆಗಳಲ್ಲಿ ಯಾವುದೇ ಭಯವಿಲ್ಲದೆ ಭಾಗಿಯಾಗಲು ಅವಕಾಶ ಇರಬೇಕು. ಪಂಚಾಯಿತಿಗಳು ಜನರಿಗೆ ಉತ್ತರದಾಯಿಯಾಗಿರಬೇಕು. ಯೋಜನೆ, ಹಣಕಾಸು ಹಾಗೂ ಕಾರ್ಯನಿರ್ವಾಹಕ ಜನಶಕ್ತಿಯಿಂದ ಗ್ರಾಮಸಭೆಗಳು ನಿರೂಪಿಸಿದ ಅಭಿವೃದ್ಧಿ ಯೋಜನೆಗಳನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುವಂತಾಗಬೇಕು. ಮುಖ್ಯವಾಗಿ ಮೂರು ಹಂತದ ಪಂಚಾಯಿತಿಗಳ ಅಧ್ಯಕ್ಷರು, ಶಾಸಕರು, ಸಂಸತ್ ಸದಸ್ಯರ ಕರ್ತವ್ಯ ಏನು ಎನ್ನುವುದನ್ನು ನಿಗದಿ ಮಾಡಬೇಕು. ಅವರು ತಮಗೆ ವಹಿಸಲಾದ ಕೆಲಸವನ್ನು ಸೂಕ್ತರೀತಿಯಲ್ಲಿ ಮಾಡಿದರೆ ಅಭಿವೃದ್ಧಿ ಎನ್ನುವುದು ಗಗನ ಕುಸುಮ ಏನಲ್ಲ.

ಈಗ ಜಾರಿಯಲ್ಲಿರುವ ವ್ಯವಸ್ಥೆಯಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಯೋಜನೆಗಳನ್ನು ವಿತರಿಸುವ ಏಜೆನ್ಸಿಗಳಾಗಿವೆ. ಮೇಲಿನಿಂದ ಕೆಳಕ್ಕೆ ಯೋಜನೆಗಳು ಹರಿದುಬರುತ್ತವೆ. ಆದರೆ ಇದು ತಿರುವುಮುರುವಾಗಬೇಕು. ಯೋಜನೆಗಳು ಕೆಳಗಿನಿಂದ ಮೇಲಕ್ಕೆ ಹೋಗಬೇಕು. ಪಂಚಾಯತ್‌ರಾಜ್ ಸಂಸ್ಥೆಗಳನ್ನು ಆರ್ಥಿಕವಾಗಿ ಬಲಪಡಿಸಬೇಕು. ಈ ಬಗ್ಗೆ ಸಮಿತಿ ಗಮನ ನೀಡಿದೆ. ಆದರೆ ಆದಾಯದ ಮೂಲವನ್ನು ಗುರುತಿಸಿದ್ದರೆ ಚೆನ್ನಾಗಿತ್ತು. ಗ್ರಾಮ ಪಂಚಾಯತಿಗಳಿಗೆ ಸಾಕಷ್ಟು ಆದಾಯದ ಮೂಲಗಳು ಇವೆ. ಆದರೆ ಅವುಗಳನ್ನು ಬಳಸಿಕೊಳ್ಳಲು ರಾಜ್ಯ ಸರ್ಕಾರವೇ ಬಿಡುತ್ತಿಲ್ಲ.

ಬಡತನ ನಿವಾರಣೆ, ಗ್ರಾಮಗಳ ಮೂಲಭೂತ ಸೌಲಭ್ಯ ಒದಗಿಸುವುದು ಪಂಚಾಯತ್‌ರಾಜ್ ಸಂಸ್ಥೆಗಳ ಮೂಲ ಕರ್ತವ್ಯವಾಗಬೇಕು. ಪ್ರತಿಯೊಂದು ಸಮುದಾಯಗಳ ಅಗತ್ಯಗಳಿಗೆ ಅನುಗುಣವಾಗಿ ವಿಶೇಷ ಆದ್ಯತೆ ನೀಡಬೇಕು. ಆ ಮೂಲಕ ಯಾವ ಉದ್ದೇಶಕ್ಕೆ ಸಂಪನ್ಮೂಲ ನೀಡಲಾಗಿದೆಯೋ ಅದಕ್ಕೆ ಬಳಕೆಯಾಗುವಂತೆ ಮಾಡಬೇಕು. ಚುನಾವಣಾ ವೆಚ್ಚವನ್ನು ರಾಜ್ಯ ಸರ್ಕಾರವೇ ವಹಿಸಿಕೊಳ್ಳಬೇಕು ಎಂದು ರಮೇಶಕುಮಾರ್ ಸಮಿತಿ ಶಿಫಾರಸು ಮಾಡಿದೆ. ಚುನಾವಣಾ ಭ್ರಷ್ಟಾಚಾರ ಕಡಿಮೆಯಾದರೆ ಒಟ್ಟಾರೆ ಭ್ರಷ್ಟಾಚಾರದಲ್ಲಿ ಶೇ. ೫೦ಕ್ಕಿಂತಲೂ ಹೆಚ್ಚು ಪ್ರಮಾಣದ ಭ್ರಷ್ಟಾಚಾರ ಕಡಿಮೆಯಾಗುತ್ತದೆ. ನಮ್ಮ ದೇಶ ಭ್ರಷ್ಟಾಚಾರದಲ್ಲಿ ನಂಬರ್ ಒನ್ ಆಗಿರುವುದಕ್ಕೆ ನಮ್ಮ ಚುನಾವಣಾ ವ್ಯವಸ್ಥೆ ಹದಗೆಟ್ಟಿರುವುದು ಪ್ರಮುಖ ಕಾರಣ. ಆದರೆ ಈಗ ಗ್ರಾಮಪಂಚಾಯಿತಿ ಸದಸ್ಯ ಸ್ಥಾನವನ್ನು ಹರಾಜು ಹಾಕುವ ಪ್ರಕ್ರಿಯೆ ಬಹುತೇಕ ಎಲ್ಲೆಡೆ ನಡೆಯುತ್ತಿದೆ. ಇದು ಪ್ರಜಾಪ್ರಭುತ್ವಕ್ಕೆ ಮಾರಕ. ಬಹುತೇಕ ಕಡೆ ದೇವಾಲಯಕ್ಕೆ ಹಣ ನೀಡಿದವರನ್ನು ಅವಿರೋಧವಾಗಿ ಆಯ್ಕೆ ಮಾಡುವ ಕ್ರಿಯೆ ನಡೆಯುತ್ತಿದೆ. ಇದು ಪ್ರಜಾಪ್ರಭುತ್ವದ ಅಣಕ.

ಈವರೆಗೆ ಚುನಾವಣೆಯ ದಿನ ಹಾಗೂ ಮತ ಎಣಿಕೆಯ ದಿನ ಮಾತ್ರ ಮದ್ಯದಂಗಡಿಗಳು ಬಂದ್ ಆಗುತ್ತಿದ್ದವು. ಆದರೆ ಈ ಸಮಿತಿ ಚುನಾವಣೆ ಘೋಷಣೆಯಾದ ದಿನದಿಂದ ಚುನಾವಣೆ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೂ ಮದ್ಯದಂಗಡಿಗಳನ್ನು ಬಂದ್ ಮಾಡಲು ಶಿಫಾರಸು ಮಾಡಿದೆ. ಪಂಚಾಯಿತಿ ವ್ಯಾಪ್ತಿಯ ಎಲ್ಲ ಮದ್ಯದಂಗಡಿಗಳ ಕೀಲಿ ಜಿಲ್ಲಾಧಿಕಾರಿಗಳ ಬಳಿ ಇರುವಂತೆ ಹೇಳಿದೆ. ಆದರೆ ರಾಜ್ಯ ಸರ್ಕಾರ ಈ ಶಿಫಾರಸನ್ನು ಗಂಭೀರವಾಗಿ ಪರಿಗಣಿಸಿದಂತೆ ಇಲ್ಲ. ಈ ಬಾರಿ ಗ್ರಾಮಪಂಚಾಯಿತಿ ಚುನಾವಣೆಯಲ್ಲಿ ಇದು ಪಾಲನೆಯಾಗಿಲ್ಲ.

ಗ್ರಾಮೀಣಾಭಿವೃದ್ಧಿಯಲ್ಲಿ ಸಂಪತ್ತಿನ ಸಮನಾದ ಹಂಚಿಕೆ ಬಹಳ ಮುಖ್ಯ. ರಾಜ್ಯ ಬಜೆಟ್‌ನ ಶೇ. ೩೦ರಷ್ಟು ಪಾಲನ್ನು ಇದಕ್ಕೆ ನಿಗದಿಗೊಳಿಸಬೇಕು ಎಂದು ಹೇಳಿರುವುದೂ ಕೂಡ ಸರಿಯಾಗಿಯೇ ಇದೆ. ಆದರೆ ಈಗ ಜಾರಿ ಮಾಡಲಾದ ಕಾಯ್ದೆಯಲ್ಲಿ ಈ ಬಗ್ಗೆ ಯಾವುದೇ ಪ್ರಸ್ತಾಪವಿಲ್ಲ.

**ಅಭಿವೃದ್ಧಿ ಜವಾಬ್ದಾರಿ :** ನಮಗೆ ಈಗ ಬೇಕಾಗಿರುವುದು ಅಭಿವೃದ್ಧಿ ಕಾರ್ಯಕ್ರಮಗಳಲ್ಲ. ಅಭಿವೃದ್ಧಿಯ ಜವಾಬ್ದಾರಿ. ಗ್ರಾಮದ ಜನರು ತಮ್ಮ ಅಗತ್ಯಕ್ಕೆ ತಕ್ಕಂತೆ ಯೋಜನೆಗಳನ್ನು ರೂಪಿಸಿಕೊಳ್ಳುವ ವ್ಯವಸ್ಥೆ. ಅದಕ್ಕೆ ತಕ್ಕಷ್ಟು ಹಣಕಾಸು ಸೌಲಭ್ಯಗಳನ್ನು ಒದಗಿಸುವ ಕೆಲಸವನ್ನು ಮಾತ್ರ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಮಾಡಬೇಕು. ೨೯ ಅಭಿವೃದ್ಧಿ ವಿಷಯಗಳ ಬಗ್ಗೆ ಬೇರೆ ಬೇರೆ ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಎಲ್ಲೆಲ್ಲಿ ಏನೇನು ನಡೆಯಬೇಕು ಎಂದು ಗುರುತಿಸಲಾಗಿರುವುದು ಸಮಿತಿಯ ಉತ್ತಮ ಕಾರ್ಯಗಳಲ್ಲಿ ಒಂದು. ಅಭಿವೃದ್ಧಿ ಕಾರ್ಯಕ್ರಮಕ್ಕೆ ಯಾರು ಜವಾಬ್ದಾರರು, ಅದನ್ನು ಹೇಗೆ ನಿರ್ವಹಿಸಬೇಕು ಹಾಗೂ ಅದರಲ್ಲಿ ಗ್ರಾಮಸಭೆಗೆ ಇರುವ ಪಾತ್ರ ಏನು ಎನ್ನುವುದನ್ನು ಗುರುತಿಸಲಾಗಿದೆ. ಇದು ಕೂಡ ಅತ್ಯಂತ ಮಹತ್ವದ್ದು. ಅಭಿವೃದ್ಧಿ ಕಾರ್ಯಕ್ರಮಗಳನ್ನು ಇಲಾಖಾವಾರು ನೋಡದೆ ಯಾವ ಕಾಮಗಾರಿ ಎಲ್ಲಿ ಆಗಬೇಕು, ಎಷ್ಟು ಅಗತ್ಯ ಎನ್ನುವುದನ್ನು ನೋಡಿಕೊಂಡು ಅದನ್ನು ಮಾಡಬೇಕು. ಅಲ್ಲಿಗೇ ಸಂಪನ್ಮೂಲದ ಹರಿವು ಬರುವಂತೆ ಮಾಡಬೇಕು. ವೈಜ್ಞಾನಿಕ ಮತ್ತು ವಾಸ್ತವದ ನೆಲೆಯಲ್ಲಿ ಯೋಜನೆಗಳನ್ನು ಜಾರಿಗೊಳಿಸಬೇಕು.

ಗ್ರಾಮಸಭೆಗಳಲ್ಲಿ ಜನರು ಭಾಗಿಯಾಗಲು ನಕ್ಷೆ ತಯಾರಿಸಿರುವುದು ಕೂಡ ಸ್ವಾಗತಾರ್ಹ ಕ್ರಮ. ತಳಮಟ್ಟದ ಯೋಜನೆಗಳಿಗೆ ಗ್ರಾಮಸಭೆ ಆಧಾರವಾದರೆ ಎಲ್ಲ ತಾಲ್ಲೂಕು ಮಟ್ಟದ ಯೋಜನೆಗಳು ಜಿಲ್ಲಾ ಯೋಜನೆಗಳಿಗೆ ಆಧಾರವಾಗಿರಬೇಕು. ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಮಂಡಳಿಗೆ ಗ್ರಾಮ ಪಂಚಾಯಿತಿ, ಪುರಸಭೆ, ನಗರಸಭೆ ಪ್ರತಿನಿಧಿಗಳೂ ಸದಸ್ಯರಾಗಿರುತ್ತಾರೆ. ಅದೇ ರೀತಿ ಜಿಲ್ಲಾ ಯೋಜನಾ ಸಮಿತಿಯಲ್ಲಿಯೂ ಗ್ರಾಮ ಮಟ್ಟದ ಸದಸ್ಯರೂ ಇರುತ್ತಾರೆ. ಜಿಲ್ಲಾ ಮಟ್ಟದ ಯೋಜನೆಗೂ ಗ್ರಾಮಸಭೆಯೇ ತಳಹದಿಯಾಗಿರಬೇಕು ಎನ್ನುವುದು ಸಮಿತಿಯ ಒತ್ತಾಸೆ.

**ಸಂಪನ್ಮೂಲ :** ರಾಜ್ಯ ಬಜೆಟ್‌ನ ಶೇ. ೩೦ರಷ್ಟು ಯೋಜನಾ ಸಂಪನ್ಮೂಲ ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಗೆ ಮೀಸಲಾಗಿಡಬೇಕು. ಅದರಲ್ಲಿ ಶೇ. ೫೦ರಷ್ಟು ಹಣವನ್ನು ಮುಕ್ತ ನಿಧಿಯಾಗಿಡಬೇಕು. ಆಯಾ ಪಂಚಾಯತ್ ಸಂಸ್ಥೆಗಳ ಅಗತ್ಯ, ಯೋಜನೆಗಳ ಆದ್ಯತೆ ಮೂಲಕ ಸಂಪತ್ತು ಹಂಚಿಕೆಯಾಗಬೇಕು. ಗ್ರಾಮ ಪಂಚಾಯಿತಿಗಳಿಗೆ ಆದಾಯದ ಮೂಲಗಳನ್ನು ಗುರುತಿಸಬೇಕು. ಅನುದಾನವನ್ನೂ ನೇರವಾಗಿ ಗ್ರಾಮ ಪಂಚಾಯಿತಿಗಳಿಗೇ ನೀಡಬೇಕು ಎಂಬುದಕ್ಕೆ ಸಮಿತಿಯ ವರದಿಯಲ್ಲಿ ಆದ್ಯತೆ ನೀಡಲಾಗಿದೆ.

ಆದರೆ ಈಗಲೂ ಕೂಡ ಪಂಚಾಯತ್‌ರಾಜ್ ಸಂಸ್ಥೆಗಳು ಸಂಪನ್ಮೂಲಗಳಿಗೆ ರಾಜ್ಯ ಮತ್ತು ಕೇಂದ್ರ ಸರ್ಕಾರಗಳನ್ನೇ ಅವಲಂಬಿಸಿವೆ. ಇದನ್ನು ತಪ್ಪಿಸಿ ಗ್ರಾಮ

ಪಂಚಾಯಿತಿಗಳು ತಮ್ಮ ಆದಾಯದ ಮೂಲವನ್ನು ಹುಡುಕಿಕೊಳ್ಳುವಂತೆ, ವಿಸ್ತರಿಸುವಂತೆ ಸೂಕ್ತ ಶಿಫಾರಸುಗಳನ್ನು ಮಾಡಬಹುದಿತ್ತು. ಕಾಲಕ್ಕೆ ತಕ್ಕಂತೆ ಬದಲಾವಣೆ ಮಾಡಿಕೊಂಡು ಹೊಸ ಹೊಸ ಆದಾಯದ ಮೂಲಗಳ ದಾರಿಯನ್ನು ತೋರಿ ಗ್ರಾಮ ಪಂಚಾಯಿತಿಗಳು ಆರ್ಥಿಕ ಸ್ವಾವಲಂಬನೆ ಪಡೆಯಲು ಅವಕಾಶ ಕಲ್ಪಿಸಿದ್ದರೆ ಚೆನ್ನಾಗಿತ್ತು.

ಕೇಂದ್ರ ಸರ್ಕಾರ ತನ್ನ ತೆರಿಗೆಯ ಆದಾಯದಲ್ಲಿ ರಾಜ್ಯದ ಪಾಲನ್ನು ನೀಡುತ್ತದೆ. ಅದೇ ರೀತಿ ರಾಜ್ಯ ಸರ್ಕಾರ ಕೂಡ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಪ್ರತ್ಯೇಕ ಪಾಲನ್ನು ನೀಡುವ ವ್ಯವಸ್ಥೆಯನ್ನು ಶಿಫಾರಸು ಮಾಡಬಹುದಿತ್ತು. ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗಾಗಿ ಪ್ರತ್ಯೇಕ ಗ್ರಾಮಸಭೆ ನಡೆಸಬೇಕು ಎಂದು ಶಿಫಾರಸು ಮಾಡಲಾಗಿದೆ. ಸಮಿತಿ ಹಲವಾರು ಉತ್ತಮ ಅಂಶಗಳನ್ನು ಹೇಳಿದೆ. ಆದರೆ ಇದು ಹೊಸ ಕಾಯ್ದೆಯಲ್ಲಿ ಸೇರಿಲ್ಲ. ತಮ್ಮ ಅಧಿಕಾರಕ್ಕೆ ಯಾವುದೇ ತೊಂದರೆ ಇಲ್ಲದ ಶಿಫಾರಸುಗಳಿಗೆ ಶಾಸಕರೂ ಬೆಂಬಲ ನೀಡಿದ್ದಾರೆ. ಅದಕ್ಕೆಂದೇ ಹೊಸ ಕಾಯ್ದೆ ವಿಧಾನ ಮಂಡಲದಲ್ಲಿ ಅಂಗೀಕಾರವಾಗಿದೆ.

ಜನ ಮತ್ತು ಜನರ ನಡುವೆ, ಜನರು ಮತ್ತು ಸ್ಥಳೀಯ ಸರ್ಕಾರಗಳ ನಡುವೆ, ಪರಸ್ಪರ ಸ್ಥಳೀಯ ಸರ್ಕಾರಗಳ ನಡುವೆ ಹಾಗೂ ಸ್ಥಳೀಯ ಸರ್ಕಾರ ಮತ್ತು ರಾಜ್ಯ ಸರ್ಕಾರಗಳ ನಡುವೆ ಬಿಕ್ಕಟ್ಟು ಉಂಟಾದರೆ ಅವುಗಳ ಪರಿಹಾರಕ್ಕೆ ಜಿಲ್ಲಾ ಮಟ್ಟದ ಪಂಚಾಯತ್ ನ್ಯಾಯ ಮಂಡಳಿ ರಚಿಸಬೇಕು.

ಪಂಚಾಯತ್ ಪ್ರತಿನಿಧಿಗಳು, ಅಧಿಕಾರಿಗಳು ಹಣ ಮತ್ತು ಅಧಿಕಾರದ ದುರ್ಬಳಕೆ ಮಾಡಿಕೊಂಡರೆ ಅಥವಾ ಭ್ರಷ್ಟಾಚಾರದಲ್ಲಿ ತೊಡಗಿದರೆ ಅವುಗಳ ಬಗ್ಗೆ ತನಿಖೆ ನಡೆಸಲು ಒಂಬುಡ್ಸ್‌ಮನ್ ನೇಮಕ ಮಾಡಬೇಕು. ಮಹಿಳೆ ಮತ್ತು ಮಕ್ಕಳ ಮೇಲಿನ ದೌರ್ಜನ್ಯ ತಡೆಗೆ ಪಂಚಾಯತ್ ಸಮಿತಿ ರಚಿಸಬೇಕು. ಪಂಚಾಯತ್ ಸಂಸ್ಥೆಗಳಲ್ಲಿ ಅಗತ್ಯ ಸಿಬ್ಬಂದಿ ನೇಮಕಕ್ಕೆ ಸಿಬ್ಬಂದಿ ಆಯ್ಕೆ ಮತ್ತು ನೇಮಕಾತಿ ಸಂಸ್ಥೆ ಆರಂಭಿಸಬೇಕು.

ಕರ್ನಾಟಕ ಪಂಚಾಯತ್ ಆಡಳಿತ ಮತ್ತು ತಾಂತ್ರಿಕ ಸೇವಾ ಮಂಡಳಿ ಸ್ಥಾಪಿಸಬೇಕು. ಇದರ ಮೂಲಕ ಪಂಚಾಯತ್ ಪ್ರತಿನಿಧಿಗಳು, ಅಧ್ಯಕ್ಷರು, ಉಪಾಧ್ಯಕ್ಷರು, ಸ್ಥಾಯಿ ಸಮಿತಿ ಇತರ ಸಿಬ್ಬಂದಿ ಮತ್ತು ತಾಂತ್ರಿಕ ಸಿಬ್ಬಂದಿ ಸಾಮರ್ಥ್ಯ ಅಭಿವೃದ್ಧಿಯನ್ನು ನಿರಂತರವಾಗಿ ಪರಿಶೀಲಿಸಬೇಕು.

ಮೂರು ಹಂತದ ಪಂಚಾಯತ್ ವ್ಯವಸ್ಥೆಯ ಮುಖ್ಯ ಕಾರ್ಯದರ್ಶಿಗಳಿಗೆ ಅಧಿಕೃತ ವಿಶ್ವವಿದ್ಯಾಲಯದಲ್ಲಿ ೨ ವರ್ಷದ ಪಂಚಾಯತ್‌ರಾಜ್ ಕೋರ್ಸ್ ಆರಂಭಿಸಬೇಕು. ಯೋಜನೆ ಮತ್ತು ನೀತಿ–ನಿಯಮಗಳಿಗಾಗಿ ಸಲಹೆ ನೀಡಲು ಕರ್ನಾಟಕ ರಾಜ್ಯ ವಿಕೇಂದ್ರೀಕರಣ ಯೋಜನೆ ಮತ್ತು ಅಭಿವೃದ್ಧಿ ಮಂಡಳಿ ಸ್ಥಾಪಿಸಬೇಕು ಎಂದು ಸಮಿತಿ ಶಿಫಾರಸು ಮಾಡಿದೆ. ಆದರೆ ಈ ಶಿಫಾರಸುಗಳ ಬಗ್ಗೆ ಸರ್ಕಾರ ಗಮನ ನೀಡಿಲ್ಲ.

ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಉಗುರು, ಹಲ್ಲುಗಳೂ ಬೇಕು. ತಮ್ಮ ವ್ಯಾಪ್ತಿಯಲ್ಲಿನ ಅಕ್ರಮಗಳಿಗೆ ತಡೆಯೊಡ್ಡಲು ಅವುಗಳಿಗೆ ಸೂಕ್ತ ಅಧಿಕಾರ ನೀಡಬೇಕಾಗಿತ್ತು. ಇದಕ್ಕೆ ಸಂಬಂಧಿಸಿದಂತೆ ಸಮಿತಿಯೂ ಯಾವುದೇ ಶಿಫಾರಸು ಮಾಡಿಲ್ಲ. ಸರ್ಕಾರವೂ ಆ ಬಗ್ಗೆ ಆಲೋಚಿಸಿಲ್ಲ. ಜನ ಪ್ರತಿನಿಧಿಗಳು ಸರಿಯಾಗಿ ಕೆಲಸ ನಿರ್ವಹಿಸುವುದಿಲ್ಲ. ಕಾಯ್ದೆಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ತಿರುಚುತ್ತಾರೆ ಎನ್ನುವುದು ಕಳೆದ ೨೦ ವರ್ಷದ ಅನುಭವದಿಂದ ವೇದ್ಯವಾಗಿದೆ. ಇದನ್ನು ತಪ್ಪಿಸಲು ಕಠಿಣ ಕ್ರಮಗಳ ಬಗ್ಗೆ ಹೇಳಿಲ್ಲ.

ನಮ್ಮದು ಪ್ರತಿನಿಧಿಗಳ ಆಧಾರಿತ ಪ್ರಜಾಪ್ರಭುತ್ವ ವ್ಯವಸ್ಥೆಯಾದರೂ ಗ್ರಾಮ ಪಂಚಾಯಿತಿ ಅಧ್ಯಕ್ಷರು ನೇರ ಚುನಾವಣೆಯಲ್ಲಿ ಆಯ್ಕೆಯಾಗಿದ್ದರೆ ಅವರು ಜನರಿಗೆ ಉತ್ತರದಾಯಿಯಾಗುತ್ತಿದ್ದರು. ನೇರ ಚುನಾವಣೆ ವ್ಯವಸ್ಥೆ ಜಾರಿಗೆ ಬಂದರೆ ಪಾಳೇಗಾರಿಕೆ ಮತ್ತೆ ಶುರುವಾಗುತ್ತದೆ ಎಂದು ರಮೇಶಕುಮಾರ್ ಹೇಳಿದ್ದಾರೆ. ಈ ಬಗ್ಗೆ ಇನ್ನಷ್ಟು ಚರ್ಚೆ ಅಗತ್ಯವಾಗಿದೆ.

ಪಂಚಾಯತ್‌ರಾಜ್ ವ್ಯವಸ್ಥೆಗೆ ಈಗಲೂ ಪೂರ್ಣ ಪ್ರಮಾಣದ ಸ್ವಾಯತ್ತೆ ದೊರಕಿಲ್ಲ. ಆ ಬಗ್ಗೆ ಇನ್ನಷ್ಟು ಚರ್ಚೆಯಾಗಬೇಕು. ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಪಾರದರ್ಶಕತೆಗೆ ಇನ್ನಷ್ಟು ಒತ್ತು ನೀಡಬೇಕಾಗಿತ್ತು. ನಗರಕ್ಕೆ ವಲಸೆ ಹೋಗುವುದನ್ನು ತಡೆಯಲು ಏನು ಮಾಡಬಹುದು ಎಂಬುದರ ಬಗ್ಗೆಯೂ ಚರ್ಚಿಸಬಹುದಾಗಿತ್ತು. ಗ್ರಾಮೀಣ ಅರ್ಥ ವ್ಯವಸ್ಥೆ ಪುನರುಜ್ಜೀವನಗೊಳಿಸುವ ಬಗ್ಗೆ ಒಂದಿಷ್ಟು ಸಲಹೆಗಳಿದ್ದರೆ ಒಳಿತಾಗುತ್ತಿತ್ತು. ಕಾನೂನಿನ ಭಯವಿಲ್ಲದೆ ಯಾವುದೇ ಕೆಲಸವಾಗುವುದಿಲ್ಲ ಎನ್ನುವುದು ಈಗಾಗಲೇ ದೃಢಪಟ್ಟಿದೆ. ಇನ್ನಷ್ಟು ಕಠಿಣ ಕಾನೂನಿಗೆ ಶಿಫಾರಸು ಮಾಡಬಹುದಾಗಿತ್ತು.

ರಮೇಶಕುಮಾರ್ ಸಮಿತಿ ನೀಡಿದ ಪ್ರಮುಖ ಶಿಫಾರಸುಗಳು.

* ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿ ಅಧ್ಯಕ್ಷರ ಅವಧಿಯನ್ನು ೫ ವರ್ಷಕ್ಕೆ ನಿಗದಿ ಮಾಡಬೇಕು. ಅಧ್ಯಕ್ಷ ಮತ್ತು ಉಪಾಧ್ಯಕ್ಷರ ವಿರುದ್ಧ ೩೦ ತಿಂಗಳ ಒಳಗೆ ಅವಿಶ್ವಾಸ ಮಂಡನೆಗೆ ಅವಕಾಶ ಇರಬಾರದು.
* ಪಂಚಾಯಿತಿ ವ್ಯಾಪ್ತಿಯ ಜಾತಿವಾರು ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ಕಲ್ಪಿಸಬೇಕು. ೧೦ ವರ್ಷಕ್ಕೆ ಮೀಸಲಾತಿ ಬದಲಾಗಬೇಕು.
* ಮೀಸಲಾತಿ ನಿಗದಿ ಮಾಡುವ ಅಧಿಕಾರವನ್ನು ರಾಜ್ಯ ಸರ್ಕಾರದಿಂದ ರಾಜ್ಯ ಚುನಾವಣಾ ಆಯೋಗಕ್ಕೆ ನೀಡಬೇಕು.
* ಚುನಾವಣೆಯಲ್ಲಿ ಹಣದ ಹೊಳೆ ಹರಿಯುವುದನ್ನು ತಡೆಯಲು ಪ್ರಚಾರ ಮತ್ತು ಕರಪತ್ರಗಳ ವೆಚ್ಚವನ್ನು ಸರ್ಕಾರವೇ ವಹಿಸಿಕೊಳ್ಳಬೇಕು.
* ಚುನಾವಣೆ ಘೋಷಣೆಯಾದ ದಿನಾಂಕದಿಂದ ಚುನಾವಣಾ ಪ್ರಕ್ರಿಯೆ ಮುಗಿಯುವವರೆಗೆ ಮದ್ಯದಂಗಡಿಗಳನ್ನು ಬಂದ್ ಮಾಡಬೇಕು. ಮದ್ಯದಂಗಡಿ ಕೀಲಿ ಕೈ ಜಿಲ್ಲಾಧಿಕಾರಿಗಳ ವಶದಲ್ಲಿರಬೇಕು.
* ಚುನಾವಣೆ ಪ್ರಕ್ರಿಯೆ ದೀರ್ಘವಾಗಿರಬಾರದು.
* ಚುನಾವಣೆ ಮುಗಿದು ಒಂದು ತಿಂಗಳ ಒಳಗೆ ಪಂಚಾಯಿತಿ ಸದಸ್ಯರು ತಮ್ಮ ಆಸ್ತಿಯ ವಿವರವನ್ನು ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗೆ ಸಲ್ಲಿಸಬೇಕು.
* ಆಸ್ತಿ ವಿವರ ತಪ್ಪಿದ್ದರೆ ಅಥವಾ ಅನುಮಾನ ಬಂದರೆ ತಕ್ಷಣವೇ ತನಿಖೆ ನಡೆಸಿ ಸದಸ್ಯತ್ವ ರದ್ದು ಮಾಡಬೇಕು.
* ಪಂಚಾಯಿತಿ ಸದಸ್ಯರು ಪ್ರತಿ ವರ್ಷವೂ ಆಸ್ತಿ ಘೋಷಣೆ ಮಾಡಬೇಕು.
* ಪಕ್ಷಾಂತರ ನಿಷೇಧ ಕಾಯ್ದೆ ಜಾರಿಗೆ ತರಬೇಕು.
* ಜಿಲ್ಲಾ ಪಂಚಾಯಿತಿ ಅಧ್ಯಕ್ಷರಿಗೆ ರಾಜ್ಯ ಸಚಿವರ ಸ್ಥಾನಮಾನ ನೀಡಬೇಕು.
* ಜಿಲ್ಲಾ ಪಂಚಾಯಿತಿ ಅಧ್ಯಕ್ಷರಿಗೆ ತಮ್ಮ ಕೆಳಗಿನ ಅಧಿಕಾರಿಗಳ ಕುರಿತು ಗೋಪ್ಯ ವರದಿ ನೀಡುವ ಅಧಿಕಾರ ನೀಡಬೇಕು. ಗೆಜೆಟೆಡ್ ಅಧಿಕಾರಿಗಳ ಕಾರ್ಯನಿರ್ವಹಣಾ ಮೌಲ್ಯಮಾಪನ ಮಾಡುವ ಅಧಿಕಾರ ನೀಡಬೇಕು.
* ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ ಹುದ್ದೆಗೆ ಐಎಎಸ್ ಅಧಿಕಾರಿಯನ್ನೇ ನೇಮಿಸಬೇಕು.
* ಜಿಲ್ಲಾ ಯೋಜನಾ ಸಮಿತಿಯಂತೆ ತಾಲ್ಲೂಕು ಯೋಜನಾ ಸಮಿತಿ ರಚಿಸಬೇಕು.
* ನಗರ ಮತ್ತು ಗ್ರಾಮಗಳ ಅಭಿವೃದ್ಧಿಗೆ ಪೂರಕವಾಗಿ ಯೋಜನಾ ಮಂಡಳಿಯ ಕೆಲಸವನ್ನು ವಿಕೇಂದ್ರೀಕರಣಗೊಳಿಸಬೇಕು.
* ಗ್ರಾಮಸಭೆ, ಮಹಿಳಾ ಗ್ರಾಮ ಸಭೆ, ಮಕ್ಕಳ ಗ್ರಾಮಸಭೆ ಮತ್ತು ವಾರ್ಡ್ ಸಭೆ ನಿಯಮಿತವಾಗಿ ನಡೆಯಬೇಕು.
* ವಾರ್ಷಿಕ ಲೆಕ್ಕಪರಿಶೋಧನೆ ಕಡ್ಡಾಯಗೊಳಿಸಬೇಕು. ಇದನ್ನು ಪಾಲಿಸದ ಅಧ್ಯಕ್ಷರನ್ನು ವಜಾ ಮಾಡಲು ಅವಕಾಶ ಇರಬೇಕು.
* ಪಂಚಾಯಿತಿಗಳ ಅವಧಿ ಪೂರ್ಣಗೊಳ್ಳುವ ೩ ಅಥವಾ ೬ ತಿಂಗಳ ಮೊದಲೇ ಚುನಾವಣೆ ನಡೆಯಬೇಕು. ವಿಜೇತ ಅಭ್ಯರ್ಥಿಗಳು ಆಡಳಿತ ತರಬೇತಿ ಪಡೆಯಲು ಅವಕಾಶ ಇರಬೇಕು.

ಇದರಲ್ಲಿ ಗ್ರಾಮ ಪಂಚಾಯಿತಿ ಅಧ್ಯಕ್ಷ, ಉಪಾಧ್ಯಕ್ಷರ ಅವಧಿಯನ್ನು ೫ ವರ್ಷಕ್ಕೆ ಏರಿಸಿ ರಾಜ್ಯ ಸರ್ಕಾರ ಕಾನೂನಿಗೆ ತಿದ್ದುಪಡಿ ತಂದಿದೆ. ಅವಿಶ್ವಾಸ ನಿರ್ಣಯಕ್ಕೆ ಕುರಿತ ಶಿಫಾರಸನ್ನೂ ಕಾಯ್ದೆಯಲ್ಲಿ ಸೇರಿಸಿದೆ. ಆದರೆ ಇತರ ಶಿಫಾರಸುಗಳು ಸದ್ಯಕ್ಕೆ ಹಿಂದೆ ಸರಿದಿವೆ.

ಮತದಾನವನ್ನು ಕಡ್ಡಾಯಗೊಳಿಸಲಾಗಿದೆ. ಆದರೆ ಮತದಾನ ಮಾಡದೇ ಇದ್ದರೆ ಕ್ರಮ ಏನು ಎನ್ನುವ ಬಗ್ಗೆ ಇನ್ನೂ ಗೊಂದಲವಿದೆ. ಗ್ರಾಮ ಪಂಚಾಯಿತಿಗಳು ಸ್ವಾವಲಂಬಿಯಾಗಬೇಕಾದರೆ ಅವುಗಳಿಗೆ ಇನ್ನಷ್ಟು ಅಧಿಕಾರ ನೀಡಬೇಕು. ಆದರೆ ಅಧಿಕಾರ ಕೊಡಲು ಮೇಲಿನವರಿಗೆ ಇಷ್ಟ ಇಲ್ಲ.

**ಸೂರ್ಯದೇವ**
ನಂ. ೧೫, ಪೈಪ್‌ಲೈನ್ ರಸ್ತೆ, ವೈಯ್ಯಾಲಿಕಾವಲ್, ಬೆಂಗಳೂರು – ೫೬೦ ೦೦೩



# ಅರ್ಧಚಂದ್ರ ಒದಗಿಸುವ ಅವಕಾಶ

**ಸಾ**ಮಾನ್ಯವಾಗಿ ರೇಖಾಚಂದ್ರ ಅಥವಾ ಅರ್ಧಚಂದ್ರ – ಈ ಎರಡೂ ಸಂಜೆಯಲ್ಲಿ ಕಾಣುವುದರಿಂದ ಯಾವುದೇ ವೀಕ್ಷಣಾ ಚಟುವಟಿಕೆಗಳು ಇದಕ್ಕೆ ಸಂಬಂಧಿಸಿದ್ದಾದರೆ ಹೆಚ್ಚಿನ ಜನ ನೋಡಬಹುದು. ಅದಕ್ಕೆ ಒಂದು ಒಳ್ಳೆಯ ಅವಕಾಶ ಈ ತಿಂಗಳು ಒದಗಿದೆ. 10ರ ಬೆಳಗಿನ ಜಾವ (ಆರು ಗಂಟೆಯಾದರೂ ಸರಿ) ಅರ್ಧಚಂದ್ರ ನೆತ್ತಿಯ ಮೇಲೆಯೇ ಕಾಣುತ್ತದೆ. ಅದನ್ನು ಕ್ಯಾಮೆರಾದಲ್ಲಿ ಚಿತ್ರೀಕರಿಸಿ. ನಿಮ್ಮ ಕ್ಯಾಮರಾ ಒದಗಿಸುವ ಅತಿ ಹೆಚ್ಚಿನ ಝೂಮ್ ಬಳಸಬೇಕಾಗಬಹುದು. ಪುನಃ 24ರಂದು ಸಂಜೆ ಅರ್ಧಚಂದ್ರನ ಚಿತ್ರ ತೆಗೆಯಿರಿ. ಅದೇ ಕ್ಯಾಮೆರಾ ಅದೇ ಝೂಮ್ ಬಳಸಿ. ಈ ಎರಡೂ ಚಿತ್ರಗಳನ್ನು ಹೋಲಿಸಿದಲ್ಲಿ ಸಣ್ಣ ವ್ಯತ್ಯಾಸ ಕಂಡುಬರುವುದು. ಚಂದ್ರನ ದೂರ ಈ ದಿನಗಳಲ್ಲಿ ಗರಿಷ್ಠ ಮತ್ತು ಕನಿಷ್ಠವಾಗುವುದರಿಂದ ಈ ವ್ಯತ್ಯಾಸ ಕಂಡುಬರುತ್ತದೆ. ಅಂದರೆ ಅದು ದೀರ್ಘವೃತ್ತದ ಕಕ್ಷೆಯಲ್ಲಿ ಚಲಿಸುತ್ತದೆಂದು ಸಾಬೀತುಪಡಿಸಿದಂತಾಗುವುದು.

ಪ್ರತಿ ತಿಂಗಳಲ್ಲಿಯೂ ಹೀಗೆ ಗರಿಷ್ಠ ಮತ್ತು ಕನಿಷ್ಠ ದೂರಗಳ ದಿನಗಳು ಇರುತ್ತವೆ. ಆದರೆ, ಈ ತಿಂಗಳಲ್ಲಿ ಅವು ಅರ್ಧಚಂದ್ರದ ಹತ್ತಿರ ಅಂದರೆ ಚಾಂದ್ರಮಾಸದ ಮೊದಲ ಮತ್ತು ಕೊನೆಯ ಪಾದಗಳಲ್ಲಿ ನಡೆಯುತ್ತಿರುವುದರಿಂದ ಈ ಅವಕಾಶವಿದೆ. ಚಂದ್ರ ಬೇರೆ ಬೇರೆ ಆಕಾರಗಳಲ್ಲಿದ್ದಾಗ ಹೋಲಿಕೆ ಕಷ್ಟವಾಗುವುದು.

ಇದು ಜ್ಯೇಷ್ಠ ಮಾಸವಾದ್ದರಿಂದ ಹುಣ್ಣಿಮೆಯ ಚಂದ್ರ ಜ್ಯೇಷ್ಠಾ ನಕ್ಷತ್ರದ ಬಳಿ ಇರುವುದು. ಹುಣ್ಣಿಮೆಯ ಹಿಂದಿನ ರಾತ್ರಿ (ಒಂದನೆಯ ತಾರೀಖು) ಚಂದ್ರದ ಪಕ್ಕ ಕಾಣುವ ಚುಕ್ಕೆ ಶನಿಗ್ರಹ.

ಸಂಜೆ ಪಶ್ಚಿಮದಲ್ಲಿ ಗುರು ಮತ್ತು ಶುಕ್ರ ಒಂದನ್ನೊಂದು ಸಮೀಪಿಸುತ್ತಿರುವುದನ್ನು ಕಾಣಬಹುದು. 6ರಂದು ಶುಕ್ರ ಗರಿಷ್ಠ ಎತ್ತರದಲ್ಲಿರುತ್ತದೆ. ಅಂದರೆ ಸುಮಾರು ರಾತ್ರಿ ಒಂಬತ್ತರವರೆಗೂ ಕಾಣುವ ಸಾಧ್ಯತೆ ಇದೆ. ಗುರು–ಶುಕ್ರ ಹೀಗೆ ಸಮೀಪಿಸುತ್ತಾ ಜುಲೈ 1ರಂದು ಕೇವಲ ಅರ್ಧ ಡಿಗ್ರಿ ಅಂತರದಲ್ಲಿ ಕಾಣುತ್ತವೆ. ಈ ಚಲನೆಯನ್ನು ಚಿತ್ರೀಕರಿಸುವುದೂ ಒಂದು ಒಳ್ಳೆಯ ಪ್ರಯೋಗವಾಗುವುದು.


ಜುಲೈ 1 ಸಂಜೆ ಗುರು–ಶುಕ್ರ ನಡುವೆ ಅರ್ಧ ಡಿಗ್ರಿ ಅಂತರ

ಇನ್ನೊಂದು ಗ್ರಹ ಬುಧ ಬೆಳಗಿನ ಜಾವ ಕಾಣುವುದು. ತಿಂಗಳ ಮಧ್ಯಭಾಗದ ನಂತರ ಅದನ್ನು ಗುರುತಿಸುವುದು ಸಾಧ್ಯವಾಗುವುದು. 15 ರಂದು ರೇಖಾಚಂದ್ರಕ್ಕೆ ಅದು ಅಂಟಿಕೊಂಡಂತೆ ಕಾಣುವುದು. ವಾಸ್ತವದಲ್ಲಿ ಚಂದ್ರ ಅದನ್ನು ಮರೆ ಮಾಡುವ ಆಚ್ಛಾದನೆಯೂ ನಡೆಯುತ್ತದೆ. ಆದರೆ, ಅದು ನಮಗೆ ವೀಕ್ಷಣೆಗೆ ಅನುಕೂಲಕರವಾಗಿಲ್ಲ. ಹೀಗೆ ಮುಂದುವರೆಯುವ ಬುಧ 24ರಂದು ಗರಿಷ್ಠ ಎತ್ತರದಲ್ಲಿ ಕಾಣುತ್ತದೆ. ಅಂದು ಅದರ ಪಕ್ಕ ಕಾಣುವ ಕೆಂಪು ನಕ್ಷತ್ರವೇ ರೋಹಿಣಿ.

ಮಂಗಳಗ್ರಹ ಸೂರ್ಯನ ಆಚೆ ಬದಿಯಲ್ಲಿದೆ. ಈ ತಿಂಗಳು ಅದನ್ನು ನೋಡಲು ಅವಕಾಶವಿಲ್ಲ.

ಈ ತಿಂಗಳಲ್ಲಿ ಆಕಾಶ ಶುಭ್ರವಾಗಿರುವ ಸಾಧ್ಯತೆ ಕಡಿಮೆ. ಗ್ರಹಗಳ ಸಮಾಗಮಗಳನ್ನು ನೋಡುವುದು ಮಾತ್ರ ಸಾಧ್ಯವಾಗಬಹುದು. ಹಾಗೆ, ಅಪರೂಪಕ್ಕೆ ಶುಭ್ರ ಆಕಾಶ ದೊರಕಿದಲ್ಲಿ ಪ್ರಕಾಶಮಾನವಾದ ನಕ್ಷತ್ರ ಪುಂಜಗಳನ್ನು ಗುರುತಿಸಬಹುದು. ಈ ತಿಂಗಳ 21ರಂದು ದಕ್ಷಿಣಾಯನ; ಅಂದರೆ, ಅತಿ ಹೆಚ್ಚು ಅವಧಿಯ ಹಗಲಿನ ದಿನ. ಸೂರ್ಯ ಮಿಥುನರಾಶಿಯಲ್ಲಿ ಇರುವುದರಿಂದ, ಸಂಜೆ ಪಶ್ಚಿಮದ ಅಂಚಿನಲ್ಲಿ ಕಟಕ, ಅದರ ಮುಂದೆ ಸಿಂಹ, ಕನ್ಯಾ, ತುಲಾ, ವೃಶ್ಚಿಕ ಇವು ಕಾಣುತ್ತವೆ. ಸಿಂಹರಾಶಿಯಲ್ಲಿಯೇ ಮಘ ನಕ್ಷತ್ರದ ಸಮೀಪ ಗುರು ಇದೆ. ಶನಿ ವೃಶ್ಚಿಕರಾಶಿಯಲ್ಲಿದೆ. ಹೀಗೆ, ಈ ರಾಶಿಗಳನ್ನು ಗುರುತಿಸಬಹುದು. ನೆತ್ತಿಯ ಮೇಲೆ ಚಿತ್ರಾ (ಕನ್ಯಾರಾಶಿಯಲ್ಲಿ), ಸ್ವಾತಿ (ಬೂಟಿಸ್ ಅಥವಾ ಸಹದೇವ ಪುಂಜದಲ್ಲಿ) ಕಾಣುವುವು. ಉತ್ತರದಲ್ಲಿ ಸಪ್ತರ್ಷಿಮಂಡಲ ದಕ್ಷಿಣದಲ್ಲಿ ತ್ರಿಶಂಕು ಗುರುತಿಸಲು ಸುಲಭ. ಇದಲ್ಲದೆ, ದಕ್ಷಿಣದಲ್ಲಿ ಕಿನ್ನರ (ಸೆಂಟಾರೆಸ್), ದೇವನೌಕೆ (ವೇಲಾ), ಹಸ್ತ (ಕಾರ್ವಸ್), ಉತ್ತರದಲ್ಲಿ ಉರಗಧರ (ಒಫಿಯೂಕಸ್) ಮತ್ತು ಭೀಮ (ಹರ್‌ಕ್ಯುಲಸ್) ಇವೆ.

7ರ ಮುಂಜಾವಿನಲ್ಲಿ ಉಲ್ಕಾವೃಷ್ಟಿ ಕಾಣುವುದು. ಇದು ಮೇಷ ರಾಶಿಯಿಂದ ಹೊರಟಂತೆ ಕಾಣುವುದರಿಂದ ಏರಿಯೆಟಿಡ್ಸ್ ಎಂಬ ಹೆಸರಿದೆ.

**ಜೂನ್ ತಿಂಗಳ ದಿನಚರಿ**

1 ಸಂಜೆ ಶನಿ–ಚಂದ್ರ ನಡುವೆ 2 ಡಿಗ್ರಿ ಅಂತರ
2 ಹುಣ್ಣಿಮೆ 21:49ಕ್ಕೆ
6 ಸಂಜೆ ಶುಕ್ರಗ್ರಹದ ಗರಿಷ್ಠ ಕೋನೋನ್ನತಿ
9 ಚಾಂದ್ರಮಾಸದ ಕೊನೆಯ ಪಾದ
10 ಚಂದ್ರ–ಭೂಮಿ ನಡುವೆ ಕನಿಷ್ಠ ಅಂತರ
11 ಬುಧಗ್ರಹದ ಹಿನ್ನಡೆ ಮುಕ್ತಾಯ
15 ಬುಧ–ಚಂದ್ರ ಜೋಡಿ – ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ
16 ಅಮಾವಾಸ್ಯೆ 19:35ಕ್ಕೆ
20 ಸಂಜೆ ಶುಕ್ರ–ಗುರು–ಚಂದ್ರ ಸಣ್ಣ ಗುಂಪು
21 ದಕ್ಷಿಣಾಯನ 22:08ಕ್ಕೆ
23 ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ
24 ಮುಂಜಾವು ಬುಧ–ರೋಹಿಣಿ ನಡುವೆ 2 ಡಿಗ್ರಿ ಅಂತರ; ಬುಧ ಗ್ರಹದ ಗರಿಷ್ಠ ಕೋನೋನ್ನತಿ; ಚಾಂದ್ರಮಾಸದ ಮೊದಲಪಾದ
29 ಶನಿ–ಚಂದ್ರ ನಡುವೆ 2 ಡಿಗ್ರಿ ಅಂತರ

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೧

ಜಿ. ಗಂಗರಾಜು

# ‘ಆದಿಪುರಾಣ’ದಲ್ಲಿ ಸ್ತ್ರೀ ಪಾತ್ರ ಚಿತ್ರಣ: ಸುಮಿತ್ರಾಬಾಯಿ ವಿಶ್ಲೇಷಣೆ

ಕನ್ನಡದಲ್ಲಿ ಇಂದು ‘ಮಹಿಳಾ ಸಾಹಿತ್ಯ ವಿಮರ್ಶೆ’ ಒಂದು ಮುಖ್ಯವಾದ ಪರಂಪರೆಯಾಗಿ ಆಕಾರ ಪಡೆದಿದೆ. ಈ ದೃಷ್ಟಿಯಿಂದ, ಪಾಶ್ಚಾತ್ಯ ‘ಸ್ತ್ರೀವಾದಿ ಚಿಂತನೆ’ ಮತ್ತು ‘ಸ್ತ್ರೀವಾದಿ ವಿಮರ್ಶೆ’ಗಳು ಬೀರಿದ ಪ್ರಭಾವ ಬಹಳ ಮಹತ್ವವಾದದ್ದು. ಆದರೆ ಬಹು ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ, ಪಾಶ್ಚಾತ್ಯ ‘ಸ್ತ್ರೀವಾದ’ ಮತ್ತು ‘ಸ್ತ್ರೀವಾದಿ ವಿಮರ್ಶೆ’ಗಳು ತೀವ್ರವಾಗಿ ಕನ್ನಡ ಸಾಹಿತ್ಯ ವಿಮರ್ಶೆಯನ್ನು ಪ್ರಭಾವಿಸುವುದಕ್ಕಿಂತ ಮೊದಲೇ ಕನ್ನಡದಲ್ಲಿ ಗಟ್ಟಿಯಾದ ಮಹಿಳಾ ವಿಮರ್ಶಾ ಕ್ರಮವೊಂದನ್ನು ರೂಪಿಸುವ ಪ್ರಯತ್ನಗಳು ಗಂಭೀರವಾಗಿ ನಡೆದಿದ್ದವು ಎನ್ನುವುದು. ಕನ್ನಡ ಸಾಹಿತ್ಯ, ಸಂಸ್ಕೃತ ಸಾಹಿತ್ಯ, ಭಾರತೀಯ ಸಾಹಿತ್ಯ ಮತ್ತು ಪಾಶ್ಚಾತ್ಯ ಸಾಹಿತ್ಯಗಳ ಆಳವಾದ ಅಧ್ಯಯನದ ಮೂಲಕ ಕನ್ನಡ ಸಾಹಿತ್ಯ ಪರಂಪರೆ ಮತ್ತು ಪಠ್ಯಗಳನ್ನು ವಿಶ್ಲೇಷಿಸುವ, ಅರ್ಥೈಸುವ ಹಾಗೂ ವ್ಯಾಖ್ಯಾನಿಸುವ ಪ್ರಯತ್ನಗಳು ಅತ್ಯಂತ ಕಡಿಮೆ ಪ್ರಮಾಣದಲ್ಲಿಯಾದರೂ, ಬಹು ಗಂಭೀರ ಸ್ವರೂಪದಲ್ಲಿ ಆರಂಭವಾಗಿದ್ದವು. ‘ಸ್ತ್ರೀವಾದಿ ಚಿಂತನೆ’ ಮತ್ತು ‘ಸ್ತ್ರೀವಾದಿ ವಿಮರ್ಶಾ ರೂಪಗಳ’ ಪ್ರವರ್ಧಮಾನವು ಈ ಪ್ರಯತ್ನಗಳಿಗೆ ಹೊಸ ದಿಕ್ಕು ಹಾಗೂ ನೆಲೆಗಳನ್ನು ಕಲ್ಪಿಸಿದವು.

ಕನ್ನಡ ಮಹಿಳಾ ಸಾಹಿತ್ಯ ವಿಮರ್ಶೆಯ ಈ ಎರಡೂ ವಿದ್ಯಮಾನಗಳಿಗೆ ಒಂದು ಅತ್ಯುತ್ತಮ ನಿದರ್ಶನವೆಂದರೆ ಬಿ. ಎನ್. ಸುಮಿತ್ರಾಬಾಯಿ ಅವರ ಬರಹಗಳು. ಕನ್ನಡದ ಸ್ತ್ರೀವಾದಿ ಪೂರ್ವ ಮತ್ತು ಸ್ತ್ರೀವಾದಿ ಕಾಲಘಟ್ಟದ ಮಹಿಳಾ ವಿಮರ್ಶೆಯ ಸ್ವರೂಪವನ್ನು ಇವರ ‘ಸಾರ್ವತ್ರಿಕದೆಡೆಗೆ’ (೧೯೮೭), ‘ವಿಚಯ’ (೧೯೯೫) ಮತ್ತು ‘ಅಯನ’ (೧೯೯೫) ವಿಮರ್ಶಾ ಕೃತಿಗಳು ಸ್ಪಷ್ಟವಾಗಿ ನಿರೂಪಿಸುತ್ತವೆ. ಅವರ ವಿಮರ್ಶಾ ಬರವಣಿಗೆಯ ಆಯ್ದ ಲೇಖನಗಳ ಪ್ರಾತಿನಿಧಿಕ ಸಂಕಲನವಾದ ‘ಸರಹದ್ದುಗಳ ಆಚೆ–ಈಚೆ’ (೨೦೦೯) ಕೃತಿಯು ಕನ್ನಡ ವಿಮರ್ಶಾ ಪರಂಪರೆಯ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾದ ಕೆಲವು ಲೇಖನಗಳನ್ನು ಒಳಗೊಂಡಿದೆ.

ಪಂಪನ ‘ಆದಿಪುರಾಣ’ವು ಅದು ರಚನೆಯಾದ ಕಾಲದಿಂದ ಬಹು ಇತ್ತೀಚಿನವರೆಗೂ, ನಿರ್ದಿಷ್ಟವಾಗಿ ಹೇಳುವುದಾದರೆ ಕನ್ನಡದಲ್ಲಿ ‘ಸ್ತ್ರೀವಾದಿ’ ಹಾಗೂ ‘ಸಾಂಸ್ಕೃತಿಕ ವಿಮರ್ಶಾ’ ಪ್ರಕಾರಗಳು ಮುನ್ನೆಲೆಗೆ ಬರುವವರೆಗೂ, ‘ಧಾರ್ಮಿಕ ಕೃತಿ’ ಅಥವಾ ‘ಅಲೌಕಿಕ ಕಾವ್ಯ’ವೆಂದೇ ಪ್ರಸಿದ್ಧವಾಗಿತ್ತು. ಕವಿ ಯಾವುದೋ ಒಂದು ನಿರ್ದಿಷ್ಟವಾದ ಚಾರಿತ್ರಿಕವೋ, ಧಾರ್ಮಿಕವೋ ಅಥವಾ ಸಾಹಿತ್ಯಕವೋ ಆದ ಕಾರಣಗಳ ಒತ್ತಡದಿಂದ ಮತ್ತು ತನ್ನ ಸಾಹಿತ್ಯ ರಚನಾನುಕೂಲತೆಯ ದೃಷ್ಟಿಯಿಂದ ಮಾಡಿಕೊಂಡಿರುವ ಒಂದು ತಾಂತ್ರಿಕ ಅವಸ್ಥಾ ರೂಪವನ್ನು ಸಾವಿರಾರು ವರ್ಷಗಳವರೆಗೂ ಹೀಗೆ ಪ್ರಶ್ನಾತೀತವಾಗಿ ಅಬಾಧಿತ ರೂಪದಲ್ಲಿ ಒಪ್ಪಿಕೊಂಡು ಬಂದದ್ದು ನಿಜಕ್ಕೂ ಸೋಜಿಗದ ವಿಷಯವೇ. ಇದಕ್ಕೆ ಏನೇ ಕಾರಣಗಳಿರಬಹುದಾದರೂ, ಕನ್ನಡ ಸಾಂಸ್ಕೃತಿಕ ವಿಮರ್ಶಾ ರೂಪಗಳ ಸಾಮಾಜಿಕ ಅನುಸಂಧಾನ ವಿದ್ಯಮಾನ ಮೊಟ್ಟ ಮೊದಲಬಾರಿಗೆ ಈ ಕವಿ ಪ್ರತಿಪಾದಿತ ಮತ್ತು ಪರಂಪರೆ ಅನುಪಾಲಿತ ವಿಭಜನಾಕ್ರಮವನ್ನು ತೀವ್ರವಾಗಿ ಪ್ರಶ್ನಿಸಿತು ಎನ್ನುವುದು ಗಮನಾರ್ಹ ವಿಚಾರ.

ಈ ಮೇಲಿನ ಸಂಗತಿಗಳ ಹಿನ್ನೆಲೆಯಲ್ಲಿ, ಸುಮಿತ್ರಾಬಾಯಿ ಅವರ ‘ಆದಿಪುರಾಣದಲ್ಲಿ ಸ್ತ್ರೀ ಪ್ರಪಂಚದ ಬಳಕೆ’ (ಸರಹದ್ದುಗಳ ಆಚೆ–ಈಚೆ, ೨೦೦೯) ಲೇಖನವು ಒಂದು ಅತ್ಯಂತ ಮಹತ್ವಪೂರ್ಣವಾದ ಬರವಣಿಗೆಯಾಗಿದೆ.

**ಮೋಕ್ಷಸಾಧನಾ ಮಾಧ್ಯಮದ ದೇಹ ಪ್ರಧಾನ ನೆಲೆ**

ಪಂಪ ಮೂಲತಃ ಸಂಸ್ಕೃತ ಶಿಷ್ಟ ಕಾವ್ಯ ಪರಂಪರೆಯಿಂದ ಆಳವಾದ ಪ್ರಭಾವ ಪಡೆದರೂ ಅರ್ಥಪೂರ್ಣವಾದ ಪ್ರಾದೇಶಿಕ ಸತ್ವವನ್ನು ಸಾಧಿಸಿದ ಕವಿ. ಆದರೆ, ಆತನ ಕಾವ್ಯದಲ್ಲಿನ ಮಹಿಳಾ ದೃಷ್ಟಿಕೋನದಲ್ಲಿ ಈ ‘ಪ್ರಾದೇಶಿಕ ಸಂಸ್ಕೃತಿ’ಯ ಎಂದರೆ ‘ದ್ರಾವಿಡ ಸಂಸ್ಕೃತಿ’ಯ ಮೌಲ್ಯಗಳು ವ್ಯಕ್ತವಾಗಿಲ್ಲ. ಸಂಸ್ಕೃತದ ಶಿಷ್ಟ ಕಾವ್ಯ ಪರಂಪರೆಯ ಸಾಂಪ್ರದಾಯಿಕ ಸ್ತ್ರೀ ಧೋರಣೆಯೇ ಪ್ರಧಾನವಾಗಿ ಪಡಿಮೂಡಿದೆ. ಹೀಗಾಗಿ, ‘ಜೆಂಡರ್’ ಅಧ್ಯಯನದ ದೃಷ್ಟಿಕೋನದಿಂದ ಪಂಪನ ಕಾವ್ಯದ ಸ್ತ್ರೀಪಾತ್ರ ಚಿತ್ರಣದ ವಿಶ್ಲೇಷಣೆಗೆ ಹೆಚ್ಚು




ಪಂಪ ಮೂಲತಃ ಸಂಸ್ಕೃತ ಶಿಷ್ಟ ಕಾವ್ಯ ಪರಂಪರೆಯಿಂದ ಆಳವಾದ ಪ್ರಭಾವ ಪಡೆದರೂ ಅರ್ಥಪೂರ್ಣವಾದ ಪ್ರಾದೇಶಿಕ ಸತ್ವವನ್ನು ಸಾಧಿಸಿದ ಕವಿ. ಆದರೆ, ಆತನ ಕಾವ್ಯದಲ್ಲಿನ ಮಹಿಳಾ ದೃಷ್ಟಿಕೋನದಲ್ಲಿ ಈ ‘ಪ್ರಾದೇಶಿಕ ಸಂಸ್ಕೃತಿ’ಯ ಎಂದರೆ ‘ದ್ರಾವಿಡ ಸಂಸ್ಕೃತಿ’ಯ ಮೌಲ್ಯಗಳು ವ್ಯಕ್ತವಾಗಿಲ್ಲ. ಸಂಸ್ಕೃತದ ಶಿಷ್ಟ ಕಾವ್ಯ ಪರಂಪರೆಯ ಸಾಂಪ್ರದಾಯಿಕ ಸ್ತ್ರೀ ಧೋರಣೆಯೇ ಪ್ರಧಾನವಾಗಿ ಪಡಿಮೂಡಿದೆ.

ಉಪಯುಕ್ತತೆ ಇಲ್ಲವೆಂದು ಸುಮಿತ್ರಾಬಾಯಿ ಅವರು ತಮ್ಮ ಪ್ರಬಂಧದ ಪ್ರಾರಂಭದಲ್ಲೇ ಸ್ಪಷ್ಟಪಡಿಸುತ್ತಾರೆ. ಆದರೆ, ಆದಿಪುರಾಣದಲ್ಲಿ 'ವಿಲಕ್ಷಣವೆನ್ನುವಂತಹ ಆದ್ಯತೆಯೊಂದು ಸ್ತ್ರೀ ಪ್ರಪಂಚದ ಸೃಷ್ಟಿಯಲ್ಲೂ ಬಳಕೆಯಲ್ಲೂ ಇದೆ' ಎಂದು ಹೇಳುತ್ತಾರೆ. ಇದು ಈ ಕೃತಿಯಲ್ಲಿನ ಸ್ತ್ರೀಪಾತ್ರ ಚಿತ್ರಣ, ಕಾವ್ಯ ಪ್ರಸಂಗಗಳು ಮತ್ತು ಸನ್ನಿವೇಶಗಳ ವರ್ಣನೆಯಲ್ಲಿ ಸ್ತ್ರೀಯರು ಹಾಗೂ ಸ್ತ್ರೀಲೋಕದ ವಿವರಗಳನ್ನು ನಿರೂಪಿಸಿರುವ ಕ್ರಮದ ಸಾಮಾನ್ಯ ಸ್ವರೂಪವೇ ಆಗಿದೆ ಎಂದು ಅಭಿಪ್ರಾಯ ಪಡುತ್ತಾರೆ.

ವಿಮರ್ಶಕಿ, 'ಆದಿಪುರಾಣ'ದ ಸ್ತ್ರೀಪಾತ್ರ ಚಿತ್ರಣದ ಈ ಸ್ವರೂಪವನ್ನು ಸ್ತ್ರೀ ಪ್ರಪಂಚದ 'ಸೃಷ್ಟಿ' ಮತ್ತು ಅದರ 'ಬಳಕೆ' ಎನ್ನುವ ಎರಡು ಮುಖ್ಯ ಪರಿಕಲ್ಪನೆಗಳ ಮೂಲಕ ಗುರುತಿಸುತ್ತಾರೆ. ಮೇಲ್ನೋಟಕ್ಕೆ ಇವು 'ವಾಣಿಜ್ಯ' ಅಥವಾ 'ಸರಕು ಸಂಸ್ಕೃತಿ'ಯ ವಸ್ತುವಿನ 'ಉತ್ಪಾದನೆ' ಮತ್ತು ಅದರ 'ಉಪಯೋಗ'ದ ಭೌತಿಕ ನೆಲೆಯ ಪರಿಕಲ್ಪನೆಗಳಿಗೆ ಸಂವಾದಿಯಾದವುಗಳು. ಕಾವ್ಯದ ವಿಶ್ಲೇಷಣೆಯಲ್ಲಿ ವಿಮರ್ಶಕಿ ಮಾಡುತ್ತಾ ಹೋಗಿರುವ ಚರ್ಚೆಯ ಸ್ವರೂಪವನ್ನು ಗಮನಿಸುತ್ತಾ ಬಂದಂತೆ, 'ಧರ್ಮ' ಕೂಡ ಮಹಿಳೆಯ ಭೌತಿಕ ಬಳಕೆಯ ನೆಲೆಯಲ್ಲಿ ಪ್ರಧಾನವಾಗಿ 'ಸರಕು' ಅಥವಾ 'ವಾಣಿಜ್ಯ ಸಂಸ್ಕೃತಿ'ಯ ಪರಿಭಾಷೆ ಮತ್ತು ದೃಷ್ಟಿಕೋನಗಳನ್ನೇ ಅಚಲವಾಗಿ ಪಾಲಿಸಿಕೊಂಡು ಬಂದಿರುವುದನ್ನು ಅವರು ಸ್ಪಷ್ಟಪಡಿಸುತ್ತಾ ಹೋಗುತ್ತಾರೆ ಎನ್ನುವುದು ಮನದಟ್ಟಾಗುತ್ತದೆ. ಈ ಹಿನ್ನೆಲೆಯಲ್ಲಿ, ಈ ಲೇಖನದ ಈ ಪರಿಕಲ್ಪನೆಗಳ ಬಳಕೆಯ ಔಚಿತ್ಯ ಕುರಿತು ಡಿ. ಎಸ್. ನಾಗಭೂಷಣ (ಅರುಹು-ಕುರುಹು: ಏಪ್ರಿಲ್-ಜೂನ್ ೨೦೧೨) ಅವರು ಎತ್ತುವ ಪ್ರಶ್ನೆಗಳಿಗೆ ಸುಮಿತ್ರಾಬಾಯಿ ಅವರ ವಿಶ್ಲೇಷಣೆಯ ಕ್ರಮದಲ್ಲೇ ಉತ್ತರಗಳಿವೆ.

ಈ ಲೇಖನದಲ್ಲಿ ವಿಮರ್ಶಕಿ, ಸ್ತ್ರೀವಾದಿ ಚಿಂತನೆಯ 'ಜೆಂಡರ್' ಅಧ್ಯಯನ ವಿಧಾನವೊಂದನ್ನೇ ಪ್ರಧಾನವಾಗಿ ಅವಲಂಬಿಸುವುದಿಲ್ಲ. ಇದರೊಂದಿಗೆ, ಚಾರಿತ್ರಿಕ ಅವಲೋಕನದ ಹೊರನೆಲೆ ವಿಧಾನ ಮತ್ತು ಸಾಹಿತ್ಯ ಪರಂಪರೆಯಾಧರಿತ ಆಂತರಿಕ ತೌಲನಿಕ ನೆಲೆ ವಿಧಾನಗಳನ್ನು ಸಹ ಸಂದರ್ಭೋಚಿತವಾಗಿ ಮೇಳೈಸುವ ಅಥವಾ ಪ್ರತ್ಯೇಕವಾಗಿ ಬಳಸುವ ವಿಧಾನವನ್ನು ಅನುಸರಿಸುತ್ತಾರೆ. ಹೀಗಾಗಿಯೇ ಅವರು, 'ಆದಿಪುರಾಣ'ದ ಸ್ತ್ರೀಪಾತ್ರ ಚಿತ್ರಣ, ಸ್ತ್ರೀಲೋಕದ ವಿವರಗಳ ಬಳಕೆ ಮತ್ತು ನಿರೂಪಣೆಯಲ್ಲಿ ಕಾವ್ಯದ ವಸ್ತು, ಸಂದರ್ಭ ಹಾಗೂ ಸನ್ನಿವೇಶಗಳಿಗೆ ಅಗತ್ಯವಾಗಿರಲಿ ಅಥವಾ ಇಲ್ಲದಿರಲಿ ಪಂಪ ಹೆಣ್ಣನ್ನು ಪ್ರಧಾನವಾಗಿ ದೇಹ ಪ್ರಧಾನ ನೆಲೆಯಲ್ಲಿ ಚಿತ್ರಿಸುತ್ತಾ ಹೋಗುತ್ತಾನೆ, ಎಂದಿದ್ದಾರೆ. ಇದಕ್ಕೆ ಪಂಪ ಸಂಸ್ಕೃತ ಶಿಷ್ಟ ಕಾವ್ಯದ ಅವನತಶೀಲ ಕಾಲಘಟ್ಟದ ಪ್ರಮುಖ ಕವಿಯಾದ ಮಾಘ ಹೆಣ್ಣನ್ನು ಕುರಿತು ಹೊಂದಿದ್ದ ಸಾಂಪ್ರದಾಯಿಕ ಭೌತಿಕ ಆಸಕ್ತಿಯ ದೃಷ್ಟಿಕೋನಗಳಿಂದ ಪ್ರಭಾವಿತನಾಗಿರುವುದು ಮತ್ತು ತನ್ನ ಸ್ವವಿವರಗಳಲ್ಲಿ ನಿರೂಪಿಸಿಕೊಂಡಿರುವಂತೆ ಶೃಂಗಾರಾಸಕ್ತ ಮನೋಭಾವದ ವ್ಯಕ್ತಿತ್ವದ ಪ್ರಧಾನ ಧೋರಣೆಯನ್ನು ಈ ಕಾವ್ಯದಲ್ಲಿ ಗಟ್ಟಿಯಾಗಿ ಅನುಸರಿಸಿರುವುದೇ ಮುಖ್ಯ ಕಾರಣವೆಂದು ವಿಶ್ಲೇಷಿಸುತ್ತಾರೆ. ಒಂದೊಮ್ಮೆ ಪಂಪ, ಸಂಸ್ಕೃತ ಶಿಷ್ಟ ಕಾವ್ಯದ ಶ್ರೇಷ್ಠ ಕವಿಯಾದ ಕಾಳಿದಾಸನ ಕಾವ್ಯ ಅಥವಾ ಕರ್ನಾಟಕ ಮೂಲದ ಮುನಿ ಜಿನಸೇನಸೂರಿಯ 'ಹರಿವಂಶ ಪುರಾಣ'ದಲ್ಲಿ ಚಿತ್ರಿಸಿರುವ 'ದ್ರಾವಿಡ ಸಂಸ್ಕೃತಿ ವಿಶಿಷ್ಟ' ಸ್ತ್ರೀ ಚಿತ್ರಣ ಮಾದರಿಗಳಿಂದ ಪ್ರಭಾವಿತನಾಗಿದ್ದಿದ್ದರೆ ಅಥವಾ ಆಸ್ಥಾನ ಪರಂಪರೆಯಿಂದ ಹೊರಗಿನ ಸ್ವತಂತ್ರ ಕವಿಯಾಗಿದ್ದಿದ್ದರೆ, ಅವರಂತೆ ತಾನೂ ಸಹ ಪ್ರಾಯಶಃ ಹೆಣ್ಣಿನ ಮನೋಪ್ರಧಾನ ಅಥವಾ ಅಂತರಂಗ ಪ್ರಧಾನ ಸ್ತ್ರೀ ಚಿತ್ರಣವನ್ನು ಕೊಡಬಹುದಿತ್ತು ಎಂದು ಅಭಿಪ್ರಾಯಪಡುತ್ತಾರೆ.

'ಆದಿಪುರಾಣ'ದ ಸ್ತ್ರೀ ಪಾತ್ರ ಚಿತ್ರಣ ಸ್ವರೂಪದ ಸಾಮಾಜಿಕ ಅನುಸಂಧಾನಕ್ಕಾಗಿ ಸುಮಿತ್ರಾಬಾಯಿ ಅವರು ಬಳಸುವ ವಿಧಾನದ ಮೂಲಕ, ಕವಿಯ ವ್ಯಕ್ತಿತ್ವ ಮತ್ತು ಬದುಕಿನ ರೀತಿಗಳು ಆತನ ಕಾವ್ಯ ಮನೋಧರ್ಮವನ್ನು ಮಾತ್ರವಲ್ಲದೆ, ಸಮಕಾಲೀನ ಸಮಾಜ ಹಾಗೂ ಸಂಸ್ಕೃತಿಯ ಸ್ವರೂಪದ ಗ್ರಹಿಕೆಗೂ




## ನೆಲ ನಗುವುದನ್ನು ಕಲಿಸಲಿ

**ಹ**ಗಲನ್ನೇ ಜಪಗೈದು
ಮಲಗಲು ಹಾತೊರೆಯುವ
ಈ ರಾತ್ರಿ
ನಾಲಾಯಕರ ಗರಡಿಯ ನಾಲಿಯಳಗೆ
ನಗು ಕಳಚಿಟ್ಟ ಕೀಂದರ ಜೋಗಿಯ ನಡಿಗೆ...
ಸಾಲು ಸಾಗುವಿಕೆಯಲಿ
ವ್ಯಾಪ್ತ ಮೊನಚಿನ ಬಿಂಬ

ಮಳೆ ಬಾರದೆ
ಬಿಕ್ಕೆಟ್ಟ ಗಲಿಕೆಯಂತೆ
ಸಂಬಂಧಗಳ ಉಡಿಯೊಳಗೆ
ಹುಡಿಯಾದ ಮಂಕುಬೂದಿ...

ಅವಳು ರಾತ್ರಿಯಾಗಿದ್ದಾಳೆ
ಹಗಲ ದಿಗಿಲಿನೊಳಗೆ
ತೊಗಲ ತಿಕ್ಕಿ ತಿಕ್ಕಿ
ತಗಣಿಗಳ ಗೂಟಕ್ಕೆ ಬಿದ್ದ ಗವಿಯಂತೆ
ರಾತ್ರಿಗೆ ಶತಾಯ ಗತಾಯ
ಬಿಲಿಯನ್‌ಗಿಂತಲೂ ಅಧಿಕ ಹುಣ್ಣುಗಳು

ಸಾಗರ ಸರೋವರಗಳು
ರಾತ್ರಿಯ ಮೊಲೆತೊಟ್ಟಿನ
ಹನಿ ಹನಿ ರಕ್ತದ ಒಗರು ನೊರೆಯಂತೆ

ಗೆದ್ದೆತ್ತಿಗೆ ಆಹುತಿಯಾದ
ನಿರ್ಜನ ಪ್ರದೇಶದ ತೊಟ್ಟಿಕ್ಕುವ ಮರದಂತೆ
ಅವಳು ಬರಸಿಡಿಲು ಬಡಿದ ಬೇಗೆ

ಹಗಲ ಕೂಗಿಗೆ
ನಕ್ಷತ್ರಗಳೆದೆ ಕೀವುಬಲಿತ ಗುಪ್ತನಗು
ಸಾವಲ್ಲೂ ನೆಲದ ಕೊರಳಿಗೆ
ಮಾಲೆಯಾಗುವ ಮಾಗಿಯ ಕಾಲ
ತೆರೆದಷ್ಟೇ ಪಿಕಳಿಸುವ
ದಢೂತಿ ಮೋಡಗಳ
ಹಸಿ ಲೇಪನ ಹೊಕ್ಕಳಿಗೆ ದಕ್ಕಲು
ನೆಲ ನಗುವುದನ್ನು ಕಲಿಯಲಿ ಕಲಿಸಲಿ...




**ಕಿರಸೂರು ಗಿರಿಯಪ್ಪ**
ಶಿಕ್ಷಕರು, ಸ. ಕಿ. ಪ್ರಾ. ಶಾಲೆ, ಗುಗಲಗಟ್ಟಿ, ಸುರಪುರ ತಾಲ್ಲೂಕು, ಯಾದಗಿರಿ ಜಿಲ್ಲೆ

ಕೂಡ ಅತ್ಯಂತ ಮುಖ್ಯವಾದ ಸಾಧನಗಳಾಗಿವೆ ಎಂದು ಪ್ರತಿಪಾದಿಸುತ್ತಾರೆ. ಹೀಗಾಗಿಯೇ, ಆದಿಪುರಾಣದ ದೇಹಪ್ರಧಾನ ಸ್ತ್ರೀ ಚಿತ್ರಣ ಕುರಿತು ವಿಶ್ಲೇಷಿಸುತ್ತಾ ಅವರು, "ಪಂಪನ ಆದಿಪುರಾಣದಲ್ಲಿ ಸ್ತ್ರೀ ಪುರುಷರ ಬದುಕಿನ ಅತ್ಯಂತ ಪರಿಪೂರ್ಣ ಸಂಬಂಧ ವಿವೇಚನೆ ಇಷ್ಟೇ ಎಂಬುದನ್ನೂ ಗಮನಿಸಬೇಕು. ವಾಸ್ತವದಲ್ಲಿ ಕನ್ನಡ ನಾಡಿನ ದ್ರಾವಿಡ ಸಂಸ್ಕೃತಿಯ ಮೂಲದಿಂದ ಆತನ ಸ್ತ್ರೀ ಪ್ರಪಂಚ ಪ್ರಭಾವಿತವಾಗಿದ್ದಿದ್ದರೆ ಅಲ್ಲಿ ಬರೀ ಹೆಣ್ಣು ಹೆಂಗಸಷ್ಟೆ ಇರುವುದು ಸಾಧ್ಯವಿರುತ್ತಿದ್ದಿಲ್ಲ. ಅಲ್ಲಿ ತಾಯಿಯೂ, ಮಗಳೂ, ಸೋದರಿಯರೂ, ಅಂಥದೇ ಸ್ಥಾನಗಳಲ್ಲಿ ವಾತ್ಸಲ್ಯ, ಭಕ್ತಿ, ಗೌರವಭಾವ ಗಳಿಂದ ನೋಡಬಲ್ಲ ಸ್ತ್ರೀ ಸೌಜನ್ಯದ ಲಕ್ಷಣವೂ ಇದ್ದೇ ಇರುತ್ತಿತ್ತು" ಎಂದು ಹೇಳುವ ಮಾತುಗಳು ಪಠ್ಯದ ಸಾಮಾಜಿಕ ಅನುಸಂಧಾನದ ಪ್ರಮುಖ ಪರಿಕಲ್ಪನೆಯಾದ 'ಲಿಂಗ ಸಂವೇದನೆ'ಗೂ 'ಸಂಸ್ಕೃತಿ ಸಂದರ್ಭ'ದ ಸ್ವರೂಪಕ್ಕೂ ಇರುವ ಸಾವಯವ ಸಂಬಂಧ ಕುರಿತು ಬೆಳಕು ಚೆಲ್ಲುತ್ತವೆ.

**ಆದಿಪುರಾಣದ ಅಂಗನೆ : ಅನುರಕ್ತಿ ಚಿತ್ರಣದ ಪರಿಕರ, ವಿರಕ್ತಿ ಪ್ರತಿಪಾದನೆಯ ಸಾಧನ ಮತ್ತು ಮೋಕ್ಷ ನಿರೂಪಣೆಯ ಪರಿಭಾಷೆ :**

ಹೆಣ್ಣಿನ ಕುರಿತ ಪಂಪನ ದೇಹಪ್ರಧಾನ ದೃಷ್ಟಿ ಕೋನವು ಇಡೀ 'ಆದಿಪುರಾಣ'ದ ತುಂಬ ಗಾಳಿ ಬೆಳಕಿನಂತೆ ಆವರಿಸಿಕೊಂಡಿದೆ. ಇದರ ಹೊರತಾಗಿ ಈ ಕಾವ್ಯಕ್ಕೆ ಹೆಣ್ಣಿನ ಕುರಿತ ಭಿನ್ನವಾದ ಮತ್ತು ಅರ್ಥಪೂರ್ಣವಾದ ಆಯಾಮಗಳಿರುವುದು ಬಹಳ ಕಡಿಮೆ ಎಂದು ಅಭಿಪ್ರಾಯಪಡುತ್ತಾ ಸುಮಿತ್ರಾಬಾಯಿ ಅವರು ಈ ವಿಚಾರವನ್ನು ಹಲವು ನೆಲೆಗಳಿಂದ ವಿವರಿಸುತ್ತಾರೆ. ಇಂಥ ಪ್ರಮುಖ ೫ ನೆಲೆಗಳನ್ನು ಇಲ್ಲಿ ಗುರುತಿಸಿಕೊಳ್ಳಲು ಸಾಧ್ಯವಿದೆ. ಅವುಗಳೆಂದರೆ : ೧. ಭೂಮಿ ಮತ್ತು ಹೆಣ್ಣಿನ ಸಮೀಕರಣ ನೆಲೆ; ೨. ವಸ್ತು ಸಂಗತಿಗಳ ಸ್ವರೂಪ ಮತ್ತು ಹೆಣ್ಣಿನ ಸ್ವಭಾವ ಸಂಯೋಜನೆ ನೆಲೆ; ೩. ಪುರುಷ ಪ್ರತಿಷ್ಠೆಯ ಪ್ರತಿಪಾದನೆ ನೆಲೆ; ೪. ವರ್ಣನೆಗಳ ಲೈಂಗಿಕೀಕರಣ ನೆಲೆ ಮತ್ತು ೫. ಮುಕ್ತಿ ನಿರೂಪಣೆಯ ಪರಿಭಾಷೆಯ ನೆಲೆ.

ಈ ನೆಲೆಗಳು ತಮ್ಮ ಸಹಜ ಸ್ವರೂಪದಲ್ಲೇ ಹೆಚ್ಚು ಸಮರ್ಪಕವಾಗಿ ವಿಮರ್ಶಕಿಯ ಪಠ್ಯದ ಸಾಮಾಜಿಕ ಅನುಸಂಧಾನ ಸ್ವರೂಪವನ್ನು ಶ್ರುತಪಡಿಸುತ್ತವೆ. ಕಾವ್ಯದ ವಿವಿಧ ಪ್ರಸಂಗ, ಸನ್ನಿವೇಶ ಮತ್ತು ಸಂದರ್ಭಗಳ ವರ್ಣನೆ, ನಿರೂಪಣೆ ಹಾಗೂ ನಿರ್ವಹಣೆಯಲ್ಲಿ ಪಂಪ ಹೆಣ್ಣಿನ ಕುರಿತು ವ್ಯಕ್ತಪಡಿಸಿರುವ ಧೋರಣೆಯನ್ನು ಮತ್ತು ಅದರ ಸಾಮಾನ್ಯ ತಾತ್ವಿಕ ಸ್ವರೂಪವನ್ನು ಕುರಿತ ವಿಮರ್ಶಕಿಯ ಗ್ರಹಿಕೆ ಏನು ಎನ್ನುವುದು ಇಷ್ಟರಿಂದಲೇ ವಿಹಿತವಾಗುತ್ತದೆ. ಆದರೆ, 'ಮುಕ್ತಿ ನಿರೂಪಣೆಯ ಪರಿಭಾಷೆಯ ನೆಲೆ' ಸಂದರ್ಭದಲ್ಲಿ ವಿಮರ್ಶಕಿಯು ಕೆ. ವಿ. ನಾರಾಯಣ ಅವರ ಪಂಪನ 'ಮುಕ್ತ್ಯಂಗನೆ' ಪರಿಕಲ್ಪನೆ ಬಗೆಗೆ ಭಿನ್ನಮತ ವ್ಯಕ್ತಪಡಿಸುವುದು ಮತ್ತು ಪರ್ಯಾಯ ಅಭಿಪ್ರಾಯವನ್ನು ಪ್ರತಿಪಾದಿಸುವುದು ಈ ಲೇಖನದ ಸಾಮಾಜಿಕ ಅನುಸಂಧಾನಕ್ಕೆ




ಹೆಚ್ಚು ಪ್ರಸ್ತುತತೆ ತಂದುಕೊಟ್ಟಿದೆ.

ಕನ್ನಡ ಸಾಂಸ್ಕೃತಿಕ ವಿಮರ್ಶೆಯ ಸಾಮಾಜಿಕ ಆಯಾಮಗಳು ವಾಗ್ವಾದ ಮೂಲದಿಂದ ಹುಟ್ಟುವ ಮತ್ತು ಬೆಳೆಯುವ ಪರಂಪರೆಗೆ ಇದೊಂದು ಮುಖ್ಯ ನಿದರ್ಶನ ಕೂಡ ಆಗಿದೆ. ಹೀಗಾಗಿ, ಇದೊಂದನ್ನು ಕುರಿತು ಇಲ್ಲಿ ಸ್ಥೂಲವಾಗಿ ವಿವೇಚಿಸಲಾಗಿದೆ.

ಆದಿಪುರಾಣದ ಮೋಕ್ಷ ನಿರೂಪಣೆಯ ಸ್ತ್ರೀರೂಪಿ ಪರಿಭಾಷೆಗಳು ಪಂಪನ ಕಾವ್ಯಗಳಲ್ಲಿ ಚಿತ್ರಿತವಾಗಿರುವ ಹೆಣ್ಣಿನ ಪರಿಕಲ್ಪನೆಯು, ಜನಪದರ ತಿರಸ್ಕಾರ ಯೋಗ್ಯ ವಸ್ತುಗಳು ಅಥವಾ ವಿಚಾರಗಳಾದ 'ಹೆಣ್ಣು, ಹೊನ್ನು ಮತ್ತು ಮಣ್ಣಿ'ನಲ್ಲಿ ಪ್ರಥಮ ಸ್ಥಾನ ಪಡೆದಿರುವ 'ಹೆಣ್ಣನ್ನೇ' ಪಂಪ ಮುಕ್ತಿ ಸಾಧನಾ ಸ್ಥಿತಿಯ ಶ್ರೇಷ್ಠಾವಸ್ಥೆಯನ್ನು ನಿರೂಪಿಸಲು ಬಳಸಿ ಕೊಂಡಿರುವುದು ಅತ್ಯಂತ ಗಮನಾರ್ಹ ಎನ್ನುವ ಕೆ.ವಿ.ಎನ್. ಅವರ ನಿಲುವನ್ನು ಸುಮಿತ್ರಾಬಾಯಿ ಅವರು ಒಪ್ಪುವುದಿಲ್ಲ. ಇದಕ್ಕೆ ತಮ್ಮ ಭಿನ್ನಮತ ವ್ಯಕ್ತಪಡಿಸುತ್ತಾ ಅವರು, "ಈ ಟಿಪ್ಪಣಿಯ ಆರಂಭದಲ್ಲಿ ಗುರುತಿಸಿದಂತೆ, ಅಪೇಕ್ಷಣೀಯ ವಸ್ತುಭಾವಗಳೆಲ್ಲ ಕಾಂತಶ್ರೀ, ಕಾಂತೆ, ಅಂಗನೆ, ವನಿತೆ ಮುಂತಾದ ಪದಗಳ ಮೂಲಕ ಸ್ತ್ರೀಭಾವವನ್ನು ಆರೋಪಿಸುವುದು ಪಂಪನ ಕಲ್ಪನೆಯಲ್ಲಿ ಹಾಸುಹೊಕ್ಕಾಗಿ ಕಾಣಿಸುತ್ತದೆ. ಹಾಗಿರುವಾಗ ಮುಕ್ತ್ಯಂಗನೆ, ಮುಕ್ತಿಶ್ರೀ, ಮುಕ್ತಿವಧೂ ಎಂಬ ಪದಗಳಿಗೆ ಪಂಪನ ಕಾವ್ಯದ ಆಶಯದೊಳಗೇ ಬೇರೆ ಅರ್ಥವಿತ್ತೆಂದು ಹೇಳುವುದು ಸುಲಭವಲ್ಲ" ಎಂದು ಅಭಿಪ್ರಾಯಪಡುತ್ತಾರೆ. ಇಷ್ಟಾದರೂ ಪಂಪ, ಕೆ.ವಿ.ಎನ್. ಅವರು ಪ್ರತಿಪಾದಿಸುವ, ಜನಪದರು ನಿರಾಕರಿಸುವ ಮತ್ತು ಜೈನ ದಿಗಂಬರ ಪಂಥ ತಿರಸ್ಕರಿಸುವುದಕ್ಕಿಂತ ಭಿನ್ನವಾದ ಪರಿಕಲ್ಪನೆಯನ್ನು ಹೊಂದಿದ್ದಾನೆ. ಅದು "ಅವನು ವೈಯಕ್ತಿಕವಾಗಿ ಸ್ತ್ರೀಯರ ಬಗ್ಗೆ ತಳೆದಂಥ ನಿಲುವು. ಇಹಲೋಕದ ಬದುಕಿಗೆ ಸ್ತ್ರೀಯರೇ ಸಾರ್ಥಕತೆ ತಂದುಕೊಡುವವರು ಎಂಬುದೇ ಆಗಿ ತೋರುತ್ತದೆ. ಅದರಲ್ಲೂ ತಾಯಿ, ಮಗಳು, ಸೋದರಿಯ ಭಾವದ ಸಾಮಾಜಿಕ ಸಂಬಂಧಗಳೊಳಗೆ ಕರಗಿಹೋಗಿರದ ಹೆಣ್ತನದ ಮೂಲ ಸಾರದಲ್ಲೇ ಹೆಣ್ಣನ್ನು ಆತ ಕಂಡಿರುವ ರೀತಿ ಕೂಡ ಈ ನಾಡಿನ ಜನಪದರ ತಿಳಿವಳಿಕೆಗಿಂತ ಭಿನ್ನವೇ ಆಗಿದೆ." ಆದರೆ ಅವನ ಕಾವ್ಯದ ರೂಪಕಗಳ ಭಾಷೆ ಹೆಣ್ಣಿನ ಕುರಿತ ಧಾರ್ಮಿಕ ಪರಂಪರೆಯ ಸಾಂಪ್ರದಾಯಿಕ ನಿಲುವನ್ನು ಅಲ್ಲಾಡಿಸುವುದೂ ಮಹತ್ವದ ವಿಚಾರವೇ ಆಗಿದೆ ಎಂದು ವಿಶ್ಲೇಷಿಸುತ್ತಾರೆ.

ಸುಮಿತ್ರಾಬಾಯಿ ಅವರು ಪಂಪನ ಹೆಣ್ಣಿನ ಪರಿಕಲ್ಪನೆಯನ್ನು ಹೀಗೆ ವೈಯಕ್ತಿಕ ಮತ್ತು ಕಾವ್ಯಾಶಯಾತ್ಮಕ ಎಂದು ವಿಭಜಿಸುವುದು ಕವಿ ಹಾಗೂ ಪಠ್ಯದ ಅನುಸಂಧಾನಕ್ಕಾಗಿ ಅವರು ಅನುಸರಿಸುವ ವಿಧಾನಗಳು ರೂಪಿಸುವ ತಾತ್ವಿಕತೆಯಿಂದ ಹುಟ್ಟಿದ್ದಾಗಿದೆ. ಅಂದರೆ, ಹೆಣ್ಣಿನ ಕುರಿತಾದ ಕವಿಯ 'ಗಂಡುನೋಟ'ದ ವಿರುದ್ಧ ರೂಪಿಸಿಕೊಂಡಿರುವ 'ಹೆಣ್ಣುನೋಟ'ದ ಪ್ರಜ್ಞೆಯಾಗಿದೆ. ಹೀಗಾಗಿ, ಅವರು ಪಂಪನ ಆದಿಪುರಾಣ ಪಠ್ಯದಲ್ಲಿ ಸಮಾಜ ಮತ್ತು ಸಂಸ್ಕೃತಿನಿಷ್ಠ ನೆಲೆಯಲ್ಲಿ ರೂಪುಗೊಂಡಿರುವ ಹೆಣ್ಣಿನ ಚಿತ್ರ ಹಾಗೂ ಚಿತ್ರಣಗಳನ್ನು ಹುಡುಕುವಂತೆ ಮಾಡಿದೆ.

ಇದಕ್ಕೆ ಬದಲಾಗಿ ಕೆ.ವಿ.ಎನ್. ಅವರು, ಪಠ್ಯದ ವಸ್ತುನಿಷ್ಠ ಅಥವಾ ವಿವರ ನಿರೂಪಿತ ವಿಧಾನ ಅವಲಂಬಿಸುವುದರಿಂದ, ಕವಿಯ ಹೆಣ್ಣಿನ ಕುರಿತಾದ 'ಗಂಡುನೋಟ'ಕ್ಕೆ ಅನುರೂಪವಾದ 'ಗಂಡುನೋಟ' ದಲ್ಲೇ ಹೆಣ್ಣಿನ ಚಿತ್ರ ಹಾಗೂ ಚಿತ್ರಣವನ್ನು ವಿಶಿಷ್ಟವಾಗಿ ಗುರುತಿಸುತ್ತಾರೆ.

ಆದಿಪುರಾಣದ ಸ್ತ್ರೀ ಪಾತ್ರ ಚಿತ್ರಣ ಕುರಿತ ಈ ಮುಖ್ಯ ವ್ಯತ್ಯಾಸವು, ಪಠ್ಯದ ವಿಶ್ಲೇಷಣೆಯಲ್ಲಿ ಬಳಸುವ ವಿಧಾನ, ಅದು ರೂಪಿಸುವ ದೃಷ್ಟಿಕೋನ ಮತ್ತು ಇವುಗಳ ಸಮಾವಿಷ್ಟತೆಯ ಫಲಿತವಾದ ತಾತ್ವಿಕತೆಯ ಭಿನ್ನತೆಯ ಸ್ವರೂಪಕ್ಕೆ ಅತ್ಯಂತ ಸೂಕ್ತ ನಿದರ್ಶನವಾಗಿದೆ. ಕನ್ನಡದಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶಾ ವಿಧಾನ ರೂಪುಗೊಂಡು ವ್ಯಾಪಕವಾಗಿ ಮುನ್ನೆಲೆಗೆ ಬಂದಂತೆಲ್ಲಾ ಸಾಹಿತ್ಯಾತ್ಮಕ 'ವಸ್ತುನಿಷ್ಠ' ವಿಮರ್ಶಾ ವಿಧಾನದ ಮಿತಿಗಳು ಹೆಚ್ಚು ಹೆಚ್ಚು ಸ್ಪಷ್ಟವಾಗಿ ಗೋಚರಿಸುತ್ತಾ ಬರಲಾರಂಭಿಸಿದವು ಎನ್ನುವುದು ಈಗಾಗಲೇ ರುಜುವಾತಾದ ವಿಚಾರ ವಾಗಿದೆ. ಹಾಗೆಯೇ ಪ್ರಸ್ತುತ, 'ಸಾಂಸ್ಕೃತಿಕ ಸ್ತ್ರೀವಾದಿ ವಿಮರ್ಶೆ'ಯ ಸಾಂಸ್ಕೃತಿಕ ಅನುಸಂಧಾನ ವಿಧಾನ ವ್ಯಾಪಕವಾಗಿ ಪ್ರವರ್ಧಮಾನಕ್ಕೆ ಬಂದಂತೆಲ್ಲಾ, 'ಸಾಂಪ್ರದಾಯಿಕ ಸ್ತ್ರೀವಾದಿ ವಿಮರ್ಶೆ'ಯ ಸಾಮಾಜಿಕ ಅನುಸಂಧಾನ ವಿಧಾನದ ಪರಿಮಿತಿಗಳು ಬೆಳಕಿಗೆ ಬರುತ್ತಿರುವುದನ್ನು ಸಹ ಗಮನಿಸಬಹುದು.

ಈ ಮುಖ್ಯ ಸಂಗತಿಗಳ ಹಿನ್ನೆಲೆಯಲ್ಲಿ, ಬಿ. ಎನ್. ಸುಮಿತ್ರಾಬಾಯಿ ಅವರ 'ಆದಿಪುರಾಣದಲ್ಲಿ ಸ್ತ್ರೀ ಪ್ರಪಂಚದ ಬಳಕೆ' ಬರಹವು ಕನ್ನಡ ಸಾಂಸ್ಕೃತಿಕ ಸ್ತ್ರೀವಾದಿ ವಿಮರ್ಶೆಯ ಒಂದು ಅತ್ಯಂತ ಮಹತ್ವಪೂರ್ಣ ರಚನೆಯಾಗಿದೆ.

**ಜಿ. ಗಂಗರಾಜು**
ಸಹಾಯಕ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ
ಪೋಡಿಯಂ ಬ್ಲಾಕ್, ನೆಲಮಹಡಿ, ವಿಶ್ವೇಶ್ವರಯ್ಯ ಗೋಪುರ
ಡಾ॥ ಅಂಬೇಡ್ಕರ್ ವೀದಿ, ಬೆಂಗಳೂರು – ೫೬೦ ೦೦೧




# ನೀವಿರುವುದು ಸಾವಿರಾರು...

ಇಂಗ್ಲಿಷ್ ಮೂಲ : **ಪಿ. ಬಿ. ಶೆಲ್ಲಿ**
ಕನ್ನಡಕ್ಕೆ : **ವಿಠ್ಠಲ ದಳವಾಯಿ**
ಶಿಕ್ಷಕರು, ಮುಗಳಿಹಾಳ ಅಂಚೆ
ಸವದತ್ತಿ ತಾಲ್ಲೂಕು
ಬೆಳಗಾವಿ ಜಿಲ್ಲೆ – ೫೯೧ ೧೨೯

೧

ಸ್ವಾತಂತ್ರ್ಯವೆಂದರೇನು ?
ನಂಗೊತ್ತು
ಒಳ್ಳೆಯ ಗುಲಾಮಗಿರಿಯೇ ಸ್ವಾತಂತ್ರ್ಯವೆಂದು
ನೀವು ಹೇಳುವಿರಿ
ಸ್ವಾತಂತ್ರ್ಯ ಮತ್ತು ಗುಲಾಮಗಿರಿ
ಇವೆರಡು ಪದ ನಿಮ್ಮಾಳದ ದನಿಯಾಗಿ ಬೆಳೆದಿವೆ
ನಿಮ್ಮನೂ ಮೀರಿ

ಅಂದಂದಿನ ಬದುಕು ಅಂದಿಗೇ ದೂಡಲು
ದೊರೆವುದು ಬಿಡಿಗಾಸು ಹೈರಾಣು ಒಡಲು
ಪಾದಗಳ ತುಸುವೂ ಮಿಸುಕಿಸಲಾಗದ ಕೋಣೆ ನಿಮ್ಮ ತೊಟ್ಟಿಲು
ಒಡೆಯರ ದೊಡ್ಡ ವಾಡೆಯ ಹೊಸಲಿಗೆ ನೀವು ಮೆಟ್ಟಿಲು

ನೇಯ್ಗೆಯ ಮಗ್ಗ ಕೊಡಲಿ ನೇಗಿಲು ಸಲಕೆ
ನಿಮಗಾಗಿಯೇ ಮಾಡಿಸಿ ಕಳಿಸುವರು ಹೊಲಕೆ
ಮನಸಿದೆಯೋ ಇಲ್ಲವೋ ಬಾಗಬೇಕು ನೀವೇ
ಅವರ ರಕ್ಷಣೆ ಅವರ ಸೇವೆ ನಿಮ್ಮದೇ ಹೊಣೆ

ನಿಮ್ಮ ಮಕ್ಕಳು ಮತ್ತವರ ತಾಯಿಯರು
ನರಳುವರು ಸಣ್ಣಗೆ ರೋಗ, ದುಃಖದ ತವರು
ಚಳಿಗಾಳಿ ಹೀಗೆ ಜೋರಾಗಿ ಬೀಸಿದರೆ
ಹೇಳಲಾರೆ, ಸಾವೇ ಅವರ ಕೊನೆಯ ಆಸರೆ

ಹಸಿವು ನೀಗುವಷ್ಟೂ ನಿಮಗೆ ಸಿಗೋದಿಲ್ಲ ಕೂಳು
ಹಣವಂತರಿಗುಂಟು ಅವರದೆ ಬಣ್ಣದ ಬಾಳು
ಧಡಿಯ ನಾಯಿಗಳ ಮುಂದಿನ ರಾಶಿ ಅನ್ನ
ತಿನ್ನದೆ ಕಣ್ಮುಂದೆಯೇ ಸೇರುತಿದೆ ಮಣ್ಣ

ಕ್ಷೀಣವಾಗಿ ಗೊಣಗಿದರೆ ನೋವಿನಲಿ ದೂರಿದರೆ
ಸಿದ್ಧರಾಗಿ ಧಣಿಯ ದಂಡು ಎಳೆಯುವುದು ಬರೆ
ನಿಮ್ಮನೂ; ನಿಮ್ಮ ಹೆಂಡತಿ ಮಕ್ಕಳ ಮುಕ್ಕುತ
ಹುಲ್ಲ ಮೇಲೆ ಮಂಜಿನಂತೆ ಬೀಳುವುದು ರಕುತ

೨

ಹಕ್ಕಿಗಳಿಗೆ ವಿರಾಮಕ್ಕಿದೆ ಪುಟ್ಟ ಗೂಡು
ರೆಕ್ಕೆ ಮುಚ್ಚಿದರೆ ರಸಮಯ ಸಂತಸದ ಹಾಡು
ಕಾಡುಮಿಗಕೆ ಕಾನನ ಗವಿಯಲಿ ತಾವು
ಕಾಡದವಕೆ ಗಾಳಿ ಮಳೆ ಬಿಸಿಲ ಕಾವು

ನಿತ್ಯವೂ ದಣಿವಂತೆ ದುಡಿದುಡಿದು ಬಂದರೂ
ಎತ್ತು ಕುದುರೆಗೆ ಕೊಟ್ಟಿಗೆ, ಲಾಯವುಂಟು ತಂಗಲು
ಎದೆ ಬಿರಿವಂತೆ ಬಿರುಗಾಳಿ ಬೀಸಿದರೂ
ಸಾಕುನಾಯಿಗೂ ಬೆಚ್ಚನೆಯ ಬಾಗಿಲ ಸಂದಿ ಮಲಗಲು

ಕತ್ತೆ ಹಂದಿಯ ಹೆಸರೂ ಅಗುಳಿನ ಮೇಲಿದೆ
ಸಿಗುವುದು ಖಚಿತ ಅವುಗಳ ಪಾಲು ತಪ್ಪದೆ
ಚರಾಚರಕೂ ಇಲ್ಲಿ ಯಾವ ಚಿಂತೆಯಿಲ್ಲ
ಓ ಗೆಳೆಯರೆ, ನಿಮ್ಮಲ್ಲಿರುವುದೇನು ಗೊತ್ತಿಲ್ಲ

ಗುಲಾಮಗಿರಿಯ ಗುಲಾಲಿನಲಿ ಮುಳುಗಿಹೋದವರೆ
ಖೂಳ ಪ್ರಾಣಿಯೂ ಅವಮಾನವ ತಾಳದು
ಕಾಡಿನ ಕತ್ತಲೆಯಲಿ ಬಾಳು ಕಳೆದರೂ
ನಾಗರಿಕ ವ್ಯಾಧಿಗಳನ್ನೆಂದೂ ಅರಿಯದು



೩

ಆತುಮದಾಳದಲಿ ಗುಲಾಮನಾಗಿರುವುದು
ಯಾರ ಅಂಕೆಯಲ್ಲೂ ಇಲ್ಲ
ನಿಮ್ಮಿಚ್ಛೆಯಿಲ್ಲದೆ ಇತರರು
ನಿಮ್ಮನು ಆಳಾಗಿಸುವುದು ಸಲ್ಲ

ಈಗ ಮತ್ತೆ ಕುಡಿಯೊಡೆಯುವ ಸೇಡಿನ ಭಾವ
ಬಿಡದೆ ಕಾಡುವುದು ಬೆನ್ನಟ್ಟಿದಂತೆ ದಾಹ
ನೆತ್ತರಕೆ ನೆತ್ತರು, ಉತ್ತರಕೆ ಪ್ರತ್ಯುತ್ತರ
ನೀಡದಿರಿ ಬೆಳೆದಾಗ ನೀವು ಬಾನಿನೆತ್ತರ

೪

ಏಳಿ, ನಿದ್ದೆಯಿಂದೆದ್ದ ಸಿಂಹಗಳೆ
ನುಗ್ಗಿರಿ ನೆರೆ ಬಂದ ನದಿಯಂತೆ
ಎರಗಿದ ಸಂಕೋಲೆಯ ಕಿತ್ತೊಗೆಯಿರಿ
ಮರೆವಿನಲಿ ಮುಸುಕಿದ ಮಂಜು ಇದು.

ನೀವಿರುವುದು ಸಾವಿರಾರು
ಧಣಿಗಳಿರುವುದು ಹತ್ತಾರು.

*('ದಿ ಮಾಸ್ಕ್ ಆಫ್ ಅನಾರ್ಕಿ'ಯಿಂದ)*



# ಸಾಂಸ್ಕೃತಿಕ ಪ್ರಭುತ್ವ ಮತ್ತು ಭಾಷಾ ಮಾಧ್ಯಮ



**ಕನ್ನಡ ಮಾಧ್ಯಮ ಶಾಲೆ**



**ಇಂಗ್ಲಿಷ್ ಮಾಧ್ಯಮ ಶಾಲೆ**

**ಡಾ|| ಎಸ್. ಬಿ. ಜೋಗುರ**

**ಈ**ಚೆಗೆ ಸುಪ್ರೀಂ ಕೋರ್ಟ್ ತಮ್ಮ ಮಕ್ಕಳ ಶಿಕ್ಷಣ ಮಾಧ್ಯಮದ ಭಾಷೆಯ ಆಯ್ಕೆ ಪಾಲಕರದ್ದು ಎಂದು ಕರಾರುವಾಕ್ಕಾಗಿ ಹೇಳಿದೆ. ಸಹಜವಾಗಿ ನಮ್ಮ ಮಧ್ಯಮವರ್ಗದವರ ಒಲವು ಇಂಗ್ಲಿಷ್ ಭಾಷೆಯ ಕಡೆಗಿರುತ್ತದೆ. ಪರಿಣಾಮವಾಗಿ ಕನ್ನಡದಂಥ ಪ್ರಾದೇಶಿಕ ಭಾಷೆಗಳು, ಈಗ ಮತ್ತಷ್ಟು ಸಂದಿಗ್ಧಗಳಿಗೆ ಸಿಲುಕಿದಂತಾಯಿತು. ತಮ್ಮ ಆಡಳಿತದ ನಿರ್ವಹಣೆಗೆ ಅನುಕೂಲಕರವಾದ ವಾತಾವರಣದ ನಿರ್ಮಾಣದ ಹಿನ್ನೆಲೆಯಲ್ಲಿ ಪರಿಚಯಿಸಲಾದ ಇಂಗ್ಲಿಷ್ ಭಾಷೆಯ ಶಿಕ್ಷಣ ಈ ಮಟ್ಟಕ್ಕೆ 'ಬಿಟ್ಟೆನೆಂದರೂ ಬಿಡದೀ ಮಾಯೆ' ಎನ್ನುವ ಹಂತಕ್ಕೆ ಪಸರಿಸುತ್ತದೆ ಎನ್ನುವುದು ಯಾರಿಗೂ ತಿಳಿದಿರಲಿಲ್ಲ. ಆಗಲೂ ಸ್ಥಳೀಯ ಭಾಷೆಗಳ ಮೂಲಕವೇ ಶಿಕ್ಷಣ ನೀಡುವುದು ಉಚಿತ ಎನ್ನುವವರ ವಾದವಿದ್ದರೂ ಪಶ್ಚಿಮದ ತತ್ವಜ್ಞಾನ ಮತ್ತು ಜ್ಞಾನ ಸಂಪತ್ತು ನಮ್ಮವರಿಗೆ ಉಣಬಡಿಸುವುದು ಬೇಡವೇ ? ಎಂದು ವಸಾಹತುಶಾಹಿ ಭಾಷೆಯನ್ನು ಬೆಂಬಲಿಸಿದವರೂ ಇದ್ದರು. ಈ ಬೆಂಬಲಕ್ಕೆ ಇನ್ನಷ್ಟು ಪುಷ್ಟಿ ದೊರೆತದ್ದು ೧೯೩೫, ಮಾರ್ಚ್ ೭ರಂದು. ಅಂದು ಲಾರ್ಡ್ ವಿಲಿಯಂ ಬೆಂಟಿಂಕ್ ಸರ್ಕಾರಿ ಆದೇಶವೊಂದನ್ನು ಶಿಕ್ಷಣ ಮಾಧ್ಯಮಕ್ಕೆ ಸಂಬಂಧಿಸಿ ಹೊರಡಿಸಿದರು. ಇದು ಬ್ರಿಟಿಷ್ ಶಿಕ್ಷಣತಜ್ಞ ಲಾರ್ಡ್ ಮೆಕಾಲೆಯವರ ಧೋರಣೆಯನ್ನು ಆಧರಿಸಿತ್ತು. 'ಶಿಕ್ಷಣಕ್ಕೆಂದು ಮೀಸಲಾಗಿರುವ ಹಣವನ್ನು ಆಂಗ್ಲ ಮಾಧ್ಯಮದಲ್ಲಿ ಶಿಕ್ಷಣ ನೀಡುವ ಮತ್ತು ಪಡೆಯುವವರಿಗೆ ಮಾತ್ರ ನೀಡಲಾಗುವುದು' ಎಂದು ಆ ಆದೇಶ ಹೇಳಿತ್ತು. ಉದ್ದೇಶ ಅಂತಿಮವಾಗಿ ಸಾಧ್ಯವಾದಷ್ಟು ಹೆಚ್ಚೆಚ್ಚು ಭಾರತೀಯ ಬ್ರಿಟಿಷರನ್ನು ರೂಪಿಸುವುದೇ ಈ ಯೋಜನೆಯ ಗುರಿಯಾಗಿತ್ತು. ಅದೇ ರೀತಿ ೧೮೫೩ರಲ್ಲಿ ಜಾರ್ಜ್ ಕ್ಯಾಂಬೆಲ್ ಎನ್ನುವ ಬ್ರಿಟಿಷ್ ಚಿಂತಕ ತನ್ನ ಒಂದು ವರದಿಯಲ್ಲಿ ಹೀಗೆ ಹೇಳಿದ್ದಾನೆ : "ವೃತ್ತ ಪತ್ರಿಕೆಗಳ ಹಾಗೆ ಇಂಗ್ಲಿಷ್ ಮಾತನಾಡುವ ವರ್ಗದ ಮೇಲೆ ವಸಾಹತುಶಾಹಿ ಅಧಿಕಾರಿಗಳು ಅವಲಂಬಿಸಿದ್ದರು. ಮಿಕ್ಕವರು ಗುಲಾಮರಂತೆ ಬದುಕಬೇಕಿತ್ತು." ಮೆಕಾಲೆಯ ಧೋರಣೆಯ ಮೂಲಕ ಇಂಗ್ಲಿಷ್ ಶಿಕ್ಷಣ ನಮ್ಮಲ್ಲಿ ಬಹು ಬೇಗನೆ ಜನಪ್ರಿಯವಾಯಿತಾದರೂ ಪರೋಕ್ಷವಾಗಿ ಪ್ರಾದೇಶಿಕ ಭಾಷೆಗಳ ಕತ್ತು ಹಿಚುಕುವ ಯತ್ನವನ್ನೂ ಮಾಡಲಾಗಿತ್ತು. ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿ ಜಾನ್ ವಿಲ್ಸನ್‌ರಂಥ, ಪಾಜ್ಸನ್‌ರಂಥ ಚಿಂತಕರು ಇಲ್ಲಿಯ ಪ್ರಾದೇಶಿಕ ಭಾಷೆಗಳ ಅಳಿವಿನ ಅಪಾಯದ ಬಗ್ಗೆಯೂ ಮಾತನಾಡಿದ್ದರು. ಆದರೆ ಅವರ ಧ್ವನಿಗೆ ಮೆಕಾಲೆಗೆ ಸಿಕ್ಕ ಬೆಂಬಲ ದೊರೆಯಲಿಲ್ಲ. ಇಂಗ್ಲಿಷ್ ಮಾಧ್ಯಮದ ಮೂಲಕ ಶಿಕ್ಷಣದ ಪ್ರಸಾರ ಸಾಧ್ಯವಾಯಿತಾದರೂ ಅದೊಂದು ಭಾಷೆಯಾಗಿ ಭಾರತೀಯರ ಎದೆಯಾಳದ ತಳಮೂಲಕ್ಕೆ ಇಳಿಯಲಿಲ್ಲ. ಶಕ್ತಿಮೀರಿ ಪ್ರಯತ್ನಪಟ್ಟು ಅದನ್ನು ಕಲಿಯುವುದು, ತಪ್ಪದೆ ಮಾತನಾಡುವುದು, ನುಡಿಗಟ್ಟುಗಳನ್ನು ಸರಿಯಾಗಿ ಬಳಸುವುದು

ಈಗ ಶಿಕ್ಷಣದಲ್ಲಿ ಪ್ರಾದೇಶಿಕ ಭಾಷೆಗಳ ಅಳಿವು–ಉಳಿವು ಪಾಲಕರನ್ನೇ ಅವಲಂಬಿಸಿದೆ. ಇಲ್ಲಿಯವರೆಗೆ ನಾವು ಇದಕ್ಕೆಲ್ಲಾ ಕಾರಣ ಸರಕಾರ ಇಲ್ಲವೇ ಯಾವುದೋ ಒಂದು ಸಾಂಸ್ಕೃತಿಕ ಸಂಸ್ಥೆಯನ್ನು ದೂರುವುದಿತ್ತು. ಈಗ ಹಾಗೆ ಮಾಡದೆ ಪಾಲಕರ ಕಡೆಗೆ ಬೆರಳು ಮಾಡಬೇಕಾಗುತ್ತದೆ. ಕನ್ನಡದಂಥ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಪಡೆದ ಪ್ರಾದೇಶಿಕ ಭಾಷೆಯ ಪರಿಸ್ಥಿತಿಯೇ ಹೀಗಿರಬೇಕಾದರೆ ಇನ್ನು ಅಳಿವಿನ ಅಂಚಿನಲ್ಲಿರುವ ಸಣ್ಣಪುಟ್ಟ ಪ್ರಾದೇಶಿಕ ಭಾಷೆಗಳ ಸ್ಥಿತಿಯೇನು...? ಮಾತೃಭಾಷೆಯಲ್ಲಿ ದಕ್ಕಿದ ಶಿಕ್ಷಣದಲ್ಲಿ ಖರೆ ಖರೆ ಜ್ಞಾನವಿದೆ, ಖುಷಿಯಿದೆ. ಯಾವುದೇ ಒಂದು ಅಧ್ಯಯನದ ಶಿಸ್ತನ್ನು ತನ್ನ ಮಾತೃಭಾಷೆಯಲ್ಲಿ ಅಧ್ಯಯನ ಮಾಡಿದ ತಿಳುವಳಿಕೆ ಮತ್ತು ಗ್ರಹಿಕೆಗೂ ಅನ್ಯ ಭಾಷೆಗಳಲ್ಲಿ ಮಾಡಲಾದ ಅಧ್ಯಯನದ ಗ್ರಹಿಕೆಗೂ ತುಂಬ ಅಂತರವಿದೆ. ಈಗಲೂ ಪದವಿ ಮತ್ತು ಪದವಿ ಪೂರ್ವ ಹಂತದ ಶಿಕ್ಷಣದಲ್ಲಿ ಬಹುತೇಕ ಮಕ್ಕಳು ಅನುತ್ತೀರ್ಣರಾಗುವುದು ಇಂಗ್ಲಿಷ್ ವಿಷಯದಲ್ಲಿಯೇ. ಇಂಗ್ಲಿಷ್ ಮೀಡಿಯಂನಲ್ಲಿ ಓದುವುದು, ಓದಿಸುವುದು ಅಂತಸ್ತಿನ ಪ್ರತೀಕಗಳಾಗಿರುವ ದಿನಮಾನಗಳಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿರುವ ಪಾಲಕರ ಪರವಾಗಿರುವ ತೀರ್ಪು ಎಷ್ಟರಮಟ್ಟಿಗೆ ಪ್ರಾದೇಶಿಕ ಭಾಷೆಗಳನ್ನು ಕಾಯುತ್ತದೆ ಎನ್ನುವುದೇ ಯಕ್ಷ ಪ್ರಶ್ನೆ.

ಇದರಲ್ಲಿಯೇ ಆ ಭಾಷೆ ಬಳಸುವವರ ಸಾಮರ್ಥ್ಯ ವ್ಯರ್ಥವಾಗುವುದನ್ನು ಕಂಡು ಅನೇಕ ವಿದೇಶಿಯರೇ ಪ್ರಾದೇಶಿಕ ಭಾಷೆಯಲ್ಲಿಯೇ ಶಿಕ್ಷಣ ನೀಡಬೇಕು ಅಂದಿರುವುದಿದೆ. ಅವರಲ್ಲಿ ಲಾರ್ಡ್ ಕರ್ಜನ್ ಕೂಡ ಒಬ್ಬ. ಹಾಗೆಯೇ ೧೯೧೭ರಲ್ಲಿ ಮೈಕೆಲ್ ಸ್ಯಾಡ್ಲರ್ ಅವರ ನೇತೃತ್ವದಲ್ಲಿ ನೇಮಕವಾದ ನಿಯೋಗವು ಕೂಡ ಹೀಗೆ ಅಭಿಪ್ರಾಯಪಟ್ಟಿರುವುದಿದೆ : "ತರುಣನೊಬ್ಬ ತನ್ನ ಶಿಕ್ಷಣವನ್ನು ಮುಗಿಸಿದ ನಂತರ, ತನ್ನ ತಾಯ್ನುಡಿಯಲ್ಲಿ ಸರಿಯಾಗಿ ಮತ್ತು ಸುಗಮವಾಗಿ ಓದಿ ಬರೆಯುವ ಶಕ್ತಿಯನ್ನು ಸಂಪಾದಿಸುವಂತೆ ಮಾಡದೆ ಇರುವ ಶಿಕ್ಷಣದಲ್ಲಿ ಏನೋ ದೋಷವಿದೆ. ಆದ್ದರಿಂದ ಇನ್ನು ಮೇಲೆ ಪ್ರಾದೇಶಿಕ ಭಾಷೆಗಳ ಅಧ್ಯಯನವನ್ನು ಗಂಭೀರವಾಗಿ ನಡೆಸಲು ನೆರವಾಗುವ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳಬೇಕೆನ್ನುವುದು ನಿರ್ವಿವಾದವಾದ ಸಂಗತಿ."

ಇದು ಕೇವಲ ಸ್ವಾತಂತ್ರ್ಯಪೂರ್ವದ ಕತೆಯಲ್ಲ. ಸ್ವತಂತ್ರ ಭಾರತದಲ್ಲಿಯೂ ಇಡೀ ದೇಶ ಒಪ್ಪಿಕೊಳ್ಳ ಬಹುದಾದ ರಾಷ್ಟ್ರಭಾಷೆಯನ್ನು ಗುರುತಿಸುವಲ್ಲಿ ಕೆಲವು ಅಡೆತಡೆಗಳಾದವು. ಕೊನೆಗೂ ಗಾಂಧೀಜಿಯವರ ತ್ರಿಭಾಷಾ ಸೂತ್ರ ಇಲ್ಲಿ ನೆರವಾಯಿತು. ಆರಂಭದಲ್ಲಿ ಭಾರತೀಯ ಸಂವಿಧಾನದಲ್ಲಿ ದೇವಭಾಷೆ ಎಂದು ಕರೆಯಲಾಗುವ ಸಂಸ್ಕೃತವನ್ನೂ ಒಳಗೊಂಡಂತೆ ಅಧಿಕೃತವಾಗಿ ೧೫ ಭಾಷೆಗಳನ್ನು ಪ್ರಾದೇಶಿಕ ಭಾಷೆಗಳನ್ನಾಗಿ ಗುರುತಿಸಲಾಯಿತು. ಸುಮಾರು ಒಂದು ಶತಮಾನ ದಾಟಿದರೂ ಶಿಕ್ಷಣದಲ್ಲಿ ಭಾಷಾ ಮಾಧ್ಯಮದ ಸಮಸ್ಯೆ ಬಹುದೊಡ್ಡ ತೊಡಕಾಗಿ ಹಾಗೇ ಉಳಿದಿದೆ. ಯಾವುದೇ ಒಂದು ಜನಭಾಷೆ ಗಟ್ಟಿಯಾದುದೋ ಇಲ್ಲವೋ ಎಂದು ಗುರುತಿಸಿಕೊಳ್ಳ ಬೇಕಾದರೆ ಅತಿ ಮುಖ್ಯವಾಗಿ ಅದನ್ನು ಮಾತನಾಡುವ ಜನರೇ ಕಾರಣ.

ಈಗ ಶಿಕ್ಷಣದಲ್ಲಿ ಪ್ರಾದೇಶಿಕ ಭಾಷೆಗಳ ಅಳಿವು-ಉಳಿವು ಪಾಲಕರನ್ನೇ ಅವಲಂಬಿಸಿದೆ. ಇಲ್ಲಿಯವರೆಗೆ ನಾವು ಇದಕ್ಕೆಲ್ಲಾ ಕಾರಣ ಸರಕಾರ ಇಲ್ಲವೇ ಯಾವುದೋ ಒಂದು ಸಾಂಸ್ಕೃತಿಕ ಸಂಸ್ಥೆಯನ್ನು ದೂರುವುದಿತ್ತು. ಈಗ ಹಾಗೆ ಮಾಡದೆ ಪಾಲಕರ ಕಡೆಗೆ ಬೆರಳು ಮಾಡಬೇಕಾಗುತ್ತದೆ. ಕನ್ನಡದಂಥ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಪಡೆದ ಪ್ರಾದೇಶಿಕ ಭಾಷೆಯ ಪರಿಸ್ಥಿತಿಯೇ ಹೀಗಿರಬೇಕಾದರೆ ಇನ್ನು ಅಳಿವಿನ ಅಂಚಿನಲ್ಲಿರುವ ಸಣ್ಣಪುಟ್ಟ ಪ್ರಾದೇಶಿಕ ಭಾಷೆಗಳ ಸ್ಥಿತಿಯೇನು...? ಮಾತೃಭಾಷೆಯಲ್ಲಿ ದಕ್ಕಿದ ಶಿಕ್ಷಣದಲ್ಲಿ ಖರೆ ಖರೆ ಜ್ಞಾನವಿದೆ, ಖುಷಿಯಿದೆ. ಯಾವುದೇ ಒಂದು ಅಧ್ಯಯನದ ಶಿಸ್ತನ್ನು ತನ್ನ ಮಾತೃಭಾಷೆಯಲ್ಲಿ ಅಧ್ಯಯನ ಮಾಡಿದ ತಿಳುವಳಿಕೆ ಮತ್ತು ಗ್ರಹಿಕೆಗೂ ಅನ್ಯ ಭಾಷೆಗಳಲ್ಲಿ ಮಾಡಲಾದ ಅಧ್ಯಯನದ ಗ್ರಹಿಕೆಗೂ ತುಂಬ ಅಂತರವಿದೆ. ಈಗಲೂ ಪದವಿ ಮತ್ತು ಪದವಿಪೂರ್ವ ಹಂತದ ಶಿಕ್ಷಣದಲ್ಲಿ ಬಹುತೇಕ ಮಕ್ಕಳು ಅನುತ್ತೀರ್ಣರಾಗುವುದು ಇಂಗ್ಲಿಷ್ ವಿಷಯ ದಲ್ಲಿಯೇ. ಇಂಗ್ಲಿಷ್ ಮೀಡಿಯಂನಲ್ಲಿ ಓದುವುದು, ಓದಿಸುವುದು ಅಂತಸ್ತಿನ ಪ್ರತೀಕಗಳಾಗಿರುವ ದಿನಮಾನಗಳಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿರುವ ಪಾಲಕರ ಪರವಾಗಿರುವ ತೀರ್ಪು ಎಷ್ಟರಮಟ್ಟಿಗೆ ಪ್ರಾದೇಶಿಕ ಭಾಷೆಗಳನ್ನು ಕಾಯುತ್ತದೆ ಎನ್ನುವುದೇ ಯಕ್ಷ ಪ್ರಶ್ನೆ.

ಜಾಗತೀಕರಣದ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆಗೆ ಇನ್ನಷ್ಟು ಬೇಡಿಕೆ ಬಂದಿದೆ. ಕೆ.ಎಫ್.ಸಿ., ಮ್ಯಾಕ್‌ಡೊನಾಲ್ಡ್‌ನಂಥ ವಿದೇಶಿ ಕಂಪನಿಗಳ ತಿನಿಸುಗಳ ಜನಪ್ರಿಯತೆ ಈ ಇಂಗ್ಲಿಷ್ ಭಾಷೆಗಿಂತಲೂ ಭಿನ್ನ ಎನಿಸುವದಿಲ್ಲ. ಅಷ್ಟಕ್ಕೂ ಇಂಗ್ಲಿಷಿನಲ್ಲಿ ಮಾತನಾಡುವುದು, ಬರೆಯುವುದು ಬಹುದೊಡ್ಡ ಸಾಧನೆಯಂತೂ ಅಲ್ಲ. ಅದೇ ವೇಳೆಗೆ ಎಲ್ಲವನ್ನೂ ಹೋಲ್‌ಸೇಲಾಗಿ ಅನುಕರಣೆ ಮಾಡುವ ನಮ್ಮಂಥ ದೇಶಗಳ ಜನರಿಗೆ ಈ ಇಂಗ್ಲಿಷ್ ಭಾಷೆ ಯಜಮಾನ ಸಂಸ್ಕೃತಿಯ ಪ್ರತೀಕ. ಅದರ ಹೆಗಲ ಮೇಲೆ ಕೈ ಹಾಕಲಾಗದಿದ್ದರೂ ಅದರ ನೆರಳಲ್ಲಿರುವುದರಲ್ಲಿಯೇ ಪರಮಸುಖ ಅನುಭವಿಸುವ ನಮಗೆ ಇಂಗ್ಲಿಷ್ ಬರುವದಿಲ್ಲ ಎನ್ನುವುದೇ ಒಂದು ಕೀಳರಿಮೆಯ ಸಂಗತಿಯಾಗುವಲ್ಲಿ ರೂಪಿತವಾದ ಸಾಂಸ್ಕೃತಿಕ ಯಜಮಾನತ್ವದ ಹಿಡಿತ ಸಾಮಾನ್ಯವೇ...? ರಾಮ ಮನೋಹರ್ ಲೋಹಿಯಾ ಅವರು ಹೀಗೆ ಹೇಳುತ್ತಾರೆ : "ಇಂಗ್ಲಿಷ್ ಭಾಷೆಯು ಭಾರತೀಯ ಪ್ರಜೆಗಳನ್ನು ಕೀಳರಿಮೆಯವರನ್ನಾಗಿ ಮಾಡಿಬಿಟ್ಟಿದೆ. ಇಂಗ್ಲಿಷ್ ಗೊತ್ತಿಲ್ಲದಿದ್ದರೆ ಯಾವುದೇ ಬಗೆಯ ಸಾರ್ವಜನಿಕ ಕೆಲಸಕ್ಕೂ ತಾವು ಅರ್ಹರಲ್ಲವೆಂದು ಅವರು ಭಾವಿಸಿಕೊಳ್ಳುತ್ತಾರೆ ಮತ್ತು ಅದರಿಂದ ದೂರ ಉಳಿಯುತ್ತಾರೆ. ಜನರು ಹೀಗೆ ಸಾರ್ವಜನಿಕ ಕ್ಷೇತ್ರಗಳಿಂದ ದೂರ ಉಳಿಯುವದರಿಂದಲೇ ಒಂದು ಸಣ್ಣ ಗುಂಪಿನ ಅಥವಾ ಪಾಳೇಗಾರಿಕೆಯ ಆಡಳಿತಕ್ಕೆ ಅಸ್ತಿವಾರವೊದಗುತ್ತದೆ. ಕೇವಲ ಬಂದೂಕಿನ ಮೂಲಕವೇ ಜನರನ್ನು ಹತ್ತಿಕ್ಕುವದಲ್ಲ, ತಿಳಿಯದಿರುವ ಭಾಷೆಯೊಂದನ್ನು ಬಳಸುವ ಮೂಲಕ ಅವರನ್ನು ಮತ್ತೂ ಯಶಸ್ವಿಯಾಗಿ ಕೆಳಕ್ಕೆ ತಳ್ಳಲಾಗುತ್ತದೆ" [ಭಾಷೆ ಮತ್ತು ಇತಿಹಾಸ, ಪು-೯೭].




## ಅಭಿನಂದನೆಗಳು

ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಪ್ರಶಸ್ತಿ ಸಮಿತಿಯು ಕೊಡುವ ಪ್ರಸಕ್ತ ಸಾಲಿನ 'ಮಾಸ್ತಿ' ಪ್ರಶಸ್ತಿಗೆ ಸಂಶೋಧಕ ಪ್ರೊ॥ ಷ. ಶೆಟ್ಟರ್, ವಿಮರ್ಶಕಿ ಡಾ॥ ಬಿ. ಎನ್. ಸುಮಿತ್ರಾಬಾಯಿ ಹಾಗೂ ಸಾಹಿತಿ ಡಾ॥ ನಾ. ಮೊಗಸಾಲೆ ಅವರನ್ನು ಆಯ್ಕೆ ಮಾಡಲಾಗಿದೆ. ಅವರಿಗೆಲ್ಲ 'ನವಕರ್ನಾಟಕ' ಹಾಗೂ 'ಹೊಸತು' ಬಳಗದಿಂದ ಅಭಿನಂದನೆಗಳು.

ನಮ್ಮ ಪಾಲಕರಿಗೆ ಈ ಹೊತ್ತು ಇಂಗ್ಲಿಷ್ ಎನ್ನುವುದು ಉದ್ಯೋಗವನ್ನು ತಂದುಕೊಡುವ ಭಾಷೆ. ಕನ್ನಡದ ಬಗ್ಗೆ ಅಥವಾ ಇತರೇ ಪ್ರಾದೇಶಿಕ ಭಾಷೆಗಳ ಬಗ್ಗೆ ಇಂಥ ಯಾವ ಭರವಸೆಗಳನ್ನೂ ನಮ್ಮ ಪ್ರಭುತ್ವಗಳು ಸೃಷ್ಟಿ ಮಾಡಿಲ್ಲ. ಪರಿಣಾಮವಾಗಿಯೇ ಸರಾಗವಾಗಿ ಮಾತನಾಡಬಹುದಾದ, ಬರೆಯಬಹುದಾದ ಪ್ರಾದೇಶಿಕ ಭಾಷೆಗಳನ್ನು ಕೈಬಿಟ್ಟು ವಿದ್ಯಾರ್ಥಿಯೊಬ್ಬ ಎರಡು ದಶಕಗಳ ಕಾಲ ನಮ್ಮದಲ್ಲದ ಒಂದು ಭಾಷೆಯನ್ನು ಕಲಿಯುವಲ್ಲಿಯೇ ತಿಣುಕುವ ಕ್ರಮದಲ್ಲಿ ಅದಾವ ಬಗೆಯ ಸಾಮರ್ಥ್ಯಗಳ ವಿಶ್ಲೇಷಣೆ ಸಾಧ್ಯವಾಗು ತ್ತದೆಯೋ ಗೊತ್ತಿಲ್ಲ. ಮಕ್ಕಳನ್ನು ಇಂಗ್ಲಿಷ್ ಮಾಧ್ಯಮದಲ್ಲಿ ಓದಿಸುವವರೇ ನಿಜವಾದ ಪಾಲಕರು ಎನ್ನುವುದು ಮಧ್ಯಮವರ್ಗದ ಲೌಕಿಕ ವ್ಯಾಖ್ಯಾನ. ನೆರೆಹೊರೆ ಮತ್ತು ಸಮಾಜದಲ್ಲಿ ನಿಮ್ಮ ಅಂತಸ್ತು ಮತ್ತು ಸ್ಥಾನಮಾನಗಳ ನಿರ್ಣಾಯಕ ಸಂಗತಿಗಳಾಗಿ ನಿಮ್ಮ ಮನೆ, ಕಾರು, ಬೈಕುಗಳಂತೆ ನೀವು ನಿಮ್ಮ ಮಕ್ಕಳನ್ನು ಇಂಗ್ಲಿಷ್ ಮಾಧ್ಯಮದ ಶಾಲೆಗಳಲ್ಲಿ ಓದಿಸುತ್ತೀರೋ ಇಲ್ಲ ಕನ್ನಡ ಮಾಧ್ಯಮದ ಶಾಲೆಗಳಲ್ಲಿ ಓದಿಸುತ್ತೀರೋ ಎನ್ನುವುದು ಕೂಡ ಒಂದು ಪ್ರಮುಖ ಸಂಗತಿ. ಆ ಶಾಲೆಗಳಲ್ಲಿ ನೀವು ಕೊಡುವ ಶುಲ್ಕವೂ ಅದರಲ್ಲಿ ನಿರ್ಣಾಯಕವಾಗುತ್ತದೆ ಎನ್ನುವುದನ್ನು ಅಲ್ಲಗಳೆಯಲಾದೀತೇ...? ಈ ಬಗೆಯ ಒಂದು ಮಾನಸಿಕ ಸ್ಥಿತಿಯನ್ನು ನಿರ್ಮಿಸಿದವರು ಯಾರು...? ಅದಕ್ಕೆ ಅವಕಾಶ ಮಾಡಿಕೊಟ್ಟವರು ಯಾರು...? ಈಗ ಅತಿ ಮುಖ್ಯವಾಗಿ ಪ್ರಾದೇಶಿಕ ಭಾಷೆಗಳಲ್ಲಿ ಶಿಕ್ಷಣ ನೀಡಬೇಕೋ... ಬೇಡವೋ ಎನ್ನುವುದು ಮುಖ್ಯವಾಗದೆ ಅದನ್ನು ಕೊಡಿಸಬೇಕೋ... ಬೇಡವೋ ಎನ್ನುವುದನ್ನು ಪಾಲಕರು ತೀರ್ಮಾನಿಸಬೇಕು. ಕನ್ನಡ ಅನ್ನ ಮತ್ತು ಉದ್ಯೋಗದ ಗ್ಯಾರಂಟಿ ನೀಡುವ ಮಾಧ್ಯಮ ವಾಗುವುದಾದರೆ ಸುಪ್ರೀಂ ಕೋರ್ಟ್ ಈ ಭಾಷಾ ಮಾಧ್ಯಮದ ಚೆಂಡನ್ನು ಪಾಲಕರ ಅಂಗಳಕ್ಕೆ ತಳ್ಳಿದ್ದೂ ಸಾರ್ಥಕ...! ಈ ದಿಶೆಯಲ್ಲಿ ಅತಿ ಮುಖ್ಯವಾಗಿ ಪ್ರತಿಯೊಬ್ಬ ಪಾಲಕನೂ ಯೋಚಿಸಬೇಕಿದೆ.

**ಡಾ॥ ಎಸ್. ಬಿ. ಜೋಗುರ**
ಎನ್. ಬಿ. ಜ್ಯೋತಿ ಶಾಲೆಯ ಹತ್ತಿರ
ಜಲದರ್ಶಿನಿ ನಗರ, ಧಾರವಾಡ – ೫೮೦ ೦೦೩




ಬೆಂಗಳೂರು ನಗರ ಜಿಲ್ಲಾ 9ನೇ ಕನ್ನಡ ಸಾಹಿತ್ಯ ಸಮ್ಮೇಳನ ಕಳೆದ ಮೇ 5 ಮತ್ತು 6ರಂದು ಬೆಂಗಳೂರಿನ ಚೌಡಯ್ಯ ಸ್ಮಾರಕ ಭವನದಲ್ಲಿ ಜರುಗಿತು. ಸಮ್ಮೇಳನವನ್ನು ಹಿರಿಯ ವಿಜ್ಞಾನಿ ಸಿ. ಎನ್. ಆರ್. ರಾವ್ ಉದ್ಘಾಟಿಸಿದರು. ಹಿರಿಯ ಸಾಹಿತಿ, ನಿಘಂಟು ತಜ್ಞ ಪ್ರೊ॥ ಜಿ. ವೆಂಕಟಸುಬ್ಬಯ್ಯ ಉಪಸ್ಥಿತರಿದ್ದರು. ಹಿರಿಯ ಚಿಂತಕ, 'ಹೊಸತು' ಗೌರವ ಸಂಪಾದಕ ಡಾ॥ ಜಿ. ರಾಮಕೃಷ್ಣ ಅವರು ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಎರಡು ದಿನಗಳ ಈ ಸಮ್ಮೇಳನಕ್ಕೆ ತಮ್ಮ ಅಧ್ಯಕ್ಷಭಾಷಣ ದಲ್ಲಿ ಅವರು ಕನ್ನಡದ ಸ್ಥಿತಿಗತಿ, ಶಿಕ್ಷಣ, ಸಂಸ್ಕೃತಿ ಮುಂತಾದ ಹಲವು ವಿಷಯಗಳನ್ನು ಪ್ರಸ್ತಾಪಿಸಿದ್ದರು. ಅವರ ಭಾಷಣದ ಆಯ್ದ ಭಾಗಗಳನ್ನು ಪ್ರಕಟಿಸುತ್ತಿದ್ದೇವೆ. – ಸಂ.

# ಬದಲಾವಣೆಗೆ ಐಕ್ಯಹೋರಾಟ ಅವಿಭಾಜ್ಯ ಅಂಗ

ಸಮಕಾಲೀನ ಹಂತದಲ್ಲಿ ಕನ್ನಡ ಮತ್ತು ಕನ್ನಡನಾಡಿನ ಸಮಸ್ಯೆಗಳನ್ನು ಹೀಗೆ ತಾಳೆ ಹಾಕಿ ನೋಡಬೇಕು. ಸಮಸ್ಯೆಯು ಆವಿರ್ಭವಿಸಿದ್ದು ಹೇಗೆ? ಶ್ರೀಮಂತ ವರ್ಗವು ತನ್ನ ಶ್ರೇಷ್ಠತೆಯನ್ನು ಮೆರೆಯಲು ಪ್ರತ್ಯೇಕತೆಗೆ ಮಾರುಹೋಗಿದ್ದರಿಂದಲೆ? ಅಥವಾ ವಸಾಹತು ಸಂದರ್ಭದ ಪರದೇಶಿ ಆಳ್ವಿಕೆಯಿಂದಲೆ? ೧೯೫೦ರ ದಶಕದವರೆಗೆ ಎಲ್ಲ ಸಾಮಾಜಿಕ ಸ್ತರದವರೂ ಒಂದೇ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದರು. ನಂತರದ ದಶಕಗಳಲ್ಲಿ ಆವರೆಗೆ ಶಾಲೆಗಳಲ್ಲಿ ಪ್ರವೇಶ ಹೊಂದಿಲ್ಲದಿದ್ದ ಕೆಳಸ್ತರದವರು ಕ್ರಮೇಣ ದಾಖಲಾಗಲು ಆರಂಭಿಸಿದರು. ಗತಿಸಿದ ಕುಸ್ಮಾ ಅಧ್ಯಕ್ಷ ಶರ್ಮ ಹೇಳಿದ್ದಂತೆ, ಈ ಕೆಳಸ್ತರದವರು 'ಚರಂಡಿ ನೀರು' ಮತ್ತು ಮೊದಲಿನಿಂದಲೂ ಪ್ರತಿಷ್ಠಿತರಾಗಿದ್ದವರು 'ಗಂಗಾಜಲ'. ಎರಡನ್ನೂ ಬೆರೆಸುವುದುಂಟೆ? ಆದ್ದರಿಂದ ಖಾಸಗಿ ಶಾಲೆಗಳು ಬಂದುವು. ಅಂಬಾನಿಯಂಥವರ ಕುಟುಂಬಗಳಿಗೆ ಗಂಗಾಜಲ ಸಾಲದು, ಅವರಿಗೆ ನ್ಯೂಯಾರ್ಕಿನ ಹಡ್ಸನ್ ನದಿಯ ನೀರೇ ಬೇಕು. ಇದು ಚಾರಿತ್ರಿಕ ಬೆಳವಣಿಗೆ. ಇದಕ್ಕೆ ಪರಿಹಾರವೇನು? ಎಲ್ಲ ಶಾಲೆಗಳು ಸಮಾನ ಸೌಲಭ್ಯಗಳಿರುವಂತಾಗುವುದು; ಅಂದರೆ, ಎಲ್ಲವೂ ಉತ್ತಮ ಮಟ್ಟದ ಸೌಲಭ್ಯವನ್ನೇ ಹೊಂದಿರುವಂತೆ ಮಾಡುವುದು. ಒಂದರ್ಥದಲ್ಲಿ ಇದು ಎಲ್ಲ ವರ್ಗಗಳವರನ್ನು ಒಂದು ವರ್ಗವಾಗಿ ಪರಿವರ್ತಿಸುವ ಕ್ರಮ. ಉಚ್ಚ ವರ್ಗಗಳು ಇದನ್ನು ಸ್ವಾಗತಿಸುವುದಿಲ್ಲವಾಗಿ ಸಂಘರ್ಷ ಅನಿವಾರ್ಯವಾಗುತ್ತದೆ. ಸಂಘರ್ಷವು ಕೇವಲ ಶಾಲಾ ಕೊಠಡಿಗೆ ಸೀಮಿತವಾಗುವುದಿಲ್ಲ. ಅದು ಕಾರ್ಖಾನೆ, ಗದ್ದೆ, ಬ್ಯಾಂಕು, ಸಾರಿಗೆ, ಆಸ್ಪತ್ರೆ ಎಲ್ಲಕ್ಕೂ ಅನ್ವಯವಾಗುತ್ತದೆ. ಆದ್ದರಿಂದ ಕನ್ನಡದ ಪರವಾದ ಹೋರಾಟವು ರೈತ – ಕಾರ್ಮಿಕ ಹೋರಾಟ, ದಲಿತ ಹೋರಾಟ, ಮಹಿಳಾ ಹೋರಾಟ ಮುಂತಾದವುಗಳೊಂದಿಗೆ ಸಮನ್ವಯ ಸಾಧಿಸಬೇಕಾಗುತ್ತದೆ. ಅಂತಹ ವ್ಯಾಪಕ, ಸಂಘಟಿತ ಐಕ್ಯ ಹೋರಾಟವಿಲ್ಲದೆ ಸಮಾಜದ ಎಲ್ಲ ಶಕ್ತಿಗಳನ್ನೂ ಒಂದು ಮಾಳಿಗೆಯ ಕೆಳಗೆ ಒಗ್ಗೂಡಿಸಿ ಪ್ರಬಲರನ್ನಾಗಿಸಲು ಸಾಧ್ಯವಿಲ್ಲ. ಒಂದೊಂದೂ ಪ್ರತ್ಯೇಕ ಚಳುವಳಿಯಾಗಿಯೇ ಉಳಿದರೆ ಅವೆಲ್ಲಕ್ಕೂ ಸೀಮಿತ ಫಲ ಮಾತ್ರ ದಕ್ಕಲು ಸಾಧ್ಯ. ಆದ್ದರಿಂದ ಕನ್ನಡ ಹೋರಾಟವು ಸಮಗ್ರ ಸಾಮಾಜಿಕ – ಆರ್ಥಿಕ ಬದಲಾವಣೆಗಾಗಿ ನಡೆಯಬೇಕಾದ ಐಕ್ಯ ಹೋರಾಟದ ಅವಿಭಾಜ್ಯ ಅಂಗವಾಗುವ ಅನಿವಾರ್ಯತೆ ಇದೆ. ನಮ್ಮ ಸಮ್ಮೇಳನಗಳು ನಮ್ಮನ್ನು ಅತ್ತ ಕೊಂಡೊಯ್ಯಬೇಕು.

* * *

ಯಾರಿಗೆ ಸಮಾನ ಅವಕಾಶವು ಲಭ್ಯವಿಲ್ಲವೋ ಅವರು ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಮೊದಲು ಸಮಾಜ ಮತ್ತು ಸರ್ಕಾರ ಎರಡೂ ಸಮಾಜದ ಎಲ್ಲರ ಸಮಾನ ಶಿಕ್ಷಣಕ್ಕೆ ಸೌಲಭ್ಯ ಮಾಡಿಕೊಟ್ಟರೆ ಆಮೇಲೆ ಶಿಕ್ಷಣ ಪಡೆದವರು ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಲು ಸಾಧ್ಯ. ಸೌಲಭ್ಯ ವಂಚಿತರಾದರೂ ಸರಿಯೆ, ಅವರು ತಮ್ಮ ಜವಾಬ್ದಾರಿಯನ್ನು ನಿರ್ವಹಿಸಬೇಕು ಎಂದು ಉಗ್ರವಾಗಿ ವಾದಿಸಿದರೆ ಅದು ಅವರ ಗಾಯದ ಮೇಲೆ ಬರೆ ಎಳೆದಂತೆ.

* * *

ನಮ್ಮ ಚಳುವಳಿಗಳು ಕಳೆದ ಒಂದು ದಶಕದಲ್ಲಿ ಸಾಂಕೇತಿಕ ರೂಪವನ್ನು ಪಡೆಯುತ್ತಾ ಬಂದುವೇನೊ ಎಂಬ ಅನುಮಾನ ಬರುತ್ತಿದೆ. ಚಳುವಳಿಕಾರರು ಯಾರಿಗೂ ಕಾಣದಂತೆ ಸ್ವಾತಂತ್ರ್ಯೋದ್ಯಾನದಲ್ಲಿ ಸಭೆಗಳನ್ನು ನಡೆಸಿಕೊಂಡು ಆದಷ್ಟು ಜಾಗ್ರತೆ ಅದೃಶ್ಯರಾಗಬೇಕೆಂಬ ಅಲಿಖಿತ ನಿಯಮ ಜಾರಿಯಲ್ಲಿದೆ. ಪ್ರವಾಸಿಗರು ಬೇಕಾದರೆ ವಿಧಾನಸೌಧದ ಬಳಿ ಹೋಗಿ ಛಾಯಾಚಿತ್ರ ತೆಗೆಸಿಕೊಳ್ಳ ಬಹುದು. ಆದರೆ ಪ್ರತಿಭಟನಕಾರರು ಆ ಮಹಾನ್ ಕಲ್ಲುಕಟ್ಟಡದಿಂದ ಒಂದು ಕಿಲೋಮೀಟರ್ ದೂರದಲ್ಲೆಲ್ಲೋ ಘೋಷಣೆ ಕೂಗಬಹುದು, ಅಷ್ಟೆ. ಕಾರ್ಖಾನೆಗಳು ವಿರಳವಾಗುತ್ತಿವೆ ಮತ್ತು ಇನ್ನೂ ಉಳಿದಿರುವ ಕಾರ್ಖಾನೆಗಳಲ್ಲಿ ದುಡಿಮೆಗಾರರು ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸುವ ಆಸೆಯನ್ನು ತೊರೆದು ದಣಿಯಬೇಕು. ಲೇಬರ್ ಕೋರ್ಟ್, ಇಂಡಸ್ಟ್ರಿಯಲ್ ಟ್ರಿಬ್ಯುನಲ್, ನ್ಯಾಯಾಲಯ ಎಲ್ಲವೂ ದುಡಿಯುವವರ ಮುಷ್ಕರಗಳನ್ನು ಕೆಂಗಣ್ಣಿನಿಂದ ನೋಡುತ್ತವೆ. ದುಡಿಯುವ ಜನರು ಪ್ರಜಾಪ್ರಭುತ್ವ ರೀತ್ಯಾ ತಮ್ಮ ಹಕ್ಕುಗಳನ್ನು ಸ್ಥಾಪಿಸಿಕೊಳ್ಳುವ ಸಾಧ್ಯತೆಯೇ ಇಲ್ಲವೆಂಬ ಹತಾಶೆಯ ಭಾವ ಮೂಡುತ್ತಿದೆ. ಇದು ನಮ್ಮನ್ನು ಕತ್ತಲೆಯ ಯುಗಕ್ಕೆ ದೂಡುತ್ತದೆ. ಉದಾಹರಣೆಗಾಗಿ ಮಹಿಳಾ ಚಳುವಳಿಯತ್ತ ದೃಷ್ಟಿ ಹರಿಸಿದರೆ ಹುಮ್ಮಸ್ಸನ್ನು ಉಂಟುಮಾಡುವ ಬೆಳವಣಿಗೆಯೂ ಇದೆ. ನಿರಾಸೆಯನ್ನು ಸಾಂದ್ರಗೊಳಿಸುವ ಅಪಜಯಗಳೂ ಇವೆ. ಯುವತಿಯರು ಮತ್ತು ಮಹಿಳೆಯರು ನಿಸೂರಾಗಿ ಓಡಾಡಿಕೊಂಡಿರ ಬಹುದಾದ ನಗರವಾಗಿ ಬೆಂಗಳೂರು ಉಳಿದಿಲ್ಲ. ಅದು ಭದ್ರತೆಯನ್ನು ಸರ್ಕಾರವು ಕಲ್ಪಿಸಿಕೊಡುವ ಪ್ರಶ್ನೆಯಲ್ಲ, ಅದು ಪುರುಷರ ಮಾನಸಿಕ ದೌರ್ಬಲ್ಯಗಳು ಹದ್ದುಮೀರಿರುವ ಪ್ರಶ್ನೆ. ಪಿತೃಪ್ರಧಾನ ಸಮಾಜದಲ್ಲಿ ಮಹಿಳೆಯ ಸ್ಥಾನವು ಎಂದೂ ಪೂಜನೀಯವಾಗಿರಲಿಲ್ಲ ಮತ್ತು ಇರುವುದಿಲ್ಲ. ಅಂತಹ ಸಮಾಜದ ನ್ಯೂನತೆಗಳು ಈಗಲೂ ಕಣ್ಣು ಕುಕ್ಕುತ್ತವೆ ಮತ್ತು ಅವುಗಳಲ್ಲಿ ಕೆಲವು ಹೊಸ ವಿದ್ಯಮಾನಗಳು ನಮ್ಮನ್ನು ಕಕ್ಕಾಬಿಕ್ಕಿಯಾಗಿಸುತ್ತಿವೆ. ಒಂದು ಕಡೆ ಮಹಿಳಾ ದೌರ್ಜನ್ಯಗಳ ಹೆಚ್ಚಳ ಮತ್ತು ಇನ್ನೊಂದೆಡೆ ನಾಗರಿಕ ಸಮಾಜದಲ್ಲಿ ಮಹಿಳೆಗೆ ಭದ್ರತೆ ಇಲ್ಲದ ಸಂಕಟ. ಸಮಾಜದಲ್ಲೇ ಏಕೆ, ಕುಟುಂಬದಲ್ಲೂ

ಅವಳಿಗೆ ಪರಿತಾಪ ಅಸೀಮಿತವಾಗಿದೆ. ಇವುಗಳ ನಡುವೆಯೇ ಮಹಿಳಾ ಪ್ರಜ್ಞೆಯೂ ಉನ್ನತ ಹಂತಕ್ಕೇರುತ್ತಿದೆ. ಮಧ್ಯಮ ವರ್ಗದ ಮಹಿಳೆಯರ ಸಂಘಟನಾ ಶಕ್ತಿಯು ಗಮನಾರ್ಹವಾಗಿ ವೃದ್ಧಿಸಿದೆ. ಆದರೆ, ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯ ಪಾಡು ಅತಂತ್ರವಾಗುತ್ತಿದೆ. ಕಾನೂನು, ನ್ಯಾಯಾಲಯ ಇವೆಲ್ಲಾ ಇದ್ದೂ ಇಲ್ಲದಂತಾಗಿರುವ ವಿಪರ್ಯಾಸವನ್ನು ಅರ್ಥ ಮಾಡಿಕೊಂಡು, ಹೇಗೆ ಸಾಮಾಜಿಕ ಮಧ್ಯ ಪ್ರವೇಶವನ್ನು ಸಾಧನವಾಗಿಸಿಕೊಳ್ಳಬೇಕೆಂಬ ಜಟಿಲ ಸಮಸ್ಯೆ ನಮ್ಮ ಮುಂದಿದೆ. ಇಂದಿನ ಹತಾಶೆಯನ್ನು ನೀಗಿಕೊಳ್ಳಲು ಯಾವ ಹತಾರವನ್ನು ರೂಪಿಸಿಕೊಳ್ಳ ಬೇಕೆಂಬುದರ ಗಾಢಚಿಂತನೆ ನಡೆಯಬೇಕಿದೆ.

* * *

ಹಿಂದೊಮ್ಮೆ ಬೆಂಗಳೂರಿಗೆ ಯಾವುದು ಹೆಮ್ಮೆಯ ವಿಷಯವಾಗಿದ್ದಿತೋ ಅದು ಇಂದು ಇಳಿಸಲಾಗದ ದೊಡ್ಡ ಹೊರೆಯಾಗಿ ಪರಿಣಮಿಸಿದೆ. ನಮ್ಮಲ್ಲಿ ಎಲ್ಲ ರಾಜ್ಯಗಳ, ಎಲ್ಲ ಭಾಷಿಕರ ಮೇಳೈಸುವಿಕೆ ಇದ್ದಿತು. ಉನ್ನತ ವ್ಯಾಸಂಗಕ್ಕೆ ಮತ್ತು ಸಾರ್ವಜನಿಕ ಉದ್ದಿಮೆಗಳಲ್ಲಿ ಉದ್ಯೋಗಿಗಳಾಗಿರುವುದಕ್ಕೆ ಹಲವು ಭಾಷಿಕರು ಇಲ್ಲಿಗೆ ಬಂದರು. ಅಂತಹ ಕಾರಣಗಳಿಲ್ಲದೆಯೇ ಅಧಿಕ ಸಂಖ್ಯೆಯಲ್ಲಿ ಬಂದವರು ನೆರೆ ರಾಜ್ಯದ ತಮಿಳರು ಮಾತ್ರ. ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಈಗಲೂ ಎಲ್ಲ ಭಾಷಿಕರೂ ಇದ್ದಾರೆ. ಆದರೆ ಕನ್ನಡದ ವಿದ್ಯಾರ್ಥಿಗಳ ಸಂಖ್ಯೆ ಕ್ಷೀಣಿಸುತ್ತಾ ಬಂದಿದೆ. ನಮ್ಮ ಕಾಲೇಜುಗಳು ಹಾಗೂ ವಿಶ್ವವಿದ್ಯಾನಿಲಯಗಳು ಗುಣಮಟ್ಟವನ್ನು ಕಳೆದು ಕೊಂಡದ್ದು ಅದಕ್ಕೊಂದು ಕಾರಣವಿರಬೇಕು. ಅದನ್ನು ಸರಿಪಡಿಸಿಕೊಳ್ಳುವ ಪ್ರಯತ್ನವಾಗಲಿ, ಯೋಜನೆಯಾಗಲಿ ಇಲ್ಲದಿರುವುದು ಖೇದವನ್ನುಂಟು ಮಾಡಿದೆ. ಬೇರೆಯಂತೆ ಬೆಂಗಳೂರಿನ ಎಲ್ಲ ವಿಧದ ಕಾಲೇಜುಗಳಲ್ಲೂ ಕನ್ನಡೇತರ ಭಾಷಿಕರು ಅಪಾರ ಸಂಖ್ಯೆಯಲ್ಲಿದ್ದಾರೆ. ಹೀಗೆ ವ್ಯಾಸಂಗಕ್ಕೆ ಬಂದವರಲ್ಲಿ ಹಲವರು ಹೇಗೋ ಇಲ್ಲೇ ಉಳಿಯುತ್ತಿದ್ದಾರೆ. ಜೊತೆಗೆ, ಬೇರೆಬೇರೆ ಕ್ಷೇತ್ರಗಳಲ್ಲಿ ನೌಕರಿಗಳಿಗೆ ಬಂದವರಲ್ಲಿ ಅವರವರ ಊರುಗಳಿಗೆ ಮರುಳುವವರ ಸಂಖ್ಯೆ ಕಡಿಮೆಯಾಗುತ್ತಿದೆ. ಸೈಟುಗಳು ಮತ್ತು ಫ್ಲಾಟುಗಳನ್ನು ಕೊಳ್ಳುವವರಲ್ಲಿ ಇಂಥವರು ಗಮನಾರ್ಹ ಸಂಖ್ಯೆಯಲ್ಲಿದ್ದಾರೆ. ಅವರು ಆಯ್ಕೆ ಮಾಡಿಕೊಳ್ಳುವಂತಹ ಇಂಗ್ಲಿಷ್ ಮಾಧ್ಯಮದ ಶಾಲೆಗಳು ಸಹಜವಾಗಿಯೇ ಅಧಿಕಗೊಂಡಿವೆ. ನಮ್ಮ ನಗರಾಡಳಿತಕ್ಕೆ ಮತ್ತು ಕರ್ನಾಟಕ ಸರ್ಕಾರಕ್ಕೆ ಇದು ತಿಳಿಯದ ವಿಷಯವಲ್ಲ. ಆದರೆ ಇಂಥದಕ್ಕೆಲ್ಲಾ ಲಕ್ಷ್ಯ ಕೊಡುವ ಪದ್ಧತಿಯನ್ನು ಅವರೆಂದೂ ರೂಢಿಸಿಕೊಳ್ಳಲಿಲ್ಲ. ಶಿಕ್ಷಣದಲ್ಲಿ ಕನ್ನಡಕ್ಕೆ ಕುತ್ತುಂಟಾಗಿದೆ, ನಿಜ; ಸಾಮಾನ್ಯರ ಜನಜೀವನದಲ್ಲೂ ಅದಕ್ಕೆ ಅಭದ್ರ ಸ್ಥಿತಿ ಉಂಟಾಗಿದೆ. ಇದು ದ್ವೇಷದ ಅಥವಾ ಮತ್ಸರದ ಮಾತಲ್ಲ, ಆದರೆ ರಾಷ್ಟ್ರೀಯ ಭಾವೈಕ್ಯತೆಯೆಂದರೆ ನಾವು, ಅಂದರೆ ಕನ್ನಡ ಭಾಷಿಕರು, ಕಳೆದುಹೋಗುವುದಲ್ಲ. ಈ ಬಗ್ಗೆ ಎಚ್ಚರ ಅನಿವಾರ್ಯವಾಗಿದೆ.

* * *

ಮೂಢನಂಬಿಕೆಗಳನ್ನು ಸಾಮಾನ್ಯ ಮತಧಾರ್ಮಿಕ ಆಚರಣೆಗಳೊಡನೆ ಸಮೀಕರಿಸುವುದು ಒಂದು ಆಭಾಸ. ನಮ್ಮ ರಾಜ್ಯದಲ್ಲಿ ಮೂಢನಂಬಿಕೆಯಿಂದ ಪ್ರೇರಿತವಾದ ಆಚರಣೆಗಳನ್ನು ನಿಷೇಧಿಸುವ ಉದ್ದೇಶ ದಿಂದ ಕಾಯಿದೆಯೊಂದನ್ನು ರೂಪಿಸುವ ಶ್ಲಾಘನೀಯ ಪ್ರಯತ್ನ ನಡೆಯಿತು. ಅಂತಹ ಕಾಯಿದೆಯು ವಿವಿಧ ಮತಧರ್ಮೀಯರ ಅತಿಸಾಮಾನ್ಯ ಆಚರಣೆಗಳಿಗೂ ಧಕ್ಕೆಯುಂಟುಮಾಡುತ್ತದೆಂಬ ಗುಲ್ಲೆಬ್ಬಿಸಿ ಜಾರಿಗೆ ಬರಬಹುದಾಗಿದ್ದ ಶಾಸನಕ್ಕೆ ಅಡ್ಡಿಯನ್ನೊಡ್ಡಲಾಯಿತು. ಬೆಂಗಳೂರಿನ ರಾಷ್ಟ್ರೀಯ ಕಾನೂನು ವಿಶ್ವವಿದ್ಯಾಲಯ ಮತ್ತು ಹುಬ್ಬಳ್ಳಿಯ ರಾಜ್ಯ ಕಾನೂನು ವಿಶ್ವವಿದ್ಯಾಲಯ ಪ್ರತ್ಯೇಕವಾಗಿ ರಚಿಸಿದ್ದ ಕರಡುಗಳಲ್ಲಿ ಯಾವುದೇ ಒಂದು ಧರ್ಮದವರಿಗೆ ಅನ್ವಯವಾಗು ವಂತಹ ಪ್ರಸ್ತಾವಗಳಿರಲಿಲ್ಲ. ಮೂಲತಃ ಇದ್ದ ಉದ್ದೇಶ ಒಂದೇ : ಮಾನವ ಘನತೆಗೆ ಚ್ಯುತಿ ತರುವಂತಹ ಆಚರಣೆಗಳು, ತನಗೆ ಹಿಂಸೆಯುಂಟುಮಾಡಿಕೊಳ್ಳುವಂತಹ ಅಥವಾ ಇತರರಿಗೆ ಹಿಂಸೆಯಾಗುವಂತಹ ಆಚರಣೆಗಳು ಮತ್ತು ಜನರ ಶೋಷಣೆಗೆ ಸಾಧನವಾಗುವಂತಹ ಮೌಢ್ಯ ಆಚರಣೆಗಳನ್ನಷ್ಟೆ ನಿಷೇಧಿಸುವ ಉದ್ದೇಶವಿದ್ದುದು. ಅನಗತ್ಯವಾಗಿ ಸಲ್ಲದ ಪುಕಾರೊಂದನ್ನು ಹಬ್ಬಿಸಿ ಅಂಥದೊಂದು ಕಾನೂನು ರಚನೆಯಾಗದಂತೆ ಮಾಡಲಾಯಿತು. ಮಹಾರಾಷ್ಟ್ರದಲ್ಲಿ ಜಾರಿಯಾಗಿರುವ ಶಾಸನದಡಿ ಇಂಥವೇ ನಿಬಂಧನೆಗಳಿವೆ ಮತ್ತು ಅವುಗಳಿಂದ ಯಾವ ಮತಧರ್ಮೀಯರ ಸಾಂಪ್ರದಾಯಿಕ ಆಚರಣೆಗಳಿಗೂ ಅಡ್ಡಿಯುಂಟಾಗಿಲ್ಲ. ೨೦೧೪ರ ಅವಧಿಯಲ್ಲಿ ಈ ಶಾಸನದಡಿ ಕೆಲವು ಅಪರಾಧ ಪ್ರಕರಣಗಳನ್ನು ದಾಖಲು ಮಾಡಲಾಗಿತ್ತು. ಸುಮಾರು ೪೫ ಪ್ರಕರಣಗಳ ಪೈಕಿ ಹಿಂದು ಮತಧರ್ಮೀಯರ ಮೌಢ್ಯಾಚರಣೆಗಳಿಗೆ ಸಂಬಂಧಿಸಿ ದಂಥವು ಬೇರೆ ಮತಧರ್ಮೀಯರಿಗೆ ಸಂಬಂಧಿಸಿದ್ದವುಗಳಿಗಿಂತಲೂ ಕಡಿಮೆ ಇದ್ದುವು. ಮಹಿಳೆಯರ ಮಾಂಗಲ್ಯ ಧಾರಣೆಗೆ ಅಡ್ಡಿ ಬರುತ್ತದೆ, ಮಹಿಳೆಯರು ಕುಂಕುಮ ಇಟ್ಟುಕೊಳ್ಳಲಾಗುವುದಿಲ್ಲ, ಬ್ರಾಹ್ಮಣರು ಜನಿವಾರ ಧರಿಸಲಾಗುವುದಿಲ್ಲ ಎಂಬಂತಹ ಸುಳ್ಳುಗಳನ್ನು ಮುಂದೆಮಾಡಿ ಶಾಸನವನ್ನು ಹಿಮ್ಮೆಟ್ಟಿಸಲಾಯಿತು. ಬೌದ್ಧಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಇದೊಂದು ಹಿನ್ನಡೆ. ಸಾಹಿತಿಗಳು ಮತ್ತು ಸಾಂಸ್ಕೃತಿಕ ಕಾರ್ಯಕರ್ತರು ಮಧ್ಯಪ್ರವೇಶ ಮಾಡಿ ಶಾಸನವನ್ನು ಜಾರಿಗೆ ತರಲು ಸಹಕಾರ ನೀಡಬೇಕು, ಮೌಢ್ಯಾಚರಣೆಗಳನ್ನು ನಿವಾರಿಸಬೇಕು, ಮಾನವ ಘನತೆಯನ್ನು ಎತ್ತಿಹಿಡಿಯಬೇಕು. ಇಂತಹ ಕನಿಷ್ಠ ಸಾಮಾಜಿಕ ಜವಾಬ್ದಾರಿಗಳನ್ನು ಸಹ ನಿರ್ವಹಿಸಲಾಗದಿದ್ದರೆ ಶ್ರೇಷ್ಠ ಸಾಹಿತ್ಯ ಮತ್ತು ಸಂಸ್ಕೃತಿಗಳು ಸಾಧಿಸುವುದು ಬೇರೇನನ್ನು?

* * *

ಸಾಹಿತ್ಯ ಸಾಹಿತಿ ಅಭಿವ್ಯಕ್ತಿ ಇವುಗಳ ನಡುವೆ ಅವಿನಾಭಾವ ಸಂಬಂಧವಿದೆ. ಆದ್ದರಿಂದ ಯಾವೊಂದಕ್ಕೆ ಅಡಚಣೆಯುಂಟಾದರೂ ಒಟ್ಟಂದಕ್ಕೆ ಚ್ಯುತಿಯುಂಟಾಗುವುದು ನಿಶ್ಚಿತ. ಅಷ್ಟೇ ಮುಖ್ಯವಾದ್ದು ಸಾಹಿತ್ಯದ ಮುಖೇನ ಏನನ್ನು ಅಭಿವ್ಯಕ್ತಿಸುತ್ತೇವೆ ಎಂಬುದು. ಓದುಗನ ದೃಷ್ಟಿಯಿಂದ ಸ್ವೀಕಾರ ಮತ್ತು ನಿರಾಕರಣೆಗೆ ಸಾಹಿತಿಗಿರುವಷ್ಟೇ ಸ್ವಾತಂತ್ರ್ಯವಿದೆ. ಈ ಹಿನ್ನೆಲೆಯಲ್ಲಿ ಬೌದ್ಧಿಕ ಜಡ್ಡುತನವು ಅಸಮರ್ಥನೀಯ ಮತ್ತು ಅನವಶ್ಯಕ. ಸಾಹಿತ್ಯ ಮತ್ತು ಸಾಹಿತ್ಯೇತರ ಕ್ಷೇತ್ರಗಳಲ್ಲಿ ಅಭಿವ್ಯಕ್ತಿಗೆ ಅಡೆತಡೆ ಉಂಟಾಗುತ್ತಿರುವುದು 'ಮನಸ್ಸಿಗೆ ನೋವುಂಟಾಗುತ್ತದೆ' ಎಂಬ ಕಾರಣಕ್ಕೆ. ಸಾಹಿತ್ಯ ಮತ್ತು ಪುರಾಣ ಗಳನ್ನು ಇತಿಹಾಸದ ಸ್ಥಾನದಲ್ಲಿರಿಸಿದಾಗ ಮಾತ್ರವೇ ಇಂತಹ 'ನೋವು' ಸಾಧ್ಯ. ನಾವು ಮನಸ್ಸು ಗಟ್ಟಿಮಾಡಿಕೊಳ್ಳುವುದು ಯಾವಾಗ ? ಯಾವುದೋ ದೇವತೆಯನ್ನೋ ದೇವತಾಪುರುಷರೆಂದು ಕರೆಯಲಾದವರನ್ನೋ ಕುರಿತು ಲಘುವಾಗಿ ಮಾತನಾಡಿದರೆ ನೋವುಂಟಾಗುವುದಾದರೆ ನಾಸ್ತಿಕತೆಯನ್ನು ಹಂಗಿಸಿದಾಗ ನಾಸ್ತಿಕನಿಗೂ ನೋವುಂಟಾಗಬೇಕಲ್ಲವೆ ? ಆದರೆ ಈವರೆಗೆ ನಾಸ್ತಿಕರಿಂದ ಅಂತಹ ಪ್ರಸಂಗಗಳು ಬಂದಿಲ್ಲ. ಸಹನೆಯು ಸದ್ವರ್ತನೆಯ ಮೊದಲ ಮೆಟ್ಟಿಲು ಎನ್ನುತ್ತಾರೆ. ಜಡ್ಡುತನಕ್ಕೆ ಪರ್ಯಾಯ ಸಹನೆ. ಇದನ್ನು ಮಾನ್ಯ ಮಾಡಿದರೆ ಅಭಿವ್ಯಕ್ತಿಗೆ ಅಡ್ಡಗಾಲು ಹಾಕುವುದು ಬಹುತೇಕ ಇಲ್ಲವಾಗುತ್ತದೆ. ಇದಕ್ಕೆ ಇಂಬುಕೊಡಬೇಕಾದ ಕರ್ತವ್ಯ ಸಹ ಸಾಹಿತ್ಯ–ಸಂಸ್ಕೃತಿಗಳದ್ದೇ. ❑




**ಅಭಿನಂದನೆಗಳು**

ಬಸವ ವೇದಿಕೆಯು ಬೆಂಗಳೂರಿನಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ನಿಘಂಟುತಜ್ಞ, ಶತಾಯು ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರಿಗೆ 'ಬಸವಶ್ರೀ' ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು. ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದಿಂದ ಹಾರ್ದಿಕ ಅಭಿನಂದನೆಗಳು.

# ಟಿಬೆಟ್ಟಿನಲ್ಲಿ ಮುಗ್ಗಟ್ಟಿನ ಪರಿಹಾರದತ್ತ

ಮೇ ೨೦೧೫ರಲ್ಲಿ ಭಾರತದ ಪ್ರಧಾನಿ ಚೀಣಾಕ್ಕೆ ಭೇಟಿ ನೀಡಿದ್ದಾರೆ. ಬಹುಶಃ ಟಿಬೆಟ್ಟಿನ ಪ್ರಶ್ನೆಯನ್ನು ಚರ್ಚಿಸಿರುವ ಸಾಧ್ಯತೆಯೂ ಇದೆ. ಆ ಹಿನ್ನೆಲೆಯಲ್ಲಿ ಪ್ರಸ್ತುತ ಲೇಖನವು ಉಪಯುಕ್ತ ಮಾಹಿತಿ ಮತ್ತು ಮುಗ್ಗಟ್ಟಿನ ಪರಿಹಾರಕ್ಕೆ ಹಾದಿ ಕಾಣಲು ಒಂದು ವಿಧಾನವನ್ನು ಮುಂದಿಡುತ್ತದೆ.

ಜುಲೈ ೨೦೦೨ರಲ್ಲಿ ಟಿಬೆಟ್ಟಿನ ಗಡಿಯಾಚೆಯ ಘೋಷಿತ ಸರ್ಕಾರದ ಪ್ರಧಾನಿ ರಿಂಪೋಚೆ 'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆಯ ಸಂದರ್ಶನದಲ್ಲಿ ಹೇಳಿದ್ದ ಮಾತುಗಳಿವು : "ಚೀಣಾದಿಂದ ರಾಜಕೀಯವಾಗಿ ಪ್ರತ್ಯೇಕಗೊಳ್ಳುವುದು ಮುಖ್ಯವಲ್ಲ. ಟಿಬೆಟ್ಟಿನ ನಾಗರಿಕತೆಗೆ ಜೀವ ತುಂಬುವುದು ಹೆಚ್ಚು ಮುಖ್ಯ. ಟಿಬೆಟ್ ಎಂದರೆ ಕೇವಲ ಒಂದು ರಾಷ್ಟ್ರ ಅಥವಾ ಪ್ರಭುತ್ವವಲ್ಲ. ಅದೊಂದು ಅನನ್ಯ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಪರಂಪರೆ. ಅದನ್ನು ಚೀಣಾದ ಒಂದು ಭಾಗವಾಗಿಯೂ ಟಿಬೆಟ್‌ನಲ್ಲಿ ಜೀವಂತವಿರಿಸಬಹುದು; ಚೀಣಾದಿಂದ ಪ್ರತ್ಯೇಕಗೊಂಡೂ ಅದನ್ನು ಉಳಿಸಿಕೊಳ್ಳದೆಯೂ ಹೋಗಬಹುದು. ಮಾನವ ಜನಾಂಗಕ್ಕೆ ಭವಿಷ್ಯದಲ್ಲಿ ಅದು ಲಭ್ಯವಿರುವಂತೆ ಮಾಡುವುದು ನಮ್ಮ ಮೂಲ ಆಕಾಂಕ್ಷೆ. ಚೀಣಾ ನಮ್ಮ ಶತ್ರುವಲ್ಲ. ಚೀಣಾದ ಜನತೆಗೆ ನಮ್ಮ ಸಹಕಾರದ ಅಗತ್ಯವಿದೆ. ಅಂತೆಯೇ ಆಧ್ಯಾತ್ಮಿಕವಾಗಿ ನಮ್ಮ ಮಾರ್ಗದರ್ಶನವೂ ಅವರಿಗೆ ಬೇಕು. ಒಂದು ಸಾವಿರ ವರ್ಷಗಳಿಂದ ಇದು ನಡೆದುಬಂದಿದೆ."

ಈ ಮಾತು ಸಂಘರ್ಷವನ್ನು ಸೂಚಿಸುವುದಿಲ್ಲ. ಟಿಬೆಟ್ಟಿನ ವಿಚಾರವು "ಅನನ್ಯ ನಾಗರಿಕತೆಯಾಗಿ ಉಳಿಯುವ ಸ್ವಾತಂತ್ರ್ಯ"ಕ್ಕೆ ಸಂಬಂಧಿಸಿದ್ದು. ಮೂರು ಅಂಶಗಳನ್ನು ನಾವು ಗಮನಿಸಬೇಕು : (ಅ) ರಕ್ಷಣೆ ನೀಡುವ ಜವಾಬ್ದಾರಿ, (ಆ) ಭಾರತದ ಪಾತ್ರ, ಮತ್ತು (ಇ) ಅಮೆರಿಕಾ ಹಾಗೂ ವಿಶ್ವದ ಇತರ ರಾಷ್ಟ್ರಗಳ ಪಾತ್ರ. ಅಗ್ರ ಬಲಶಾಲಿ ರಾಷ್ಟ್ರಗಳಾಗಲಿ, ವಿಶ್ವಸಂಸ್ಥೆ ಆಗಲಿ, ಇಲ್ಲಿ ಮೂಗು ತೂರಿಸಬೇಕೆ ಎಂಬುದು ಪ್ರಶ್ನೆ.

ಟಿಬೆಟ್ ಮತ್ತು ಚೀಣಾದ ನಡುವಣ ಸಂಬಂಧ ನಡೆದುಬಂದಿರುವುದು ಹೇಗೆ ? ಟಿಬೆಟ್ಟಿನ ಭಾಷೆಯಲ್ಲಿ ಟಿಬೆಟ್ಟಿನ ಹೆಸರು 'ಬೋಡ್' ಎಂದು. ಅದಕ್ಕೆ ಕನಿಷ್ಠ ೧೭೦೦ ವರ್ಷಗಳ ಇತಿಹಾಸವಿದೆ. ಕ್ರಿಸ್ತಶಕ ೬೦೦ರ ಸುಮಾರಿನಲ್ಲಿ ಯಾರ್ಲುಂಗ್‌ನ ನಮ್ರಿ ಸೋಂಗ್‌ತ್ಸಾನ್ ಟಿಬೆಟ್ಟಿನ ವಿವಿಧ ರಾಜಪ್ರಭುತ್ವಗಳನ್ನು ಒಗ್ಗೂಡಿಸಲು ಆರಂಭಿಸಿದ. ಅವನು ತ್ಸಾಂಗ್‌ಪೊ ನದಿಯ ದಕ್ಷಿಣದವನು. ೬೨೭ರಲ್ಲಿ ಸೋಂಗ್‌ತ್ಸಾನ್ ಗಂಪೋ ಅಧಿಕಾರಕ್ಕೆ ಬಂದು ಅವನ ತಂದೆಯ ಯತ್ನವನ್ನು ಗಟ್ಟಿಗೊಳಿಸಿದ. ಸುಮಾರು ೬೪೧ರಲ್ಲಿ ಅವನು ಟಿಬೆಟ್ಟಿಗೆ ಬೌದ್ಧಮತವನ್ನು ಪರಿಚಯಿಸಿದ. ಅವನಿಗಾಗಲೆ ಟಿಬೆಟ್ಟಿನ ಮೂವರು ಮತ್ತು ನೇಪಾಳದ ಒಬ್ಬಾಕೆ ಹೆಂಡತಿಯರಾಗಿದ್ದರು. ಜೊತೆಗೊಬ್ಬಳು ಚೀಣಾದ ರಾಜಕುಮಾರಿಯನ್ನೂ ಮದುವೆಯಾದ. ಅವಳ ಹೆಸರು ವೆನ್ ಚೆಂಗ್. ಚೀಣಾಕ್ಕೆ ಟಿಬೆಟ್ಟಿನ ಭಾಷೆಯಲ್ಲಿ ರಿಗ್ಯ-ನಾಗ್ ಎಂಬ ಹೆಸರಿದೆ. ಇತಿಹಾಸದಲ್ಲಿ ಬೋಡ್ ಮತ್ತು ರಿಗ್ಯ-ನಾಗ್ ಪ್ರತ್ಯೇಕವಾಗಿ ದಾಖಲಾಗಿವೆ. ಚೀಣಾದ ತಾಂಗ್ ಸಂತತಿಯ ಆಳ್ವಿಕೆ ಇದ್ದ ಕಾಲದಲ್ಲಿ ೯೭೦ರಲ್ಲಿ ಇವೆರಡರ ನಡುವೆ ಘರ್ಷಣೆ ಉಂಟಾಯಿತು. ತಾಂಗ್ ರಾಜನು ಟಿಬೆಟ್ಟನ್ನು ಸೋಲಿಸಲಾಗಲಿಲ್ಲ. ಬದಲಾಗಿ, ಟಿಬೆಟ್ಟಿನ ಪ್ರಭುವು ಮಧ್ಯ ಏಷ್ಯ ಮೂಲಕ ಹಾದುಹೋಗುವ ವ್ಯಾಪಾರಿ ರಸ್ತೆಗಳ ಮೇಲೆ ಹಕ್ಕು ಸ್ಥಾಪಿಸಿಕೊಂಡ.

ತನು ಮೆಹ್ತಾ
ಕನ್ನಡಕ್ಕೆ : ಜಿ. ಆರ್.

೭೭೯ರ ಸುಮಾರಿಗೆ ಟಿಬೆಟ್ಟಿನಲ್ಲಿ ಮೊಟ್ಟಮೊದಲ ಬೌದ್ಧ ಮಠ (ಗೊಂಫಾ) ಹಾಗೂ ವಿದ್ಯಾಲಯ ಸ್ಥಾಪನೆಗೊಂಡಿತು. ಅದರ ಹೆಸರು ಸಮ್ಯೇ ಎಂದು. ಅದನ್ನು ಸ್ಥಾಪಿಸಿದವನು ಭಾರತದ ಶ್ರಮಣ ಪದ್ಮಸಂಭವ. ಲಾಸಾದ ದಕ್ಷಿಣಕ್ಕೆ ೫೦ ಮೈಲಿ ದೂರದಲ್ಲಿದೆ ಅದು. ತಾಂತ್ರಿಕ ಧ್ಯಾನ ಮಾರ್ಗವನ್ನು ಬೋಧಿಸುವ ಪ್ರಧಾನ ಕೇಂದ್ರ ಅದಾಯಿತು. ಧ್ಯಾನದಿಂದ ನಿಗೂಢತೆಯ ಅರಸುವಿಕೆ ಸಾಧ್ಯವೆಂಬ ಭಾವನೆಯೂ ಬೆಳೆಯಿತು. ಅದೇ ಇಂದು ಟಿಬೆಟ್ಟಿನ ಪ್ರಮುಖ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಪರಂಪರೆಯೆಂದು ಗಣನೆಗೆ ಬಂದಿದೆ. ೮೨೧-೮೨೨ರ ನಡುವೆ ಚೀಣಾ ಮತ್ತು ಟಿಬೆಟ್ ಒಂದು ಒಪ್ಪಂದ ಮಾಡಿಕೊಂಡವು. ಲಾಸಾದಲ್ಲಿರುವ ಪೊಟಾಲ ಅರಮನೆಯ ಎದುರಿನಲ್ಲಿರುವ ಒಂದು ಸ್ಮಾರಕದ ಮೇಲೆ ಆ ಶಾಸನವು ಈಗಲೂ ಇದೆ. ೮೫೧ರಿಂದ ೧೨೦೦ರ ನಡುವಿನ ವರ್ಷಗಳಲ್ಲಿ ಟಿಬೆಟ್ಟಿನಲ್ಲಿ ಮತ ಧಾರ್ಮಿಕ ವಿವಾದ ಉಂಟಾಗಿ ಟಿಬೆಟ್ಟಿನ ಸಾಂಪ್ರದಾಯಿಕ 'ಬೋನ್' ಧರ್ಮ ಮತ್ತು ಬೌದ್ಧ ಧರ್ಮದ ನಡುವೆ ತಿಕ್ಕಾಟವು ತೀವ್ರಗೊಂಡಿತು. ಇದರಿಂದಾಗಿ ರಾಜಕೀಯ ಅನಿಶ್ಚಿತತೆಯೂ ತೋರಿಬಂತು. ಮಂಗೋಲಿಯಾದ ಚೆಂಗಿಸ್ ಖಾನ್ ದಾಳಿಗಳನ್ನಾರಂಭಿಸಿದ್ದು ಈ ಕಾಲದಲ್ಲೇ; ಕ್ಲುಪ್ತವಾಗಿ ಹೇಳುವುದಾದರೆ ೧೨೦೭ರಲ್ಲಿ. ಟಿಬೆಟನ್ನರು ಅವನ

ಸಾಮ್ರಾಜ್ಯಕ್ಕೆ ಮಣಿದರು. ಚೀಣಾದ ಹಾಗೂ ಮಧ್ಯ ಏಷ್ಯದ ಹಲವು ಭಾಗಗಳು ಅವನ ಆಳ್ವಿಕೆಗೆ ಬಂದವು. ಅವನ ಮಗ ಕುಬ್ಲ ಖಾನ್ ಚೀಣಾಕ್ಕೆ ಸ್ಥಳಾಂತರಗೊಂಡು ಸಾಮ್ರಾಜ್ಯವನ್ನು ಭದ್ರಪಡಿಸಿಕೊಂಡ. ಚೀಣಾದಲ್ಲಿ ಯುವಾನ್ ಸಂತತಿ ಎಂದರೆ ಅದೇ. ಚೀಣಾ ಸಾಮ್ರಾಜ್ಯದ ಅಧಿಪತಿಯಾಗಿ ಕುಬ್ಲ ಖಾನ್ ಟಿಬೆಟ್ಟಿನ ಲಾಮಾ ಫಕ್ಪ ಎಂಬುವವನಿಗೆ "ತೀ-ಶಿ" (ಪ್ರಭುವಿನ ಗುರು) ಎಂಬ ಮರ್ಯಾದೆ ನೀಡಿದ. ೧೨೭೦ರಲ್ಲಿ ಸ್ವತಃ ಕುಬ್ಲ ಖಾನ್ ಟಿಬೆಟ್ಟಿನ ಬೌದ್ಧಮತಕ್ಕೆ ಪರಿವರ್ತನೆಗೊಂಡ.

ಚೀಣಾ ಮತ್ತು ಟಿಬೆಟ್ಟಿನ ಇತಿಹಾಸದ ಆಖ್ಯಾನದಲ್ಲಿ ತೊಡರುಂಟಾಗುವುದು ಅಲ್ಲಿಂದಲೇ. ಚೀಣಾದ ಆಖ್ಯಾನದಂತೆ ಟಿಬೆಟ್ ೧೨೭೦ರಿಂದಲೂ ಚೀಣಾ ಸಾಮ್ರಾಜ್ಯದ ಒಂದು ಭಾಗ; ಟಿಬೆಟ್ಟಿನ ಆಖ್ಯಾನದಂತೆ ಟಿಬೆಟ್ ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಂಡಿದ್ದು ಮಾತ್ರವಲ್ಲ, ಚೀಣಾದ ಸಾಮ್ರಾಟರ ಧಾರ್ಮಿಕ ಜೀವನದಲ್ಲಿ ಅವರನ್ನು ಪ್ರಭಾವಿಸಿತು ಕೂಡ. ತಾವು ಚೀಣಾದ ಸಾಮ್ರಾಟರಿಗೆ ಆಧ್ಯಾತ್ಮಿಕ ಗುರುಗಳು, ಪುರೋಹಿತರು ಮತ್ತು ಪೋಷಕರು ಎಂದು ಟಿಬೆಟ್ಟಿನ ನಾಯಕರು ಅಂದಿನಿಂದಲೂ ಹೇಳಿಕೊಳ್ಳುತ್ತಾ ಬಂದಿದ್ದಾರೆ. ಪುರೋಹಿತ-ಪೋಷಕ ಎಂಬ ಅಂಕಿತವು ತನ್ನದೇ ಪ್ರಾಬಲ್ಯವನ್ನು ಹೊಂದಿದೆ. ಹೀಗಾಗಿ, ಆಗಿನಿಂದಲೂ ಚೀಣಾದ ಸಾಮ್ರಾಟರು ಟಿಬೆಟ್ಟಿಗೆ ಸ್ವಾತಂತ್ರ್ಯದ ಹಕ್ಕನ್ನು ಮಾನ್ಯ ಮಾಡಿದ್ದಾರೆ, ಟಿಬೆಟ್ಟಿನ ಸಂಸ್ಕೃತಿ ಮತ್ತು ರಾಜಕೀಯ ಸ್ವಾಯತ್ತತೆಗೆ ಮಾನ್ಯತೆ ನೀಡಿದ್ದಾರೆ. ಅದಕ್ಕೆ ಪ್ರತಿಯಾಗಿ ಟಿಬೆಟ್ಟಿನ ಆಧ್ಯಾತ್ಮಿಕ ಮತ್ತು ಧಾರ್ಮಿಕ ಮಾರ್ಗದರ್ಶನವನ್ನು ಸಾಮ್ರಾಟರು ಪಡೆಯುತ್ತಾ ಬಂದಿದ್ದಾರೆ. ೧೨೭೦ರ ನಂತರದಲ್ಲಿ ಚೀಣಾ-ಟಿಬೆಟ್‌ಗಳ ಇತಿಹಾಸ ಜೊತೆಜೊತೆಯಲ್ಲಿ ಸಾಗಿಬಂದಿದೆ. ಆದರೆ ತೀವ್ರ ಭಿನ್ನತೆಗಳು ಸಹ ವ್ಯಕ್ತವಾಗಿವೆ. ಚೀಣಾದೊಡನೆ ಟಿಬೆಟ್ ಹೊಂದಿದ್ದ ಸಂಬಂಧ ಸಂಕೀರ್ಣವಾದ್ದು; ಆದರೆ ಸಂಬಂಧವು ಅನೌಪಚಾರಿಕವಾದ್ದು ಮತ್ತು ಲಿಖಿತ ಒಪ್ಪಂದಗಳು ಇಲ್ಲದಿರುವಂಥದು. ೧೬ನೆಯ ಶತಮಾನದವರೆಗೆ ಟಿಬೆಟ್ ಚೀಣಾದ ರಕ್ಷಣೆಗೆ ಒಳಗಾಗಿತ್ತು, ಆದರೆ ಚೀಣಾ ನೇರವಾಗಿ ಅಲ್ಲಿ ಆಳ್ವಿಕೆ ನಡೆಸಲಿಲ್ಲ. ತನ್ನ ಆಡಳಿತವನ್ನು ಟಿಬೆಟ್ ತಾನೇ ನಡೆಸಿಕೊಳ್ಳುತ್ತಿತ್ತು.

ಬ್ರಿಟಿಷರು ಏಷ್ಯದೊಳಕ್ಕೆ ಕಾಲಿರಿಸಿದ ನಂತರ ಟಿಬೆಟ್ಟಿನ ಸ್ವಾತಂತ್ರ್ಯದ ತೊಡಕಿನ ಪ್ರಶ್ನೆ ಬಿಗಡಾಯಿಸಿತು. ಪಾಪಿ ಕರ್ನಲ್ ಫ್ರಾನ್ಸಿಸ್ ಯಂಗ್‌ಹಸ್ಬೆಂಡ್ ಮೂರು ಸಾವಿರ ಬ್ರಿಟಿಷ್ ಸೈನಿಕರೊಡನೆ ಟಿಬೆಟ್ಟಿನ ಗ್ಯಾವುಂ ಎಂಬಲ್ಲಿಗೆ ೧೯೦೩-೦೪ರಲ್ಲಿ ನುಗ್ಗಿದ. ಅಂದಿನ ೧೩ನೆಯ ದಲೈಲಾಮಾ ಓಡಿಹೋಗಿ ಮಂಗೋಲಿಯಾ, ನಂತರ ಚೀಣಾದಲ್ಲಿ, ಆಶ್ರಯ ಪಡೆಯಬೇಕಾಯಿತು. ಆದರೆ ಟಿಬೆಟ್ ಬ್ರಿಟಿಷರಿಗೆ ಶರಣಾಗಲಿಲ್ಲ. ಒಪ್ಪಂದವೊಂದನ್ನು ಮಾಡಿಕೊಂಡು ಬ್ರಿಟಿಷರು ಹಿಂದಿರುಗಿದರು. ಒಪ್ಪಂದದ ಪ್ರಕಾರ ಬ್ರಿಟಿಷರು ಪಶ್ಚಿಮ ಟಿಬೆಟ್ಟಿನ ಗ್ಯಾಂತ್ಸೆ ಮತ್ತು ಗಾರ್ತೋಕ್‌ಗಳಲ್ಲಿ ವ್ಯಾಪಾರದ ಏಜೆಂಟನನ್ನು ಇರಿಸಲು ಸಾಧ್ಯವಾಯಿತು. ೧೯೦೬ರಲ್ಲಿ ಬ್ರಿಟಿಷರು ಅಸ್ಪಷ್ಟವಾಗಿ ಟಿಬೆಟ್ಟಿನ ಮೇಲೆ ಚೀಣಾದ ಅಧಿಕಾರವನ್ನು ಒಪ್ಪಿದರು. ಅದಕ್ಕೆ ಸ್ವಲ್ಪ ಮುಂಚೆ ಪೂರ್ವ ಟಿಬೆಟ್ಟಿನ ಮೇಲೆ ಚೀಣಾದ ಸೈನಿಕರ ಆಕ್ರಮಣ ಜರುಗಿತ್ತು. ತರುವಾಯ ೧೯೦೯ರಲ್ಲಿ ದಲೈಲಾಮಾ ಚೀಣಾದಿಂದ ಹಿಂದಿರುಗಿದ. ಆದರೆ ಚೀಣಾದ ಸೇನಾ ತುಕಡಿಗಳು ಖಾಂ ಪ್ರದೇಶದ ಭಾಗಗಳಲ್ಲಿ ಇನ್ನೂ ಇದ್ದವು; ಆದ್ದರಿಂದ ದಲೈಲಾಮಾ ಬ್ರಿಟಿಷರ ನೆರವನ್ನು ಕೋರಿದ. ಇದಕ್ಕೆ ಚೀಣಾದ ಪ್ರತಿಕ್ರಿಯೆ ಉಗ್ರವಾಗಿತ್ತು. ೧೯೧೦ರಲ್ಲಿ ಚೀಣಾದ ಸೈನ್ಯವು ಝಾವೊ ಎರ್ಫೆಂಗ್‌ನ ನೇತೃತ್ವದಲ್ಲಿ ಟಿಬೆಟ್ಟನ್ನು ಆಕ್ರಮಿಸಿ ನೇರವಾಗಿ ಲಾಸಾಕ್ಕೆ ನುಗ್ಗಿತು. ಸೈನ್ಯದಲ್ಲಿ ೨೦೦೦ ಸೈನಿಕರಿದ್ದರು. ದಲೈಲಾಮಾ ಭಾರತಕ್ಕೆ ಓಡಿಬಂದ. ಟಿಬೆಟ್ಟಿನಲ್ಲಿ ಕಾಳಗ ಮುಂದುವರಿದು ಕಡೆಗೆ ಚೀಣಿ ಸೈನ್ಯವನ್ನು ಹೊರದೂಡಲಾಯಿತು.

೧೯೧೧ರಲ್ಲಿ ಚೀಣಾದಲ್ಲಿ ಅಧಿಕಾರ ದಲ್ಲಿದ್ದ ಚಿಂಗ್ ಸಂತತಿಯ ಆಳ್ವಿಕೆಯು ಪತನಗೊಂಡಿತು ಮತ್ತು ಯುವಾನ್ ಶಿಕೈ ನೇತೃತ್ವದಲ್ಲಿ ಚೀಣಾ ಗಣರಾಜ್ಯದ ಘೋಷಣೆಯಾಯಿತು. ಅವನು ಮಾಡಿದ ಮೊದಲ ಕೆಲಸವೆಂದರೆ ಟಿಬೆಟ್, ಝಿಂಜಿಯಾಂಗ್ (ಪೂರ್ವ ತುರ್ಕಿಸ್ತಾನ) ಮತ್ತು ಮಂಗೋಲಿಯ ಚೀಣಾದ ರಾಜ್ಯಗಳೆಂದು ಅಧಿಕೃತವಾಗಿ ಪ್ರಕಟಿಸಿದ್ದು. ಅದು ಬಹುಕಾಲವೇನೂ ಊರ್ಜಿತವಾಗಲಿಲ್ಲ, ಏಕೆಂದರೆ ಚೀಣೀಯರನ್ನು ಟಿಬೆಟ್ಟಿನಿಂದ ಹೊರಹಾಕಲಾಯಿತು ಮತ್ತು ೧೩ನೆಯ ದಲೈಲಾಮಾ ಟಿಬೆಟ್ಟಿಗೆ ಹಿಂದಿರುಗಿದ. ೧೯೧೨ರ ಆಗಸ್ಟ್ ೧೨ರಂದು ಟಿಬೆಟ್ಟಿಗೆ ಶರಣಾಗಿರುವುದಾಗಿ ಚೀಣಾ ಒಂದು ಒಪ್ಪಂದಕ್ಕೆ ಸಹಿ ಹಾಕಿತು. ಆಗ ಚೀಣೀಯರು ಸ್ವದೇಶಕ್ಕೆ ಮರಳಲು ಭಾರತವನ್ನು ಹಾದುಹೋಗಬೇಕಾಗಿ ಬಂತು. ೧೯೧೩ರಲ್ಲಿ ದಲೈಲಾಮಾ ಟಿಬೆಟ್ಟನ್ನು ಸ್ವತಂತ್ರ ರಾಷ್ಟ್ರವೆಂದು ಘೋಷಿಸಿದ. ಅದರ ತರುವಾಯದಲ್ಲಿ ಸಿಮ್ಲಾದಲ್ಲಿ ಒಂದು ಸಮಾವೇಶ ಜರುಗಿತು. ಬ್ರಿಟನ್, ಚೀಣಾ ಮತ್ತು ಟಿಬೆಟ್ ಅದರಲ್ಲಿ ಭಾಗವಹಿಸಿದುವು. ಭಾರತವು ವಸಾಹತು ಆಳ್ವಿಕೆಯಡಿ ಇತ್ತಾದ್ದರಿಂದ ಭಾರತವು ಭಾಗವಹಿಸುವ ಪ್ರಶ್ನೆಯೇ ಇರಲಿಲ್ಲ. ಈ ಸಮಾವೇಶದ ತೀರ್ಮಾನದಂತೆ ಟಿಬೆಟ್ಟನ್ನು ಇಬ್ಭಾಗ ಮಾಡಲಾಯಿತು : ಒಳ ಟಿಬೆಟ್, ಅಂದರೆ ಅತಿ ಪೂರ್ವದ ಪ್ರಾಂತ್ಯಗಳು, ಚೀಣಾದ ಆಳ್ವಿಕೆಯಲ್ಲಿರುತ್ತದೆ ಮತ್ತು ಹೊರ ಟಿಬೆಟ್ ಸ್ವಾಯತ್ತವಾಗಿರುತ್ತದೆ ಎಂಬ ತೀರ್ಮಾನ ಅದು. ಬ್ರಿಟನ್ ಮತ್ತು ಚೀಣಾ ತಮ್ಮ ಪ್ರಾಬಲ್ಯದಿಂದ ಆ ತೀರ್ಮಾನವನ್ನು ಟಿಬೆಟ್ಟಿನ ಮೇಲೆ ಹೇರಿದರೆಂಬುದು ಸ್ವಯಂವೇದ್ಯ. ಸಮಾವೇಶದ ನಂತರ ಈ ತೀರ್ಮಾನವನ್ನು ಮಾನ್ಯ ಮಾಡಲು ಚೀಣಾ ನಿರಾಕರಿಸಿತು. ೧೯೧೮ರಲ್ಲಿ ಟಿಬೆಟ್ಟಿನ ಸೈನ್ಯವು ಪೂರ್ವದ ಪ್ರದೇಶವನ್ನು ಪ್ರವೇಶಿಸಿ ಚೀಣಾದ ಸೈನ್ಯವನ್ನು ಹಿಮ್ಮೆಟ್ಟಿಸಿತು. ೧೯೨೦ರಲ್ಲಿ ಚಾರ್ಲ್ಸ್ ಬೆಲ್ ಎಂಬುವವನನ್ನು ಬ್ರಿಟನ್ನಿನ ಪ್ರತಿನಿಧಿಯಾಗಿ ಲಾಸಾಕ್ಕೆ ಕಳುಹಿಸಲಾಯಿತು. ಟಿಬೆಟ್ಟಿನ ಸ್ವಯಮಾಡಳಿತ ಮತ್ತು ಸ್ವಯಂ ರಕ್ಷಣೆಗೆ ಬ್ರಿಟನ್ನಿನ ಬೆಂಬಲ ಸದಾ ನಿಶ್ಚಿತವೆಂದು ಸೂಚಿಸಲು ಈ ಕ್ರಮ. ಎರಡನೆಯ ಮಹಾಯುದ್ಧದ ೧೯೪೧-೪೪ರ ಅವಧಿಯಲ್ಲಿ ಟಿಬೆಟ್ ತಟಸ್ಥವಾಗಿದ್ದು ಚೀಣಾದ ಚಿಯಾಂಗ್ ಕೈ-ಶೇಕ್ ಹಾಗೂ ಅಮೆರಿಕಾ ಸೈನ್ಯಗಳಿಗೆ ಯುದ್ಧಸಾಮಗ್ರಿ ರವಾನಿಸಲು ತನ್ನ ಪ್ರದೇಶ ಮುಕ್ತವಾಗಿಲ್ಲವೆಂದು ಖಡಾಖಂಡಿತವಾಗಿ ಹೇಳಿಬಿಟ್ಟಿತು.

ನಂತರದ ಇತಿಹಾಸ ತಿಳಿದೇ ಇದೆ : ೧೯೪೯ರ ಅಕ್ಟೋಬರ್ ೧ರಂದು ಮಾವೋ ಝೆಡೋಂಗ್ ಚೀಣಾದ ಜನತಾ ಗಣರಾಜ್ಯವನ್ನು ಘೋಷಿಸಿದ್ದು ಮತ್ತು ಚೀಣಾದ ಜನತಾ ವಿಮೋಚನಾ ಸೈನ್ಯವು "ಟಿಬೆಟ್ಟನ್ನು ವಿದೇಶಿ ಸಾಮ್ರಾಜ್ಯಶಾಹಿಗಳಿಂದ






ಮುಕ್ತಗೊಳಿಸಲು ಬದ್ಧ"ವೆಂದು ಘೋಷಿಸಿದ್ದು. ಅಕ್ಟೋಬರ್ ೭ರಂದು ಚೀಣೀ ಸೈನ್ಯವು ಯಾಂಗ್‌ತ್ಸೆ ನದಿಯನ್ನು ದಾಟಿ ಮಧ್ಯ ಟಿಬೆಟನ್ನು ಪ್ರವೇಶಿಸಿತು ಮತ್ತು ಚಾಂಡೋ ಎಂಬಲ್ಲಿದ್ದ ಚಿಕ್ಕ ಮಿಲಿಟರಿ ಶಸ್ತ್ರಾಗಾರವನ್ನು ನಾಶ ಮಾಡಿತು. ಟಿಬೆಟ್ ಎಂದಿನಿಂದಲೂ ಚೀಣಾದ ಭಾಗವೇ ಆಗಿದ್ದಿತೆಂಬುದು ಅದರ ನಿಲುವಾಗಿತ್ತು. ತಕರಾರು ವಿಶ್ವಸಂಸ್ಥೆಯ ಭದ್ರತಾ ಮಂಡಲಿಗೆ ಹೋದಾಗ ಬ್ರಿಟನ್ ಒಂದು ಪ್ರಸ್ತಾವವನ್ನು ಮಂಡಿಸಿತು; ಚೀಣಾ ಮತ್ತು ಟಿಬೆಟ್ ಪರಸ್ಪರ ಮಾತುಕತೆ ಮುಖಾಂತರ ಪ್ರಶ್ನೆಯನ್ನು ಬಗೆಹರಿಸಿಕೊಳ್ಳಬೇಕು, ಎಂದು. ಅದು ಅಂಗೀಕೃತ ವಾಯಿತು. ಮಾತುಕತೆಯ ಫಲವಾಗಿ ೧೯೫೧ರ ಮೇ ೨೩ರಂದು ಒಂದು ಒಪ್ಪಂದಕ್ಕೆ ಸಹಿ ಬಿದ್ದಿತು. ಟಿಬೆಟ್ ಪರವಾಗಿ ಸಹಿ ಹಾಕಿದ್ದು ನ್‌ಗಾಪೊ ನ್‌ಗವಾಂಗ್ ಜಿಗ್ಮೆ. ಮಾತುಕತೆಯ ಸಂದರ್ಭದಲ್ಲಿ ಚೀಣಾ ತನ್ನ ಮೇಲೆ ಒತ್ತಡ ಹೇರಿದ್ದಿತೆಂದೇನೂ ಟಿಬೆಟ್ ಹೇಳಲಿಲ್ಲ. ಹಾಗೇನಾದರೂ ಇದ್ದಿದ್ದರೆ ಟಿಬೆಟ್ ಮತ್ತೆ ವಿಶ್ವಸಂಸ್ಥೆಯ ಭದ್ರತಾ ಮಂಡಲಿಗೆ ಹೋಗಿ ಒಪ್ಪಂದವೇನೂ ಸಾಧ್ಯವಾಗಲಿಲ್ಲವೆಂದು ಹೇಳಬಹುದಿತ್ತು. ಒಪ್ಪಂದದಲ್ಲಿ ೧೭ ಅಂಶಗಳಿದ್ದವು. ಅವುಗಳಲ್ಲಿ ಪ್ರಮುಖವಾದ್ದು ಟಿಬೆಟ್ "ರಾಷ್ಟ್ರೀಯ ಸ್ವಾಯತ್ತ ಪ್ರದೇಶ"ವಾಗಿ ಚೀಣಾದ ಭಾಗವಾಗಿರುತ್ತದೆ ಮತ್ತು ಅದಕ್ಕೆ ಪ್ರತಿಯಾಗಿ ಚೀಣಾವು ಟಿಬೆಟ್ಟಿನ ಸಾಂಸ್ಕೃತಿಕ ಮತ್ತು ರಾಜಕೀಯ ಸ್ವಾಯತ್ತತೆಯನ್ನು ನೀಡಿ ಗೌರವಿಸುತ್ತದೆ, ಎಂಬುದು. ನಂತರ ದಲೈಲಾಮಾ ಹಾಗೂ ಚೀಣಾದ ರಾಷ್ಟ್ರೀಯ ಸಭೆ ಒಪ್ಪಂದವನ್ನು ಅಂಗೀಕರಿಸಿರುವುದಾಗಿ ಘೋಷಿಸಲಾಯಿತು. ಅಲ್ಲಿಂದ ಮುಂದೆ ಸಂಕೀರ್ಣವಾದ ರಾಜಕೀಯ ದಾಳಗಳ ಎಸೆತ ಆರಂಭವಾಯಿತು. ೧೯೬೫ರಲ್ಲಿ ಚೀಣಾವು "ಸ್ವಾಯತ್ತ ಟಿಬೆಟ್ ಪ್ರದೇಶ"ವನ್ನು ರಚಿಸಿತು, ಆದರೆ ಆಗ್ಗೆ ಚೀಣಾದಲ್ಲಿ ಜಾರಿಯಲ್ಲಿದ್ದ ಸಾಂಸ್ಕೃತಿಕ ಕ್ರಾಂತಿಗೆ ಟಿಬೆಟ್ಟಿನ ಜನ ಬಲಿಯಾದರು. ಅನನ್ಯ ಬೌದ್ಧ ಸಂಸ್ಕೃತಿಯ ತಾಣಗಳಾಗಿದ್ದ ಗೊಂಫಾ ಮತ್ತಿತರ ಸಂಸ್ಥೆಗಳ ಪೈಕಿ ಸುಮಾರು ಶೇ. ೯೦ರಷ್ಟು ಧ್ವಂಸಗೊಂಡವೆಂದು ಹೇಳುತ್ತಾರೆ. (ಕೈಲಾಸ ಪರ್ವತದ ಎರಡು ಭಾಗಗಳಲ್ಲಿದ್ದ ನ್ಯಾನೇರಿ ಗೊಂಫಾ ಮತ್ತು ಝುತುಲ್ ಫುಕ್ ಗೊಂಫಾ ನಾಶವಾದ್ದು ಆಗಲೇ. ಝುತುಲ್ ಫುಕ್ ಗೊಂಫಾ ಪೂರ್ತಿ ನಾಶವಾಗಲಿಲ್ಲ, ಆದರೆ ನ್ಯಾನೇರಿ ನಾಶವಾಯಿತು. ಅದರಾಚೆಯ ಒಂದು ಗೊಂಫಾ ಲಕ್ಷಣವಾಗಿ ಈಗಲೂ ಚೆನ್ನಾಗಿಯೇ ಉಳಿದಿದೆ). ಬೌದ್ಧ ಸಂನ್ಯಾಸಿಗಳನ್ನು ಹಿಂಸಿಸಲಾಯಿತು, ಬೌದ್ಧ ಧರ್ಮವನ್ನು ಗೇಲಿ ಮಾಡಲಾಯಿತು, ಉತ್ಕೃಷ್ಟ ಹಸ್ತಪ್ರತಿಗಳು ಹಾಗೂ ಕಲಾಕೃತಿಗಳನ್ನು ಹಾಳುಗೆಡವಲಾಯಿತು. ಕೆಲವು ಬೌದ್ಧ ವಿಹಾರಗಳ ಆಡಳಿತವನ್ನು ಸಹ ಕಸಿದುಕೊಳ್ಳಲಾಯಿತು. ಟಿಬೆಟ್ಟಿನಲ್ಲಿ ಧಾನ್ಯ ಬೆಳೆಯುವ ನಿರ್ದಿಷ್ಟ ಪದ್ಧತಿಯೊಂದಿದ್ದಿತು, ಅದನ್ನು ತಿರುಗುಮುರುಗು ಮಾಡಿ ಟಿಬೆಟ್ಟಿಗೆ ಯೋಗ್ಯವಲ್ಲದ ಪದ್ಧತಿಯೊಂದನ್ನು ಹೇರಲಾಯಿತು. ಇದರ ಪರಿಣಾಮವಾಗಿ ಎಂದೂ ಕಂಡರಿಯದ ಕ್ಷಾಮದ ಬಾಧೆಯು ಟಿಬೆಟ್ಟನ್ನು ತಟ್ಟಿತು.




೧೯೫೧ರ ಒಪ್ಪಂದದಲ್ಲಿ ಅಡಕಗೊಂಡಿದ್ದ ಆಶ್ವಾಸನೆಗಳು ಗಾಳಿಗೆ ತೂರಿಹೋದವು. "ಸಾಂಸ್ಕೃತಿಕ ಮತ್ತು ರಾಜಕೀಯ ಸ್ವಾಯತ್ತತೆ" ಕಾಗದದ ಕಂತೆಯಾಗಿ ಉಳಿಯಿತು, ಅಷ್ಟೆ. ೧೯೫೧ರಿಂದ ಚೀಣಾದ ಉಪಟಳವು ಹದ್ದುಮೀರಿ ಬೆಳೆಯಿತೆಂದು ನಂತರದ ದಿನಗಳಲ್ಲಿ ಟಿಬೆಟ್ ದೂರಿದೆ. ೧೯೫೯ರ ಘಟನೆ ಚಿರಪರಿಚಿತವಾಗಿದೆ. ಟಿಬೆಟ್ಟಿನಲ್ಲಿ ದಂಗೆಯ ಪ್ರಯತ್ನ ನಡೆದು ಚೀಣಾ ಅದನ್ನು ಸದೆಬಡಿಯಿತು. ಆ ಒಂದು ದಶಕದಲ್ಲಿ ಟಿಬೆಟ್ಟಿನ ಸಾವಿರಾರು ಜನರ ಹತ್ಯೆಯಾಯಿತೆಂಬ ಆಪಾದನೆ ಇದೆ. ದಲೈಲಾಮಾ ಹಾಗೂ ಆತನ ಸುಮಾರು ೮೦,೦೦೦ ಹಿಂಬಾಲಕರು ಟಿಬೆಟ್ಟಿನಿಂದ ಪರಾರಿಯಾಗಿ ಭಾರತ, ನೇಪಾಳ ಮತ್ತು ಭೂತಾನ ಸೇರಿಕೊಂಡರು. ೧೯೫೧ರ ಒಪ್ಪಂದವನ್ನು ಚೀಣೀಯರು ಮತ್ತು ದಲೈಲಾಮಾ ಇಬ್ಬರೂ ಕೈಬಿಟ್ಟಂತಾಯಿತು.

೧೯೫೯, ೧೯೬೧ ಮತ್ತು ೧೯೬೫ರಲ್ಲಿ ವಿಶ್ವಸಂಸ್ಥೆಯು ಟಿಬೆಟ್ಟಿನಲ್ಲಿ ಜರುಗಿತೆನ್ನಲಾಗಿದ್ದ ಮಾನವ ಹಕ್ಕುಗಳ ಉಲ್ಲಂಘನೆಯ ಬಗ್ಗೆ ಕಳವಳವನ್ನು ವ್ಯಕ್ತಪಡಿಸುವ ಮೂರು ನಿರ್ಣಯಗಳನ್ನು ಅಂಗೀಕರಿಸಿತು. "ಟಿಬೆಟ್ಟಿನ ಜನರ ಮೂಲಭೂತ ಹಕ್ಕುಗಳು ಮತ್ತು ಸ್ವಾತಂತ್ರ್ಯಕ್ಕೆ ಭಂಗವುಂಟುಮಾಡಬಾರದು ಮತ್ತು ಸ್ವಯಂನಿರ್ಧಾರ ಮಾಡಿಕೊಳ್ಳುವ ಅವರ ಹಕ್ಕಿಗೆ ಚ್ಯುತಿಯುಂಟಾಗಬಾರದು" ಎಂದು ನಿರ್ಣಯಗಳು ಹೇಳಿದವು. ಹೇಳಿದ್ದನ್ನು ಆಚರಣೆಗೆ ತರಲು ವಿಶ್ವಸಂಸ್ಥೆಯಲ್ಲಿ ಸೂಕ್ತ ವ್ಯವಸ್ಥೆ ಇಲ್ಲದಿರುವುದು ಜಗತ್ತಿಗೆ ತಿಳಿದಿದೆ.

ಟಿಬೆಟ್‌ನ ಸಂಘರ್ಷ ಮತ್ತು ಮುಗ್ಗಟ್ಟಿನ ಮೂಲ ಸಮಸ್ಯೆ ಹೀಗೆ ಬಿಚ್ಚಿಕೊಂಡಿತು. ಟಿಬೆಟ್‌ನ ಜನರ ಆಶಯವಿಷ್ಟೆ: ಚೀಣಾ ತನ್ನ ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ಕಾರ್ಯಕ್ರಮಗಳನ್ನು ಟಿಬೆಟ್‌ನ ಮೇಲೆ ಹೇರಕೂಡದು ಮತ್ತು ಆ ಸಂಬಂಧದಲ್ಲಿ ಟಿಬೆಟ್ ಸ್ವತಂತ್ರವಾಗಿರಬೇಕು. ಟಿಬೆಟ್‌ಗೆ ರಾಜಕೀಯ ಸ್ವಾಯತ್ತತೆ ಬೇಕು, ತನ್ನ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಳ್ಳುವ ಅವಕಾಶ ಬೇಕು; ಟಿಬೆಟ್ ತನ್ನ ಈ ಆಶಯವನ್ನು ಪೂರೈಸಿಕೊಳ್ಳಲು ವಿಶಿಷ್ಟ ಸ್ಥಾನಮಾನ ಪಡೆಯಬೇಕು. ಅದಕ್ಕೆ ಅನುವು ಮಾಡಿಕೊಟ್ಟರೆ ಟಿಬೆಟ್ ಚೀಣಾದ ಭಾಗವಾಗಿರಲು ಅಸಮ್ಮತಿಯನ್ನೇನೂ ಸೂಚಿಸುವುದಿಲ್ಲ. ಅಂದರೆ, ತನ್ನ ಸಂರಕ್ಷಿತ ಸ್ಥಾನಮಾನವು ಟಿಬೆಟ್‌ನ ಮೂಲಭೂತ ಆಶಯ.

**ಭಾರತ ಮತ್ತು ಚೀಣಾ**

ಬ್ರಿಟನ್ನಿನ ಸಾಮ್ರಾಜ್ಯಶಾಹಿ ತೆಕ್ಕೆಯಿಂದ ಹೊರ ಬಂದಿರುವ ಭಾರತದ ವಿದೇಶಾಂಗ ನೀತಿಯು ಹಲವು ಗೊಂದಲಗಳ ಗೂಡಾಗಿದೆ. ಚೀಣಾದೊಡಣ ಸಂಬಂಧವು ಅದಕ್ಕೊಂದು ಉದಾಹರಣೆ. ಬ್ರಿಟನ್ನಿನ ಸಾಮ್ರಾಜ್ಯವು ಚೀಣಾದೊಡನೆ ಸತತವಾಗಿ ಕಾದಾಡಿದೆ. ಅದಕ್ಕೆ ಭಾರತದ ಜನರನ್ನು ಬಳಸಿಕೊಂಡಿದ್ದೂ ಉಂಟು. ಚೀಣಾದ ಗಂಟಲಲ್ಲಿ ಅಫೀಮು ತುರುಕುವ ಕಾಲದಲ್ಲಿ ಬ್ರಿಟನ್‌ಗೆ ಭಾರತದ ವ್ಯಾಪಾರಿಗಳು ಸಾಧನವಾಗಿದ್ದರು. ಚೀಣಾ ಸಾಮ್ರಾಜ್ಯದ ವಿರುದ್ಧ ಚೀಣಾದಲ್ಲಿ ಬ್ರಿಟನ್ ಯುದ್ಧಗಳನ್ನು ಹೂಡಿದಾಗ ಭಾರತದ ಜನರು ಬ್ರಿಟನ್ನಿನ ಸೈನ್ಯದಲ್ಲಿದ್ದುದು ಸ್ವಯಂ ಆಯ್ಕೆಯಿಂದಲ್ಲ, ಆದರೆ ಚೀಣಾದ ಸೋಲುಗಳಿಗೆ ಅವರ ಕಾಣಿಕೆ ಇತ್ತು. ಇತಿಹಾಸದಲ್ಲಿ ಟಿಬೆಟ್ ಎಂದೂ ಭಾರತದ ಸಾಮ್ರಾಟರ ಅಧೀನದಲ್ಲಿರಲಿಲ್ಲ, ಆದರೆ ಟಿಬೆಟ್ಟಿನ ಒಂದು ಭಾಗದ ಮೇಲೆ ಭಾರತವನ್ನಾಳುತ್ತಿದ್ದ ಬ್ರಿಟನ್ ಅಧಿಕಾರ ಸ್ಥಾಪಿಸಿಕೊಂಡಿತ್ತು. ಇದಾವುದರಲ್ಲೂ ಭಾರತದ ನೇರ ಪಾತ್ರವಿರಲಿಲ್ಲವಾದರೂ ಚೀಣಾದ ಅಂತರ್ಯದಲ್ಲಿ ಭಾರತದ ವಿರುದ್ಧ ಬೇಗುದಿಯೊಂದಿದೆ. ಭಾರತವು ಇದನ್ನು ಮನದಟ್ಟುಮಾಡಿಕೊಳ್ಳುವುದು ಸದ್ಯದ ಪರಿಸ್ಥಿತಿಯ ನಿರ್ವಹಣೆಗೆ ಅತ್ಯಗತ್ಯ. ಚೀಣಾ ಸಹ ಚರಿತ್ರೆಯ ಒಂದಂಶವನ್ನು ಮರೆಯಬಾರದು : ಬ್ರಿಟನ್ ಭಾರತವನ್ನು ವಸಾಹತು ಮಾಡಿಕೊಳ್ಳುವ ಮುನ್ನ ಎಂದೂ ಭಾರತವು ಚೀಣಾದ ಯಾವುದೇ ಭಾಗದ ಮೇಲೂ ಆಕ್ರಮಣ ನಡೆಸಿರಲಿಲ್ಲ; ಬದಲಾಗಿ, ವ್ಯಾಪಾರ ಮತ್ತು ಸಾಂಸ್ಕೃತಿಕ ಸಂಬಂಧಗಳು ಸುಸೂತ್ರವಾಗಿ ಜಾರಿಯಲ್ಲಿದ್ದವು. ಭಾರತದ ವ್ಯಾಪಾರದ ಮಾರ್ಗವು ಕಾಶ್ಮೀರ ಮತ್ತು ಟಿಬೆಟ್ ಮೂಲಕವೇ ಇರುತ್ತಿದ್ದುದು. ಇಂದು ಅಂತಹ ಮುಕ್ತ ವ್ಯಾಪಾರ ಮತ್ತು ಸಾಂಸ್ಕೃತಿಕ ಸಂಬಂಧಗಳಿಗೆ ಮತ್ತೆ ಅವೇ ಪ್ರದೇಶಗಳು ಮಾರ್ಗ ಒದಗಿಸಬೇಕು. ಎರಡೂ ದೇಶಗಳ ಸಾರ್ವಭೌಮತ್ವದ ಕವಚ ಅದರಲ್ಲಿದೆ.

**ಟಿಬೆಟ್ ಮತ್ತು ಭಾರತ**

ಟಿಬೆಟ್ ಆಶಿಸುವ ರಾಜಕೀಯ ಸ್ವಾಯತ್ತತೆಯು ಭಾರತದ ಪ್ರಜಾಪ್ರಭುತ್ವದ ಕಲ್ಪನೆಗೆ ಹತ್ತಿರವಾದ್ದು. ನಮ್ಮ ಸಂವಿಧಾನದಲ್ಲಿ ರಾಜ್ಯಗಳಿಗೆ ಸ್ವಾಯತ್ತತೆಯುಂಟು. ಭಾಷೆ, ಸಂಸ್ಕೃತಿ, ಮತಧರ್ಮ, ರಾಜಕೀಯ, ಹೀಗೆ ಎಲ್ಲದರಲ್ಲೂ ರಾಜ್ಯಗಳು ತಕ್ಕಮಟ್ಟಿಗೆ ಸ್ವತಂತ್ರ. ನಮ್ಮ "ಪ್ರಜಾಪ್ರಭುತ್ವ ಮೌಲ್ಯಗಳು" ಎಷ್ಟೇ ವಿಕಸಿತವಾಗಿದ್ದರೂ ಟಿಬೆಟ್ಟಿನ ಜನರನ್ನು ಭಾರತದ ಪ್ರಜೆಗಳಾಗಿಬಿಡಿರೆಂದು ಹೇಳುವಂತಿಲ್ಲ. ಕಾಶ್ಮೀರವು ಭಾರತಕ್ಕೆ ಸೇರಿರುವಂತೆ ಟಿಬೆಟ್ ಭೌಗೋಳಿಕವಾಗಿ ಚೀಣಾಕ್ಕೆ ಲಗತ್ತಾಗಿದೆ. ನಮ್ಮ ಮುಂದಿರುವ ಪ್ರಶ್ನೆ ಇದು : "ಅಂತರರಾಷ್ಟ್ರೀಯ ರಾಜಕೀಯ ನೆಲೆಯಲ್ಲಿ, ಇತರ ದೇಶಗಳವರು ಸಂಕಷ್ಟದಲ್ಲಿರುವಾಗ ಅವರನ್ನು ರಕ್ಷಿಸುವ ಜವಾಬ್ದಾರಿ ಎಂಬುದೊಂದಿದೆ. ಭಾರತವು ಟಿಬೆಟ್‌ನ ಜನರನ್ನು ಕುರಿತಂತೆ ಅಂತಹ

ಜವಾಬ್ದಾರಿಯನ್ನು ಎಷ್ಟರಮಟ್ಟಿಗೆ ನಿರ್ವಹಿಸಲು ಸಾಧ್ಯ?" ಚೀಣಾ ಟಿಬೆಟ್ಟಿನ ಮೇಲೆ ಎಂಥದೋ ಒಂದು ಸಾರ್ವಭೌಮತ್ವವನ್ನು ಹೊಂದಿದೆ. ಅದನ್ನು ಮೀರಿ ವ್ಯವಹರಿಸಲು ಭಾರತಕ್ಕೆ ಹಾದಿಯುಂಟೆ ?

**ರಕ್ಷಣೆ ನೀಡುವ ಜವಾಬ್ದಾರಿ**

ಮಾನವನ ಪ್ರಪಂಚ ವೈವಿಧ್ಯಮಯ. ಜನಾಂಗ, ಸಂಸ್ಕೃತಿ, ಮತಧರ್ಮಗಳು, ಆದರ್ಶಗಳು, ಚಿಂತನೆ, ತತ್ತ್ವಶಾಸ್ತ್ರ, ಇವೆಲ್ಲಾ ಭಿನ್ನತೆಗೆ ಮೂಲದ್ರವ್ಯ. ೧೮ ಮತ್ತು ೧೯ನೆಯ ಶತಮಾನಗಳಲ್ಲಿ 'ಏಕಸಂಸ್ಕೃತಿ' ಎಂಬ ಪರಿಕಲ್ಪನೆಯ ಆಧಾರದ ಮೇಲೆ ನಿಲ್ಲುವ, ನಗರೀಕರಣಗೊಂಡ ಮಾನವ ಸಮಾಜದ ಸಾಧ್ಯತೆಯನ್ನು ಕೆಲವರು ಮುಂದುಮಾಡಿದ್ದರು. ಆದರೆ ೨೧ನೆಯ ಶತಮಾನದ ದೃಷ್ಟಿ ಆಕಡೆಗೆ ವಾಲಿಲ್ಲ. ಈಗಿನ ದೃಷ್ಟಿ ಸಂಸ್ಕೃತಿ ಇತ್ಯಾದಿಗಳ ವೈವಿಧ್ಯತೆಯನ್ನು ರಕ್ಷಿಸಬೇಕೆಂಬ ಆಶಯ ಹೊಂದಿದೆ. ವೈವಿಧ್ಯತೆಯನ್ನು ಸರ್ವಾಂಗೀಣವಾಗಿ ಅಂಗೀಕರಿಸಬೇಕೆಂಬುದು ಇಂದಿನ ಕರೆ. ಅದರಿಂದ ಜ್ಞಾನದ ಬೆಳವಣಿಗೆಯೂ ಸಾಧ್ಯವೆಂಬ ವಾದವೂ ಇದೆ. ಹೀಗಾಗಿ, ಅಂತರರಾಷ್ಟ್ರೀಯವಾಗಿ ಇಂದು ಕೇಳಿಬರುವ 'ರಕ್ಷಣೆಯ' ವಿಚಾರ ಬೇರೆ ತೆರನಾದ್ದು. ಮಾನವ ಜನಾಂಗಗಳು, ಸಂಸ್ಕೃತಿಗಳು, ಪರಂಪರೆಗಳು ಹಾಳಾಗದಂತೆ ಮತ್ತು ಜನಾಂಗೀಯ ಸಾಮೂಹಿಕ ಹತ್ಯೆ ಜರುಗದಂತೆ ನೋಡಿಕೊಳ್ಳಬೇಕಾದ್ದು ಒಂದು ಅಂತರರಾಷ್ಟ್ರೀಯ ಜವಾಬ್ದಾರಿ. ಎಲ್ಲೆಡೆ ಕ್ಷೇಮವಾಗಿ ಉಳಿಯುವುದು ಎಲ್ಲ ಜನಾಂಗಗಳ ರಾಜಕೀಯ ಹಕ್ಕು.

ಎಲ್ಲರ ಮಾನವ ಹಕ್ಕುಗಳನ್ನು ರಕ್ಷಿಸುವ ಪ್ರಣಾಲಿಕೆಗೆ ಅಂತರರಾಷ್ಟ್ರೀಯವಾಗಿ ಇಂದು "ರಕ್ಷಿಸುವ ಜವಾಬ್ದಾರಿ" ಎಂಬ ನುಡಿಯ ಪ್ರಯೋಗವಿದೆ. ೨೦೦೯ರ ಜನವರಿಯಲ್ಲಿ ರುವಾಂಡದಲ್ಲಿ ಜರುಗಿದ ಜನಾಂಗೀಯ ಹತ್ಯೆಯ ಸಂದರ್ಭ ನೆನಪಿಸಿಕೊಳ್ಳಿ. ಆಗ ವಿಶ್ವಸಂಸ್ಥೆಯ ನಿಷ್ಕ್ರಿಯ ಮಹಾಕಾರ್ಯದರ್ಶಿ ರೂಪಿಸಿದ ನುಡಿ ಇದು : ರಕ್ಷಿಸುವ ಜವಾಬ್ದಾರಿಯನ್ನು ಅನುಷ್ಠಾನಕ್ಕೆ ತರುವುದು. ಅದರಲ್ಲಿ ಆತ ಮೂರು ಅಂಶಗಳನ್ನು ಸೇರಿಸಿದ್ದಾನೆ : (ಅ) ಜನಾಂಗೀಯ ಹತ್ಯೆ ಜರುಗದಂತೆ ನೋಡಿಕೊಳ್ಳುವುದು ಪ್ರತಿಯೊಂದು ರಾಜ್ಯಪ್ರಭುತ್ವದ ಜವಾಬ್ದಾರಿ. ಅಂತೆಯೇ ಯುದ್ಧಾಪರಾಧಗಳು, ಘೋರ ಪಾತಕಗಳು, ಇತ್ಯಾದಿ. (ಆ) ಪ್ರತಿಯೊಂದು ರಾಷ್ಟ್ರದ ಪ್ರಜೆಗಳನ್ನೂ ರಕ್ಷಿಸುವ ಜವಾಬ್ದಾರಿಯು ಜಾರಿಯಾಗುವಂತೆ ಎಲ್ಲ ರಾಷ್ಟ್ರಗಳಿಗೂ ಅಂತರರಾಷ್ಟ್ರೀಯ ಸಮುದಾಯವು ಸಹಾಯ, ಸಹಕಾರ ನೀಡಬೇಕು. ಸಂಘರ್ಷಗಳು ಮುಗಿಲುಮುಟ್ಟುವ ಮುನ್ನವೇ ಪ್ರಭುತ್ವಗಳು ಪಾತಕಗಳನ್ನು ತಡೆಗಟ್ಟುವ ಕ್ರಮಗಳನ್ನು ಕೈಗೊಳ್ಳಬೇಕು. (ಇ) ಯಾವುದಾದರೂ ರಾಷ್ಟ್ರವು ತನ್ನ ಪ್ರಜೆಗಳನ್ನು ಇಡಿಯಾಗಿ ಸಂರಕ್ಷಿಸುವುದರಲ್ಲಿ ಸೋಲುತ್ತಿದೆ ಎಂಬುದು ತಿಳಿದಕೂಡಲೆ ಅಂತರರಾಷ್ಟ್ರೀಯ ಸಮುದಾಯವು ಪರಿಣಾಮಕಾರಿ ಕ್ರಿಯೆಯಲ್ಲಿ ತೊಡಗಬೇಕು.

ವಿಶ್ವಸಂಸ್ಥೆ ಕಾರ್ಯದರ್ಶಿಯ ವರದಿಯನ್ನು ಜುಲೈ ೨೦೦೯ರಲ್ಲಿ ಮಹಾಧಿವೇಶನವು ಚರ್ಚಿಸಿದಾಗ ೯೪ ಸದಸ್ಯರಾಷ್ಟ್ರಗಳ ಪ್ರತಿನಿಧಿಗಳು ಭಾಗವಹಿಸಿದ್ದರು. ಆಫ್ರಿಕಾ ಒಕ್ಕೂಟದಂತಹ ಸಂಸ್ಥೆಗಳು ಮಧ್ಯಪ್ರವೇಶ ಮಾಡಿ ರಕ್ಷಣೆಯ ಜವಾಬ್ದಾರಿಯನ್ನು ಕಾರ್ಯರೂಪಕ್ಕೆ ತರಬೇಕೆಂಬ ಸಲಹೆ ಪ್ರಮುಖವಾಗಿ ವ್ಯಕ್ತವಾಯಿತು. ಟಿಬೆಟ್ಟಿನ ಬಗ್ಗೆ ಹೇಳುವುದಾದರೆ ಅದರ ಅನನ್ಯ ಪರಂಪರೆಯನ್ನು ರಕ್ಷಿಸುವ ಬದಲು ಚೀಣಾ ತನ್ನದೇ ದೃಷ್ಟಿಯನ್ನು ಪ್ರಧಾನವಾಗಿ ಮುಂದುಮಾಡಿರುವುದು ಕಾಣುತ್ತದೆ. ಟಿಬೆಟ್ಟಿನಲ್ಲಿ ಚೀಣಾ ಭಾಗದ ಜನ ಹೇರಳವಾಗಿ ತುಂಬಿರುವಂತಾಗಿದೆ. ಟಿಬೆಟ್ಟಿನ ರಾಜಕೀಯ, ಮತಧಾರ್ಮಿಕ ಮತ್ತು ನಾಗರಿಕ ಹಕ್ಕುಗಳಿಗೂ ಧಕ್ಕೆಯುಂಟಾಗಿದೆ. ಒಂದರ್ಥದಲ್ಲಿ ಚೀಣಾವು ಟಿಬೆಟ್ಟಿನಲ್ಲಿ "ಸ್ವಾಯತ್ತತೆ"ಗೆ ಕುಂದುಂಟಾಗುವ ಅನೇಕ ಕ್ರಮಗಳನ್ನು ಕೈಗೊಂಡಿದೆ. ಸ್ವತಃ ಚೀಣಾ ಹಿಂದೆ ಸಾಮ್ರಾಜ್ಯಶಾಹಿಯ ಉಪಟಳವನ್ನು ಅನುಭವಿಸಿದೆ, ಆದ್ದರಿಂದ ಚಿಕ್ಕಪುಟ್ಟ ವಿರೋಧಗಳು ವ್ಯಕ್ತವಾದಾಗಲೂ ತೀಕ್ಷ್ಣವಾಗಿ ಪ್ರತಿಕ್ರಿಯಿಸುವ ಸ್ವಭಾವ ಬೆಳೆಸಿಕೊಂಡಿದೆ. ರಾಜಕೀಯ ಮತ್ತು ಸಾಂಸ್ಕೃತಿಕ ಸ್ವಾಯತ್ತತೆಯೆಂದರೆ ಏನೋ ಪ್ರತ್ಯೇಕತಾವಾದಿ ಬಿರುಕು ಬೀಳಿಸುವ ಕ್ರಮವೆಂದು ವ್ಯಾಖ್ಯಾನಿಸಿಕೊಳ್ಳುತ್ತದೆ. ಝಿಂಜಿಯಾಂಗ್ ಮತ್ತು ಒಳ ಮಂಗೋಲಿಯಾಗಳ ಪ್ರಕ್ಷುಬ್ಧತೆ ಮತ್ತೊಂದೆಡೆ ಬೆಳೆದುಬಿಡುತ್ತದೆಂಬ ಆತಂಕ ಚೀಣಾಕ್ಕೆ. ತವೋವಾದಿಗಳು ರಾಜಕೀಯ ಬಣವಾಗಿ ಪ್ರಬಲರಾಗುತ್ತಾರೆಂಬ ಭೀತಿಯಿಂದ ಆರಂಭದಲ್ಲಿ ತವೋ ಸಿದ್ಧಾಂತ ಮತ್ತು ಪೂಜಾಮಂದಿರಗಳನ್ನು ಚೀಣಾದ ಸರ್ಕಾರ ಪ್ರತಿಬಂಧಿಸಿದ್ದುದನ್ನು ನೆನೆಯಬಹುದು. ಟಿಬೆಟ್ಟಿನ ಬೌದ್ಧಮತವು ಅಂಥದೇ ಲಕ್ಷಣಗಳನ್ನು ಹೊಂದಿ ಬೆಳೆದುಬಿಡಬಹುದೆಂಬ ಗುಮಾನಿ ಚೀಣಾಕ್ಕಿದೆ. ಆದ್ದರಿಂದ ದಲೈಲಾಮಾ ಪ್ರತ್ಯೇಕತಾವಾದಿಯೆಂಬ ಹಣೆಪಟ್ಟಿ ಪಡೆಯುತ್ತಾನೆ. ಟಿಬೆಟ್ ಮೂಲದವರಿರಲಿ, ಟಿಬೆಟ್ಟಿನಲ್ಲಿ ನೆಲೆಸಿರುವ ಹ್ಯಾನ್ ಚೀಣೀ ಪಂಗಡದವರು ಸಹ ಚೀಣಾ ಕಣ್ಣಿನಲ್ಲಿ ಅನುಮಾನಕ್ಕೆ ಅರ್ಹರೆನಿಸಿಬಿಡುತ್ತಾರೆ.

ಟಿಬೆಟ್ಟಿನ ನಿರ್ದಿಷ್ಟ ಸಂದರ್ಭದಲ್ಲಿ 'ರಕ್ಷಣೆ' ಎಂದರೆ ಯಾವುದರ ರಕ್ಷಣೆ ? ಅಲ್ಪಸಂಖ್ಯಾತರಿಗಿರಬೇಕಾದ ರಕ್ಷಣೆ, ಮತಧರ್ಮದ ಸ್ವಾತಂತ್ರ್ಯದ ರಕ್ಷಣೆ, ಅಭಿವ್ಯಕ್ತಿ ಮತ್ತು ಆರ್ಥಿಕ ವಹಿವಾಟು ಸ್ವಾತಂತ್ರ್ಯಗಳ ರಕ್ಷಣೆ. ಟಿಬೆಟ್ಟಿನ ಮೂಲಪರಿಸರದ ಮತ್ತು ಜೀವವೈವಿಧ್ಯತೆಗಳ ರಕ್ಷಣೆಯೂ ಅಗತ್ಯವಿದೆ. ಇವೆಲ್ಲವೂ ಚೀಣಾದ ಐಕ್ಯತೆಗೆ ಭಂಗಬರದಂತೆ ಇವನ್ನೆಲ್ಲಾ ಸಾಧಿಸಬೇಕು. ಅಮೆರಿಕಾ ಮತ್ತು ಯೂರೋಪು "ಸಂರಕ್ಷಣೆ" ಎಂದರೆ ಹಿಂಸೆಯನ್ನು ಹಿಗ್ಗಾಮುಗ್ಗಾ ಪ್ರಯೋಗಿಸಿ ಸಿದ್ಧಿಸಿಕೊಳ್ಳಬಹುದೆಂಬ ನೀತಿಯನ್ನು ಅನುಸರಿಸುತ್ತವೆ. ದಕ್ಷಿಣ ಅಮೆರಿಕಾ, ಆಗ್ನೇಯ ಏಷ್ಯ, ಮತ್ತು ಪಶ್ಚಿಮ ಏಷ್ಯಾಗಳತ್ತ ದೃಷ್ಟಿಹರಿಸಿದರೆ ಇದು ಸ್ಪಷ್ಟವಾಗಿ ತಿಳಿಯುತ್ತದೆ. ಸ್ವಾತಂತ್ರ್ಯವನ್ನು ಪ್ರಾಬಲ್ಯದಿಂದ ಸೃಜಿಸುವುದು ಸಾಧ್ಯವಿಲ್ಲ. ಸ್ವಾತಂತ್ರ್ಯ ಮತ್ತು ಪ್ರಾಬಲ್ಯ ಪರಸ್ಪರ ವಿರೋಧಿ ಅಂಶಗಳು. ಟಿಬೆಟ್ಟಿನ ಬೌದ್ಧರು ಪ್ರಾಬಲ್ಯದಲ್ಲಿ ಶ್ರದ್ಧೆ ಇರುವವರಲ್ಲ. ಶಾಂತಿಯು ನೈತಿಕತೆಯ ಅವಿಭಾಜ್ಯ ಅಂಗವೆನ್ನುವ ದಲೈಲಾಮಾ ಹಿಂಸಾಕ್ರಮಗಳಿಂದ ಟಿಬೆಟ್ಟಿನ ಸ್ವಾತಂತ್ರ್ಯವು ಸ್ಥಿರವಾದೀತೆಂಬ ನಂಬಿಕೆಯನ್ನು ಹೊಂದಿಲ್ಲ. ಟಿಬೆಟ್ಟಿನ ಸಮಸ್ಯೆಯ ಪರಿಹಾರಕ್ಕೆ ಹಾದಿಯು ಗಾಂಧಿ–ಮಂಡೇಲ ಹಾದಿಯಾಗಬೇಕಾದ್ದು ಈ ಕಾರಣಕ್ಕೆ.




**ಪ್ರಾದೇಶಿಕ ಶಕ್ತಿಗಳ ಜವಾಬ್ದಾರಿ**

ಪ್ರಕೃತದಲ್ಲಿ ಏನಿಲ್ಲವೆಂದರೂ ೧೩೦ ಲಕ್ಷ ಟಿಬೆಟ್ಟಿನ ಜನ ಹೊರದೇಶಗಳಲ್ಲಿ ಆಶ್ರಯ ಪಡೆದಿದ್ದಾರೆ. ಭಾರತದಲ್ಲಿ ಅದರ ಮುಕ್ಕಾಲು ಭಾಗ ಇರಬಹುದೆಂದು ತೋರುತ್ತದೆ. ಟಿಬೆಟ್ಟಿನ ಮೇಲ್ಸ್ತರ ಲಕ್ಷಣಗಳಿರುವ ಧರ್ಮಶಾಲಾ ಮುಂತಾದೆಡೆಗಳಲ್ಲಿ ಕೇವಲ ಅವರೇ ವಾಸವಾಗಿಬಿಟ್ಟಿದ್ದಾರೆ. ಅಲ್ಲೇ ಅವರ "ದೇಶಾಂತರಿ ಸರ್ಕಾರ"ದ ಕೇಂದ್ರವೂ ಇದೆ. ಕರ್ನಾಟಕದ ಬೈಲುಕುಪ್ಪೆ ಪುಟ್ಟ–ಟಿಬೆಟ್ ಎಂಬಂತಾಗಿದೆ. ಈ ಸರ್ಕಾರಕ್ಕೆ ಒಂದು ಆಡಳಿತಾತ್ಮಕ ಆಯಾಮವಿದೆ, ಸಚಿವರಿದ್ದಾರೆ (ಅದಕ್ಕೆ 'ಕಶಾಗ್' ಎಂದು ಹೆಸರು), ಶಾಸನ ಸಭೆ, ಇತ್ಯಾದಿಗಳೆಲ್ಲಾ ಇವೆ. ಭಾರತ ಸರ್ಕಾರದ ವಿದೇಶಾಂಗ ಸಚಿವಾಲಯದ ಒಬ್ಬ ಅಧಿಕಾರಿಯು ದಲೈಲಾಮಾನ ಕಾರ್ಯದರ್ಶಿಯಾಗಿರುತ್ತಾರೆ. ಮತಧರ್ಮ, ಸಂಸ್ಕೃತಿ, ಶಿಕ್ಷಣ, ಅಂತರರಾಷ್ಟ್ರೀಯ ಸಂಬಂಧಗಳು, ಇತ್ಯಾದಿಗಳನ್ನು ನೋಡಿಕೊಳ್ಳುವ ವಿಭಾಗಗಳೂ ಇವೆ. ಭಾರತ ಮತ್ತು ಇತರೆಡೆ ನೆಲೆಸಿರುವ ಟಿಬೆಟ್ಟಿನ ದೇಶಾಂತರಿಗಳ ಪಾಲನೆಯು ಈ ಸರ್ಕಾರಕ್ಕಿದೆ. ಆದ್ದರಿಂದ ಕೃಷಿ, ಉದ್ಯಮ, ಮುಂತಾದುವನ್ನು ಬೇರೆ ದೇಶಗಳ ನೆರವಿನಿಂದ ಈ ಸರ್ಕಾರ ಹಲವೆಡೆ ಕೈಗೊಂಡಿದೆ. ಅದು ನಡೆಸುವ ಶಾಲೆಗಳಲ್ಲಿ ಸುಮಾರು ೨೫,೦೦೦ ಮಕ್ಕಳಿದ್ದಾರೆ. ವೈದ್ಯಕೀಯ, ಗ್ರಂಥಭಂಡಾರ, ಕಲಾವಿಭಾಗಗಳು, ಟಿಬೆಟ್ಟಿನ ಭಾಷೆಯ ಕಲಿಕೆ ಮತ್ತು ಗ್ರಂಥಗಳ ಅಧ್ಯಯನ, ಇಂಥವೆಲ್ಲಾ ಸರ್ಕಾರದ ಪರಿಧಿಯಲ್ಲಿವೆ. ಅದರ ಕಚೇರಿಗಳು ದೆಹಲಿ, ಲಂಡನ್,

ನ್ಯೂ ಯಾರ್ಕ್, ಟೋಕಿಯೊ, ಕಠ್ಮಂಡು, ಮಾಸ್ಕೊ, ಪ್ಯಾರಿಸ್, ಮುಂತಾದಲ್ಲೆಲ್ಲಾ ಇವೆ. ಎಲ್ಲವೂ ದಲೈಲಾಮಾನ ನಿರ್ದೇಶನದಲ್ಲಿವೆ. ಆತ ಸರ್ಕಾರದ ರಾಜಕೀಯ ನಾಯಕತ್ವವನ್ನು ಕೆಲ ವರ್ಷಗಳ ಹಿಂದೆ ಬಿಟ್ಟುಕೊಟ್ಟಾಗ ಏಪ್ರಿಲ್ ೨೦೧೧ರಲ್ಲಿ ಡಾ॥ ಲೋಬ್‌ಸಾಂಗ್ ಸಾಂಗೇ ಎಂಬವರನ್ನು ಪ್ರಧಾನ ಮಂತ್ರಿಯನ್ನಾಗಿ ಆಯ್ಕೆಮಾಡಲಾಯಿತು. ಅಂದರೆ, ಪ್ರಜಾಪ್ರಭುತ್ವ ವ್ಯವಸ್ಥೆಯ ಕಟ್ಟುಪಾಡುಗಳನ್ನು ಈ ಸರ್ಕಾರ ಪಾಲಿಸಹೊರಟಿದೆ.

ಟಿಬೆಟ್ಟಿನಲ್ಲಿದ್ದ ಸಂಸ್ಥೆಗಳ ಮೇಲೆ ಹಲ್ಲೆ ನಡೆದಾಗ ಅವುಗಳ ರಕ್ಷಣೆಗೆ ಈ ಸರ್ಕಾರದ ಮಂದಿ ಇರಲಿಲ್ಲ, ಆದರೆ ಅವಕ್ಕೆ ಪರ್ಯಾಯವಾಗಿ ಸಂಸ್ಥೆಗಳನ್ನು ಭಾರತದಲ್ಲಿ ಕಟ್ಟಿಕೊಳ್ಳಲಾಗಿದೆ. ಅವರ ಗ್ರಂಥಗಳು, ಜ್ಞಾನ, ಭಾಷೆ, ಇವೆಲ್ಲಾ ಊರ್ಜಿತವಾಗಲು ಅಡ್ಡಿಯಿಲ್ಲ. ಇಂಥವೇ ಸೌಕರ್ಯಗಳನ್ನು ಟಿಬೆಟ್ಟಿನಲ್ಲಿ ನಿರ್ಮಿಸುವುದರಲ್ಲಿ ಚೀಣಾ ಪಾಲ್ಗೊಳ್ಳುವ ಜವಾಬ್ದಾರಿ ಇದೆ. ಒಟ್ಟಿನಲ್ಲಿ, ಪ್ರಾದೇಶಿಕವಾಗಿ ಭಾರತವು ರಕ್ಷಣಾ ಜವಾಬ್ದಾರಿಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದೆ. ಚೀಣಾದ ಅಧಿಕಾರದ ಎಲ್ಲೆ ಮತ್ತು ವ್ಯಾಪ್ತಿಗಳ ಪ್ರಶ್ನೆಯನ್ನೆತ್ತದೆ ಭಾರತವು ಇದನ್ನು ಮಾಡಿರುವುದು ಗಮನಾರ್ಹ. ಟಿಬೆಟ್ಟನ್ನು ಚೀಣಾದ ಭಾಗವೆಂಬುದರ ಬಗ್ಗೆ ಭಾರತವೆಂದೂ ತಕರಾರೆತ್ತಿಲ್ಲ. ಆದಾಗ್ಯೂ ಟಿಬೆಟ್ಟಿನ ನಿರ್ವಸಿತರಿಗೆ ಅನುಕೂಲ ಕಲ್ಪಿಸಿಕೊಡಲು ಭಾರತವು ಅಂಜಿಕೆ ತೋರಿಲ್ಲ. ಯಾವ ಹಿಂಸಾತ್ಮಕ ಪ್ರಕ್ರಿಯೆಯಾಗಲಿ, ಬೆದರಿಕೆ ಒಡ್ಡುವುದಾಗಲಿ, ಇಲ್ಲದೆಯೇ ಟಿಬೆಟ್ಟಿನ ಸಂಸ್ಕೃತಿ ಪರಂಪರೆಗೆ ಭಾರತವು ಒತ್ತಾಸೆ ನೀಡಿದೆ.

ಇದೇ ಮಾತನ್ನು ಅಮೆರಿಕಾ ಬಗ್ಗೆ ಹೇಳಲಾಗುವುದಿಲ್ಲ. ಅಲ್ಲೂ ಸುಮಾರು ಐದು ಸಾವಿರ ನಿರ್ವಸಿತರಿದ್ದಾರೆ, ಅವರ ಹಕ್ಕುಗಳ ಸಂರಕ್ಷಣೆಗೆ ಅಮೆರಿಕಾ ಹಿಂಸೆ ಮತ್ತು ದಬಾವಣೆ ಮಾರ್ಗವನ್ನು ಹಿಡಿದಿದೆ. ೧೯೫೦ ಮತ್ತು ೬೦ರ ದಶಕಗಳಲ್ಲಿ ಈ ನಿರ್ವಸಿತರಿಗೆ ಅಮೆರಿಕಾದ ಗೂಢಚಾರ ಸಂಸ್ಥೆ ಸಿ.ಐ.ಎ. ಗೊರಿಲ್ಲಾ ಯುದ್ಧತಂತ್ರ ಕಲಿಸಿತು! ಹೀಗೆ ತರಬೇತಿ ಪಡೆದವರು ಟಿಬೆಟ್ಟಿನೊಳಕ್ಕೆ ನುಗ್ಗಿ ಕಾರ್ಯಾಚರಣೆ ನಡೆಸಿದರು. ಸುಮಾರು ೧೯೭೦ರವರೆಗೆ ಚೀಣಾಕ್ಕೆ ಟಿಬೆಟ್ಟಿನಲ್ಲಿ ಯಾವ ಸ್ಥಾನವೂ ಇಲ್ಲವೆಂದೇ ಅಮೆರಿಕಾ ಹೇಳುತ್ತಿತ್ತು. ೧೯೬೪ರಲ್ಲಿ ವಾಷಿಂಗ್‌ಟನ್ ಟಿಬೆಟ್ಟಿನ ರಾಜಕೀಯ ಸ್ವಾಯತ್ತತೆಯ ರಕ್ಷಣೆಗೆಂದು ಸುಮಾರು ೨೦ ಲಕ್ಷ ಡಾಲರುಗಳನ್ನು ತನ್ನ ಬಜೆಟ್‌ನಲ್ಲಿ ತೆಗೆದಿರಿಸಿತ್ತು. ಚೀಣಾದ ಆಂತರಿಕ ರಾಜಕೀಯದ ಮೇಲೆ ಕಣ್ಣಿಟ್ಟು ಅದನ್ನು ನಿಯಂತ್ರಿಸಲು ಅಮೆರಿಕಾ ಟಿಬೆಟ್ಟಿನ ರಾಜಕೀಯವನ್ನು ತನ್ನ ದಾಳವನ್ನಾಗಿಸಿಕೊಂಡಿತು. ಸ್ವತಃ ದಲೈಲಾಮಾನಿಗೆ ಅಮೆರಿಕಾ ತಿಂಗಳಿಗೆ ೧೫,೦೦೦ ಡಾಲರುಗಳ ನಿಧಿ ನೀಡುತ್ತಿತ್ತು! ಇದು ಟಿಬೆಟ್ಟಿನ ಸಂಸ್ಕೃತಿಯ ರಕ್ಷಣೆಯ 'ಜವಾಬ್ದಾರಿ ನಿರ್ವಹಣೆ' ಎನಿಸಿಕೊಳ್ಳುವುದಿಲ್ಲ, ಬದಲಾಗಿ ತನ್ನ ರಾಜಕೀಯಕ್ಕಾಗಿ ಟಿಬೆಟ್ಟನ್ನು ಸಾಧನವನ್ನಾಗಿ ಮಾಡಿಕೊಂಡ ಅಕ್ರಮ ಎನಿಸಿಕೊಳ್ಳುತ್ತದೆ. ಅಮೆರಿಕಾದಲ್ಲಿ ಗೊರಿಲ್ಲಾ ಯುದ್ಧದ ತರಬೇತಿ ಪಡೆದಿದ್ದ ಒಂದು ಪಡೆ ನೇಪಾಲದ ಮುಸ್ತಾಂಗ್ ಎಂಬಲ್ಲಿತ್ತು. ೧೯೬೦ರಲ್ಲಿ ವಿಮಾನಗಳ ಮುಖಾಂತರ ಅಮೆರಿಕಾ ಈ ಪಡೆಗಳಿಗೆ ಶಸ್ತ್ರಾಸ್ತ್ರ ಸರಬರಾಜು ಮಾಡಿತು. ಶಾಂತಿದೂತ ದಲೈಲಾಮಾನನ್ನು ಅಮೆರಿಕಾ ಗೊರಿಲ್ಲಾ ಯೋಧನನ್ನಾಗಿಸಲು ಶ್ರಮಿಸಿತು! ೧೯೬೯ರಲ್ಲಿ ತರಬೇತಿ ಶಿಬಿರಗಳನ್ನು ಮುಚ್ಚಲಾಯಿತು. ೧೯೭೧ರಲ್ಲಿ ಚೀಣಾ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಖಾಯಂ ಸದಸ್ಯತ್ವ ಪಡೆದ ನಂತರ ೧೯೭೨ರಲ್ಲಿ ನಿಕ್ಸನ್ ಚೀಣಾಕ್ಕೆ ಭೇಟಿ ನೀಡಿದ್ದು ಇತಿಹಾಸ. ಅದು ಬೇರೊಂದು ರಾಜಕೀಯ ಪರ್ವ. ಅದರ ಪ್ರಕಾರವೇ ೧೯೭೪ರಲ್ಲಿ ದಲೈಲಾಮಾಗೆ ನೀಡುತ್ತಿದ್ದ 'ಭತ್ಯೆ'ಯನ್ನು ನಿಲ್ಲಿಸಲಾಯಿತು ಮತ್ತು ೧೯೭೮ರಲ್ಲಿ ಟಿಬೆಟ್ ಚೀಣಾದ ಒಂದು ಅವಿಭಾಜ್ಯ ಭಾಗವೆಂದು ಅಮೆರಿಕಾ ಅಂಗೀಕರಿಸಿತು. ಟಿಬೆಟ್ಟಿನ ಜನ ಮತ್ತು ಸಂಸ್ಕೃತಿಯ ಬಗೆಗಿನ ಅಮೆರಿಕಾ ಕಾಳಜಿಗೆ ಬೇರೇನೂ ವ್ಯಾಖ್ಯಾನ ಬೇಕಿಲ್ಲ. ಅಮೆರಿಕಾದ ಕುಹಕ ರಾಜಕೀಯ ಅಲ್ಲಿಗೆ ನಿಲ್ಲಲಿಲ್ಲ. ೧೯೮೫ರಲ್ಲಿ ಗೋರ್ಬಚೇವ್ ಯುಗವು ರಷ್ಯಾದಲ್ಲಿ ಆರಂಭವಾಗಿ ರಷ್ಯ–ಚೀಣಾ ಸಂಬಂಧಗಳು ಸ್ವಲ್ಪ ಮೈತ್ರಿಯುತವಾಯಿತು. ಕೂಡಲೆ ಅಮೆರಿಕಾ ತನ್ನ ನೀತಿಯನ್ನು ಬದಲಾಯಿಸಿಕೊಂಡಿತು! ಅಮೆರಿಕಾ ಪ್ರಜಾಪ್ರತಿನಿಧಿ ಸಭೆಯು ಟಿಬೆಟ್ಟನ್ನು "ಆಕ್ರಮಿತ ಪ್ರದೇಶ" ಎಂದು ಕರೆದು ಚೀಣಾವನ್ನು ಮೂದಲಿಸಿತು. ಅಮೆರಿಕಾದ ಹೊಲಸು ರಾಜಕೀಯಕ್ಕೆ ಮಿತಿಯೇ ಇಲ್ಲವೆಂಬಂತಾಯಿತು. ೧೯೮೯ರಲ್ಲಿ ಚೀಣಾ ಟಿಬೆಟ್ಟಿನಲ್ಲಿ ತುರ್ತು ಪರಿಸ್ಥಿತಿ ಘೋಷಿಸಿದ್ದು ಅಮೆರಿಕಾಕ್ಕೆ ಇನ್ನೊಂದು ನೀತಿ ನಿರೂಪಣಾ ಘಟ್ಟವಾಯಿತು. ಟಿಬೆಟ್ ಮತ್ತು ಚೀಣಾದಲ್ಲಿ ಮಾನವ ಹಕ್ಕು ಸಂರಕ್ಷಣಾ ದಿನವಾಗಿ ೧೯೯೦ರ ಮೇ ೧೩ ಪ್ರಸಿದ್ಧವಾಯಿತು, ಆದರೆ ೧೯೯೪ರಲ್ಲಿ ಚೀಣಾಕ್ಕೆ "ಅತ್ಯಂತ ಹೆಚ್ಚಾಗಿ ವ್ಯಾಪಾರಕ್ಕೆ ಮಿತ್ರ" ಎಂಬ ಘನತೆ ನೀಡಲಾಯಿತು. ಒಟ್ಟಿನಲ್ಲಿ ಟಿಬೆಟ್ಟಿನ ಅಳಿವು–ಉಳಿವು, ಜನರ ಸ್ಥಿತಿ–ಗತಿ, ಸಂಸ್ಕೃತಿಯ ರಕ್ಷಣೆ, ಯಾವುದೂ ಅಮೆರಿಕಾಕ್ಕೆ ಆದ್ಯತೆಯ ವಿಷಯವಲ್ಲ. ತನ್ನ ಅಮಾನವೀಯ ರಾಜಕಾರಣಕ್ಕೆ ಟಿಬೆಟ್ ಬಲಿಯಾದರೆ ಅಮೆರಿಕಾಕ್ಕೇನೂ ನೋವಿಲ್ಲ.




ಚೀಣಾ–ಅಮೆರಿಕಾ ಸಂಬಂಧಗಳ ಯಜ್ಞದಲ್ಲಿ ಟಿಬೆಟ್ ಬಲಿಪಶು ಎಂದು ಇದರರ್ಥ. "ರಕ್ಷಣಾ ಜವಾಬ್ದಾರಿ"ಯು ಹತ್ಯೆಯ ಸಂಚಾಗಿ ರೂಪ ಬದಲಾಯಿಸಿಕೊಂಡರೆ ಅಮೆರಿಕಾಕ್ಕೇನೂ ಸಂಕೋಚ ಇಲ್ಲ. "ಸಂಸ್ಕೃತಿ" ಎಂಬುದು ಅಮೆರಿಕಾ–ಯೂರೋಪ್ ನಿಘಂಟುವಿನಲ್ಲಿ ಅನ್ವರ್ಥ ಹೊಂದಿ ಬಿಡುತ್ತದೆ. ಅಮೆರಿಕಾದಲ್ಲಿ ಮೂಲನಿವಾಸಿಗಳನ್ನು ೧೬ನೆಯ ಶತಮಾನದಲ್ಲಿ ಕೊಚ್ಚಿಹಾಕಿದ್ದ ಪ್ರಸಂಗ ಮತ್ತು ಯೂರೋಪು ದೇಶಗಳು ತಮ್ಮ ವಸಾಹತುಗಳಲ್ಲಿ ಎಸಗಿದ ದೌರ್ಜನ್ಯಗಳು, ಇವು ಆ ದೇಶಗಳ ಸಂಸ್ಕೃತಿಗೆ ಸ್ಮಾರಕಗಳು. ಆ ದೇಶಗಳು ಟಿಬೆಟ್ಟಿನ ಸಂಸ್ಕೃತಿಯನ್ನು ಎಷ್ಟು ಗೌರವಿಸಿಯಾವು!

ಇದೆಲ್ಲದರ ಮಥಿತಾರ್ಥವೇನು? ಟಿಬೆಟ್–ಚೀನಾ ಸಂಬಂಧಗಳ ಪ್ರಶ್ನೆಯನ್ನು ರಾಜಕೀಯದ ಅಂಗವನ್ನಾಗಿಸಬಾರದು. ಬ್ರೆಝಿಲ್, ರಷ್ಯ, ಭಾರತ ಮತ್ತು ದಕ್ಷಿಣ ಆಫ್ರಿಕ ಒಂದು ಬಣವಾಗಿ ಕೆಲಸ ಮಾಡುತ್ತಿವೆ. ಅವು ಮಧ್ಯಸ್ತಿಕೆ ವಹಿಸಿ ಜಂಟೀ ಸಭೆಗಳನ್ನು ನಡೆಸಿ ಟಿಬೆಟ್ಟಿನ ಸಂಸ್ಕೃತಿಗೆ ರಕ್ಷಾಕವಚ ಹೊದಿಸಬೇಕು, ನಿರ್ವಸಿತರನ್ನು ಸ್ವದೇಶಕ್ಕೆ ಹಿಂದಿರುಗುವಂತೆ ಮಾಡಬೇಕು. ಈ ಬಣದೊಡನೆ ಸಂವಾದಕ್ಕೆ ಚೀಣಾ ನಿರಾಕರಿಸಲಾರದು ಮತ್ತು ಟಿಬೆಟ್ಟಿನ ವಿಷಯ ಇತ್ಯರ್ಥವಾಗುವುದು ಅಂತರರಾಷ್ಟ್ರೀಯ ನೆಲೆಯಲ್ಲಿ ಚೀಣಾಕ್ಕೂ ಅಗತ್ಯವಾದ, ಸ್ವಾಗತಾರ್ಹವಾದ ಅಂಶ. ದಲೈಲಾಮಾ ತನ್ನ ಬಿಗಿಯನ್ನು ಸ್ವಲ್ಪ ಸಡಿಲಿಸಿದ್ದಾನೆ; ಇನ್ನೂ ಹೆಚ್ಚು ತರ್ಕಬದ್ಧವಾಗಿ ವ್ಯವಹರಿಸುವಂತೆ ಆತನನ್ನು ಭಾರತವು ಪ್ರಭಾವಿಸಬಲ್ಲದು. ಅಮೆರಿಕಾ ಅದನ್ನು ವಿರೋಧಿಸುವ ಕಾರಣವಿಲ್ಲ. ದಲೈಲಾಮಾ ಟಿಬೆಟ್ಟನ್ನು ಚೀಣಾದಿಂದ ಪೂರ್ತಿಯಾಗಿ ಪ್ರತ್ಯೇಕಿಸಬೇಕೆಂಬ ಹಟ ಮಾಡಿಲ್ಲವಾದ್ದರಿಂದ "ಸಂಸ್ಕೃತಿ ಸಂರಕ್ಷಣಾ ಜವಾಬ್ದಾರಿ"ಯನ್ನು ನಿರ್ವಹಿಸಲು ಭಾರತಕ್ಕೆ ಸಾಕಷ್ಟು ಅವಕಾಶಗಳಿವೆ. ಪ್ರಾದೇಶಿಕವಾಗಿ ಅಕ್ಕಪಕ್ಕದ ದೇಶಗಳೊಡನೆ ಸ್ನೇಹವನ್ನು ಗಟ್ಟಿಗೊಳಿಸಿಕೊಳ್ಳಲು ಟಿಬೆಟ್ಟಿನ ವಿಚಾರವನ್ನು ಇತ್ಯರ್ಥಗೊಳಿಸಿದರೆ ಹತ್ತಾರು ಹೆಜ್ಜೆಗಳನ್ನಿರಿಸಿದಂತಾಗುತ್ತದೆ.

ಪ್ರಧಾನಿ ನರೇಂದ್ರ ಮೋದಿ ಮೇ ಮಧ್ಯಭಾಗದಲ್ಲಿ ಚೀಣಾಕ್ಕೆ ಭೇಟಿ ನೀಡಿದ್ದರು. ಟಿಬೆಟ್ಟಿನ ವಿಷಯವನ್ನು ಚರ್ಚಿಸಿದರೋ ಇಲ್ಲವೋ ತಿಳಿಯದು, ಚರ್ಚಿಸಿದ್ದರೆ ಅವರ ನಿಲುವೇನಾಗಿದ್ದಿತೋ ಖಚಿತವಾಗಿ ಗೊತ್ತಿಲ್ಲ. ಭಾರತಕ್ಕಿರುವ ಅವಕಾಶ ಮತ್ತು ಆಯ್ಕೆ ಮಾತ್ರ ನಿಸ್ಸಂದಿಗ್ಧವಾಗಿದೆ.

**ತನು ಮೆಹ್ತಾ**
ವಕೀಲರು, ನಂ. ೩೭, ೪ನೇ ಮಹಡಿ, ಯೂಸಫ್ ಬಿಲ್ಡಿಂಗ್
ಫ್ಲೋರಾ ಫೌಂಟೇನ್, ಮುಂಬಯಿ – ೪೦೦ ೦೨೩

**ಕನ್ನಡಕ್ಕೆ :** ಜಿ. ಆರ್.
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫






**ನವಮನ್ವಂತರ**
**(ವೈಚಾರಿಕ ಕಾದಂಬರಿ)**
ಭಾವಜೀವಿ
**ಪುಟ : ೨೬೮**
**ಬೆಲೆ : ರೂ. ೧೫೦**
**ಗೀತಾಕುಟೀರ**
ಬೆಂಗಳೂರು – ೫೬೦ ೦೭೮

*ಪುರುಷಸೂಕ್ತದಲ್ಲಿ ಬೀಜ ಅಂಕುರವಾದ ಚಾತುರ್ವರ್ಣ್ಯ ವ್ಯವಸ್ಥೆ, ಸ್ಮೃತಿಗಳ ಮೂಲಕ ಗಾಢವಾಗಿ ಬೆಳೆದು ಹಿಂದೂಗಳ ಜನಜೀವನದಲ್ಲಿ ಅತ್ಯಂತ ಆಳವಾಗಿ ಬೇರೂರಿ ನೂರಾರು ಜಾತಿಗಳು, ಅಸ್ಪೃಶ್ಯತೆಯ ಹೆಸರಿನಲ್ಲಿ ಟಿಸಿಲೊಡೆದು ಜನರ ಬದುಕಿಗೆ ಮಾರಕವಾಗಿದೆ. ಇದಕ್ಕೆ ೫ ಸಾವಿರ ವರುಷಗಳ ಚರಿತ್ರೆ ಇದ್ದು ಇದನ್ನು ಹೋಗಲಾಡಿಸಿ, ಮೇಲುಕೀಳಿಲ್ಲದ ಒಂದು ನವ ಸಮಾಜವನ್ನು ಕಟ್ಟುವುದು ಹೇಗೆ ಎನ್ನುವ ಪ್ರಶ್ನೆಯನ್ನು ಎತ್ತಿಕೊಂಡು ಈ ಕಾದಂಬರಿಯನ್ನು ರಚಿಸಲಾಗಿದೆ. ಸಮಾಜದಲ್ಲಿ ಜಾತಿಯ ಹೆಸರುಗಳಲ್ಲಿ ಒಡೆದುಹೋಗಿರುವ ಜನರ ಮಧ್ಯೆಯೂ ಬದುಕಿನ ಆಶಾಕಿರಣಗಳಂತೆ ಎಲ್ಲ ಜಾತಿಗಳಲ್ಲೂ ವೈಚಾರಿಕ ಪ್ರಜ್ಞೆಯುಳ್ಳ ಒಳ್ಳೆಯ ಜನರಿದ್ದಾರೆ ಎಂಬುದನ್ನು ಕೆಲವು ಪಾತ್ರಗಳ ಮೂಲಕ ನವಮನ್ವಂತರ ವೈಚಾರಿಕ ಕಾದಂಬರಿಯನ್ನು ಬರೆಯಲಾಗಿದೆ. ಸಮಾಜದಲ್ಲಿ ಬಡತನಕ್ಕಿಂತ ಮೌಢ್ಯವೇ ಮಾನವನ ನೆಮ್ಮದಿಗೆ ಮಾರಕ ಎನ್ನುವ ಲೇಖಕ ಶ್ರೀ ಎ. ಆರ್. ನಾರಾಯಣಘಟ್ಟ ಅವರು ಇಂದಿಗೂ ಮಹಾತ್ಮ ಗಾಂಧೀಜಿ ಮತ್ತು ಕುವೆಂಪು ಅವರ ತತ್ವಗಳನ್ನು ಸಮಾಜದಲ್ಲಿ ಬಿತ್ತುವ ಕನಸು ಕಾಣುತ್ತಿರುವ ಅಪೂರ್ವ ಭಾವಜೀವಿ. ಇವರು ತಮ್ಮ ಇಡೀ ಜೀವನದ ಉದ್ದಕ್ಕೂ ಕಥೆ, ಕವಿತೆ, ನಾಟಕ, ಕಾದಂಬರಿ, ಪ್ರಬಂಧಗಳು ಮತ್ತು ವೈಚಾರಿಕ ಕೃತಿಗಳ ಮೂಲಕ ಜನರಲ್ಲಿ ನವಸಮಾಜದ ಪ್ರಜ್ಞೆಯನ್ನು ಮೂಡಿಸುತ್ತಾ, ಅದಕ್ಕೆ ಸಂಬಂಧಪಟ್ಟ ೫೦ ಕೃತಿಗಳನ್ನು ರಚಿಸಿರುವುದು ಅವರಲ್ಲಿನ ಕಂಕಣಬದ್ಧತೆಯನ್ನು ತೋರಿಸುತ್ತದೆ.*

– **ಡಾ॥ ಎಂ. ವೆಂಕಟಸ್ವಾಮಿ**, *ಬೆಂಗಳೂರು*

**ಹೀಗೊಂದು ಟಾಪ್ ಪ್ರಯಾಣ** (ಲಲಿತ ಪ್ರಬಂಧಗಳು) ಈರಪ್ಪ ಎಂ. ಕಂಬಳಿ
**ಪುಟ : ೧೫೨** **ಬೆಲೆ : ರೂ. ೧೧೦**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಹುಟ್ಟಿ–ಬೆಳೆದು–ತೊರೆದು ಬಂದ ಹಳ್ಳಿಗಾಡಿನ ಪರಿಸರ, ನಗರ ಜೀವನದ ಸಹಿಸಲೇ ಬೇಕಾಗಿರುವ ಅನಿವಾರ್ಯ ಪ್ರಸಂಗ – ಎರಡನ್ನೂ ಬಿಟ್ಟು ಕೊಡಲಾರದ ಇಕ್ಕಟ್ಟಿನ ಪರಿಸ್ಥಿತಿ ಲೇಖಕ ಶ್ರೀ ಈರಪ್ಪ ಕಂಬಳಿ ಅವರದ್ದು. ಎರಡೂ ಕಡೆ ಜೋಕಾಲಿ ತೂಗಿ ಸಮತೋಲನ ಕಾಪಾಡಿ ಇಲ್ಲಿನ ಬರಹಗಳನ್ನು ರೂಪಿಸಿದ್ದಾರೆ. ಹಲವು ವಿಸ್ಮಯಗಳು, ಘಟನೆಗಳು ಲೇಖಕರ ಮನದಲ್ಲಿ ಅಚ್ಚೊತ್ತಿ ನಿಂತು ವಿಚಲಿತರನ್ನಾಗಿಸಿವೆ. ಅವು ಇಂದಿನ ಬದಲಾದ ಪರಿಸರ, ಆಚರಣೆಗಳು, ಮನುಷ್ಯನ ಸ್ವಭಾವಗಳು ಮುಂತಾಗಿ ಹಲವು ದಿಕ್ಕುಗಳಲ್ಲಿ ಹರಿದು ಹಂಚಿಹೋಗಿ ಪ್ರಬಂಧಗಳ ಮೂಲಕ ಒಂದಾಗಿ ಮೂಡಿಬಂದಿವೆ. ಕಣ್ಣ ಮುಂದಿನ ಅಥವಾ ಅನುಭವದ ಯಾವ ವಿಷಯವಾದರೂ ಸರಿಯೆ, ಅದಕ್ಕೊಂದು ತನ್ನದೇ ಶೈಲಿಯ ವಿಮರ್ಶಾತ್ಮಕ ರೂಪ ಕೊಡುತ್ತಾರೆ. ಇಂದು ನಗರಗಳ ಜೀವನ ಸಹಿಸಲಸಾಧ್ಯವಾಗಿ ಜಿಗುಪ್ಸೆ ತರಿಸಿದ್ದು ನಿಜವಾದರೂ ಹಳ್ಳಿಗಳೇನೂ ಉದ್ಧಾರವಾಗಿಲ್ಲ. ಅವು ಸುಖದ ಸುಪ್ಪತ್ತಿಗೆಗಳೇನೂ ಅಲ್ಲ. ಇಲ್ಲಿದ್ದಾಗ ಅಲ್ಲಿ – ಅಲ್ಲಿದ್ದಾಗ ಇಲ್ಲಿ ಮನಸ್ಸು ತುಡಿಯುವುದು ಸಹಜ. ಆದರೆ ಒಂದು ಮಾತು ನಿಜ – ಅದೇನೆಂದರೆ ಈರಪ್ಪ ಕಂಬಳಿಯವರಂತೆ ಅನೇಕ ಮಂದಿಗೆ ಹಳ್ಳಿಯ ಪರಿಸರ ಸುಂದರ ಬಾಲ್ಯವನ್ನು ನೀಡಿ ನೆನಪಿಸಿಕೊಳ್ಳುವಂಥ ಸಹ್ಯ ವಾತಾವರಣ ನೀಡಿದೆ. ಪುಸ್ತಕದುದ್ದಕ್ಕೂ ತಿಳಿಹಾಸ್ಯ ಮಿಂಚಿದೆ. ವಿಸ್ತಾರವಾದ ವಿಷಯ ಮಂಡನೆ ಓದುಗನ ತಾಳ್ಮೆ ಪರೀಕ್ಷಿಸುತ್ತದೆ. ಮನಸ್ಸನ್ನು ಖುಷಿಗೊಳಿಸುವ ಶೈಲಿಯೂ ಆತ್ಮೀಯತೆಯದೇ.*




**ಕುಲದ ನೆಲೆ** (ಕಾದಂಬರಿ) *ಡಾ॥ ಕೆ. ಸುಶೀಲಾ*
**ಪುಟ : ೧೮೦** **ಬೆಲೆ : ರೂ. ೧೩೫**
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ನಮ್ಮ ಪೂರ್ವಿಕರು ಇತ್ತೀಚಿನ ನೂರೈವತ್ತು ವರ್ಷಗಳ ಹಿಂದೆ ಬಾಳಿದ ಒಂದು ಕೌಟುಂಬಿಕ ಪರಿಸರವನ್ನು ನೆನಪಿಸುವ ಕಾದಂಬರಿ ರೂಪದ ಕಥಾನಕ. ಹಿಂದಿನ ಕಾಲದವರ ಸಂಪ್ರದಾಯನಿಷ್ಠೆ ಮತ್ತು ಇಂದಿನ ಆಧುನಿಕ ಜನಜೀವನ ಎರಡರಲ್ಲೂ ಅತಿರೇಕಗಳಿವೆ. ಇದನ್ನು ಹಳೆ ಬೇರು ಮತ್ತು ಹೊಸ ಚಿಗುರು ಎಂದು ಪರಿಗಣಿಸಿ ಎರಡರಲ್ಲೂ ಸಮನ್ವಯ ಸಾಧಿಸಬೇಕಾಗಿದೆ. ಹಳೆಯದರಲ್ಲೂ ಉತ್ತಮ ಮೌಲ್ಯಗಳಿವೆ. ಹಾಗೆಂದು ಅಪ್ಪ ನೆಟ್ಟ ಆಲದ ಮರಕ್ಕೇ ಜೋತು ಬೀಳಬೇಕಾಗಿಲ್ಲ. ಕಾಲಕ್ಕೆ ತಕ್ಕಂತೆ ಬದಲಾಗಿ ಸಾಂದರ್ಭಿಕ ಅಗತ್ಯಗಳಿಗೆ ಮನ್ನಣೆ ನೀಡಬೇಕಾಗಿದೆ. ಕಾಲದ ಓಟ ನಿಧಾನವಾದರೂ ಪರಿವರ್ತನಶೀಲ ನಾಳೆಗಳನ್ನು ಅದು ಸೃಷ್ಟಿಸುತ್ತದೆ. ಪೀಳಿಗೆಯಿಂದ ಪೀಳಿಗೆಗೆ ಹೊಸ ಹೊಸ ಯೋಚನೆಗಳನ್ನು ಆವಾಹಿಸಿಕೊಡುತ್ತಲೇ ಮುಂದೆ ಸಾಗುತ್ತದೆ. ಯಾವುದೇ ಸಂಸ್ಕೃತಿಯ ಏಳುಬೀಳುಗಳು ನಿರಂತರವಾಗಿ ಕಾಲಚಕ್ರದೊಂದಿಗೆ ಉರುಳುತ್ತಲೇ ಯಾವುದೂ ಸ್ಥಿರವಲ್ಲವೆಂದು ಸಾರುತ್ತವೆ. ಆಯಾಕಾಲದ ನಂಬುಗೆಗಳು ಅಂದಂದಿನ ಜನರಿಗೆ! ಇದು ಈ ಕಾದಂಬರಿಯ ಸಾರ. ಮನುಷ್ಯ ತುಳಿಯುವ ದಾರಿಗನುಗುಣವಾಗಿ ಒಳಿತು ಮತ್ತು ಕೆಡುಕು ಇರುತ್ತವೆ. ಕಾಲ ಸರಿದಂತೆ ಹೀಗೂ ಇತ್ತೇ! ಎಂಬ ಉದ್ಗಾರ ನಮ್ಮಿಂದ ಬಂದರೆ ಆಶ್ಚರ್ಯವೇನಿಲ್ಲ. ಈ ಕೃತಿಯಲ್ಲಿ ಸುಮಾರು ಆರು ತಲೆಮಾರುಗಳ ಜೀವನದ ನಿರೂಪಣೆಯಿದೆ. ಹೆಂಗಸರಂತೂ ಆ ಕಾಲದಲ್ಲಿ ಯಾವ ಬೆಲೆಯೂ ಇಲ್ಲದ, ಪಶು ಸಮಾನವಾದ ಜೀವನ ನಡೆಸಿದವರು.*

– **ಇಂದಿರಾಕುಮಾರಿ**, *ಯಶವಂತಪುರ, ಬೆಂಗಳೂರು – ೨೨*

**ಕಿಬ್ಬದಿಯ ಕೀಲುಳುಕಿ** (ಕಥಾ ಸಂಕಲನ) *ಚನ್ನಪ್ಪ ಅಂಗಡಿ*
**ಪುಟ : ೧೧೦** **ಬೆಲೆ : ರೂ. ೧೦೦**
**ಪಲ್ಲವ ಪ್ರಕಾಶನ,** ಚನ್ನಪಟ್ಟಣ




***ಜ್ವಲಂತ ಸಮಸ್ಯೆಗಳ ಅನಾವರಣ :*** *'ಕಿಬ್ಬದಿಯ ಕೀಲುಳುಕಿ' ಕಥೆಗಾರ ಚನ್ನಪ್ಪ ಅಂಗಡಿಯವರ ಎರಡನೆಯ ಕಥಾ ಸಂಕಲನ. ಕೃಷಿ ಅಧಿಕಾರಿಯಾಗಿರುವ ಅವರು, ನಿರ್ವಹಿಸುತ್ತಿರುವ ವೃತ್ತಿ ಕಾರಣವಾಗಿ ಪಡೆದುಕೊಂಡ ಮತ್ತು ಸಾಮಾಜಿಕ ಅನುಭವಗಳ ಹಿನ್ನೆಲೆಯಲ್ಲಿ ಅಳವಡಿಸಿಕೊಂಡ ದೃಷ್ಟಿಕೋನದ ನೆಲೆಯಲ್ಲಿಯೇ ಕಥಾ ರಚನೆಯಲ್ಲಿ ತೊಡಗಿಸಿಕೊಂಡಿರುವ ಅಪರೂಪದ ಕಥೆಗಾರ. ತಮ್ಮ ಸುತ್ತಲಿನ ಸಂಗತಿಗಳನ್ನು ಹರಿತವಾದ ಆಲೋಚನಾ ಕ್ರಮದಲ್ಲಿ ಅವಲೋಕಿಸುತ್ತ; ವಾಸ್ತವವನ್ನು ಮೀರಿದ, ಆದರೆ ಕಂಡ ವಾಸ್ತವವನ್ನೇ ಪ್ರತಿಬಿಂಬಿಸುವಂಥ 'ಭ್ರಮಿತ ವಾಸ್ತವ'ವನ್ನು ಕಥೆಯೊಳಗೆ ಸೃಷ್ಟಿಸುತ್ತಾರೆ. 'ಕಿಬ್ಬದಿಯ ಕೀಲುಳುಕಿ' ಸಂಕಲನದ ಕಥೆಗಳು ರೈತ ಸಮುದಾಯದ, ಕೆಳ ಮಧ್ಯಮ ವರ್ಗದ ಜನರ ಬದುಕಿನ ಘೋರ ದುರಂತಗಳ ಚಿತ್ರಣವನ್ನು ಅನಾವರಣ ಮಾಡುತ್ತವೆ. ಜಾಗತೀಕರಣ, ನಗರೀಕರಣ ಮತ್ತು ಉದಾರೀಕರಣ ಪ್ರಕ್ರಿಯೆಗಳಿಂದಾಗಿ ಶಿಥಿಲಗೊಳ್ಳುತ್ತಿರುವ ಮನುಷ್ಯ ಸಂಬಂಧಗಳು, ಆ ಮೂಲಕ ಗ್ರಾಮಗಳಲ್ಲಿನ ಕೂಡು ಕುಟುಂಬಗಳ ಬದುಕಿನಲ್ಲಿ ಉಂಟಾಗುತ್ತಿರುವ ಸ್ಥಿತ್ಯಂತರಗಳು ಮತ್ತು ಆಧುನಿಕ ಬದುಕು ಒಳಗೊಂಡಿರಬಹುದಾದ ಅಪಾಯಗಳು – ಇವೆಲ್ಲವನ್ನೂ ಪರ–ವಿರೋಧಗಳ ಮಧ್ಯದ ಗೆರೆಯ ಮೇಲೆ ನಿಂತು ಚಿತ್ರಿಸಿರುವ ಹನ್ನೆರಡು ಕಥೆಗಳು ಈ ಸಂಕಲನದಲ್ಲಿವೆ. ಒಂದು ಕಾಲಘಟ್ಟದ, ನಿರ್ದಿಷ್ಟ ಪರಿಸರದ ಸಮುದಾಯಗಳು ಏನಕೇನ ಕಾರಣಗಳಿಂದಾಗಿ ಎದುರಿಸುತ್ತಿರುವ ಜ್ವಲಂತ ಸಮಸ್ಯೆಗಳನ್ನು ಕಥೆಗಾರ ಚನ್ನಪ್ಪ ಅಂಗಡಿಯವರು ಈ ಸಂಕಲನದಲ್ಲಿರುವ ಕಥೆಗಳಲ್ಲಿ ಅನಾವರಣ ಮಾಡಿದ್ದಾರೆ.*

– **ಕಲ್ಲೇಶ್ ಕುಂಬಾರ್,** ಹಾರೂಗೇರಿ

# ಮುದ್ದು ಹಸು

ದಟ್ಟ ಕಾನನ, ಮುಗಿಲೆತ್ತರಕ್ಕೆ ಬೆಳೆದ ಮರಗಳಿಂದ ಉದುರಿದ ತರಗೆಲೆಗಳ ಮೇಲೆ ನಡೆಯುತ್ತಾ ತನ್ನ ಮುದ್ದು ಹಸುವಿಗೋಸ್ಕರ ಅತ್ತಿತ್ತ ದೃಷ್ಟಿ ಹಾಯಿಸುತ್ತಿದ್ದಾನೆ ಸೋಮ. ಮರದಿಂದ ಮರಕ್ಕೇ ಹಾರುತ್ತಿರುವ ಕೋತಿಗಳು, ಅತ್ತಿಂದಿತ್ತ ಓಡುವ ಕಾಡು ಕೋಳಿಗಳು ಕಾಣಿಸುತ್ತಿವೆಯೇ ಹೊರತು ಆತನ ಮುದ್ದು ಹಸು ಮಾತ್ರ ಕಾಣಿಸುತ್ತಿಲ್ಲ.

**ಮಾನಸ ಹೆಗಡೆ**



ಮುಗಿಲೆತ್ತರಕ್ಕೆ ಬೆಳೆದ ಭಾರೀ ಮರಗಳು. ಅವನ್ನು ತಬ್ಬಿ ಹಬ್ಬಿರುವ ದೊಡ್ಡ ದೊಡ್ಡ ಮರ ಬಳ್ಳಿಗಳು. ಮೇಲೆ ನೋಡಿದರೆ ಹಸಿರಿನ ಛಾವಣಿ. ಕೆಳಗಡೆ ದಪ್ಪದಾದ ದೆರಕಿನ ಹಾಸು.

ಮರ ಗಿಡದ ಮೇಲೆ ಚಿಲಿಪಿಲಿಯ ಗಾನ. ಆಗಾಗ ಕಾಣುವ ಸ್ವಚ್ಛಂದವಾದ ಕುಣಿದು ಕುಪ್ಪಳಿಸುವ ಪ್ರಾಣಿಗಳು. ಎಲ್ಲಿಂದಲೋ ಕೇಳುವ ನೀರಿನ ದೊಡ್ಡ ಸದ್ದು. ಆಗಾಗ ಕೇಳಿಸುವ ಕ್ರೂರ ಪ್ರಾಣಿಗಳ ಕೂಗು. ಇವುಗಳನ್ನು ಹೊರತುಪಡಿಸಿ ಉಳಿದದ್ದೆಲ್ಲವೂ ಶಾಂತ.

ಆ ದಟ್ಟ ಕಾನನವನ್ನು ಪ್ರವೇಶಿಸುವುದೆಂದರೆ ಭಾರೀ ಸಾಹಸವೇ ಸರಿ. ಆದರೆ ಆ ಕಾನನವು ಔಷಧಿ ಸಸ್ಯಗಳ ಬೃಹತ್ ಆಗರ. ಯಾವ ಕಾಡಿನಲ್ಲಿಯೂ ಸಿಗದ ಔಷಧಿ ಸಸ್ಯಗಳು ಇಲ್ಲಿ ದೊರಕುತ್ತವೆ.

ದಟ್ಟ ಕಾನನಕ್ಕೆ ಹೊಂದಿಕೊಂಡಿರುವುದು ಒಂದು ವಿಶಾಲ ಬಯಲು. ಆ ಬಯಲಿನಲ್ಲಿ ಮೊಣಕಾಲೆತ್ತರಕ್ಕೆ ಹಸಿರು ಹುಲ್ಲು ಬೆಳೆದು ಭೂತಾಯಿಯು ಉಟ್ಟ ಹಸಿರು ಮಡಿಯಂತೆ ಗೋಚರಿಸುತ್ತಿದೆ.

ಆ ಬಯಲಿನ ನಡುವೆ ನಾಡ ಹೆಂಚಿನದಾದಂತಹ ಕುಟೀರವೊಂದು ಗೋಚರಿಸುತ್ತಿದೆ. ಹಳೆಯದಾದ, ಮಣ್ಣಿನ ಗೋಡೆ ಹೊಂದಿರುವ ಆ ಕುಟೀರದಲ್ಲಿ ಯೋಗಿಯೊಬ್ಬರು ಪುರಾತನ ಕಾಲದಿಂದ ವಾಸ ಮಾಡುತ್ತ ಬಂದಿದ್ದಾರೆ.

ಆ ಯೋಗಿಯ ಹೆಸರು ಶಿ.ಶ. ಯೋಗಿ ಎಂದು ಸುತ್ತಲಿನ ಹಳ್ಳಿಯ ಜನ ಗುರುತಿಸುತ್ತಾರೆ. ಯಾಕೆಂದರೆ ಅಲ್ಲಿ ಬರುವ ಕಿರಿಯರಿಂದ ಹಿರಿಯರವರೆಗೂ ಯೋಗಿಗಳು ಶಿಶುನಾಳಧೀಶರ ಪದ, ಭಾವಾರ್ಥ ಇವುಗಳನ್ನು ತಿಳಿಸಿ ವಿವರಿಸುತ್ತಾರೆ.

"ಸುಬ್ಬೀ... ಏನೇ ಇವತ್ತು ಮೇಯಾಕೆ ಹೋದ ನಮ್ಮನೆ ಹಸು ಬಂದಿಲ್ಲೇನು ?" ಎಂಬ ಸೋಮನ ಮಾತು ಕೇಳಿ ಹೊರ ಬಂದ ಸುಬ್ಬಿಯು "ಇಲ್ಲ ಕಣ್ರೀ... ಆಚೆ ಈಚೆ ಮನೆಯ ಹಸುಗಳೆಲ್ಲವೂ ಬಂದ್ರೂ ನಮ್ಮ ಮನೆಯ ಹಸು ಬಂದಿಲ್ಲ", ಎಂದು ಉತ್ತರಿಸುತ್ತಾಳೆ.

ಆ ಮಾತನ್ನ ಕೇಳಿ ಸೋಮನು ಚಿಂತಾಕ್ರಾಂತನಾಗುತ್ತಾನೆ. ಯಾಕೆಂದರೆ ಎಂದೂ ಹೀಗೆ ಮೇಯಲು ಹೋದ ಹಸುವು ಬರದ ದಾಖಲೆಯೇ ಇಲ್ಲ. ಹಾಗಾದರೆ ಹಸುವು ಯಾಕೆ ಬರಲಿಲ್ಲ, ಎಲ್ಲಿ ಹೋಯಿತೆಂದು ಆಲೋಚಿಸುತ್ತ ಛಡಿಯ ಮೇಲೆ ಕುಳಿತುಕೊಳ್ಳುತ್ತಾನೆ.

ಸೋಮನ ಮನಃಸ್ಥಿತಿಯನ್ನು ಅರಿತ ಸುಬ್ಬಿಯು ಒಂದು ತಂಬಿಗೆ ನೀರನ್ನು ತಂದು ಸೋಮನ ಕೈಗಿತ್ತಾಗ, ಅದನ್ನು ಗಟಗಟನೆ ತನ್ನ ಗಂಟಲಿಗೆ ಸುರಿದುಕೊಂಡು ತಂಬಿಗೆಯನ್ನು ಪಕ್ಕದಲ್ಲಿಡುತ್ತಾನೆ.

ಆಗಸದ ಕಡೆಗೊಮ್ಮೆ ದೃಷ್ಟಿ ಹಾಯಿಸುತ್ತಾನೆ. ಸೂರ್ಯನು ಪಶ್ಚಿಮದ ಕಡೆಗೆ ಮುಕ್ಕಾಲರಷ್ಟು ವಾಲಿದ್ದಾನೆ. ಅಂದರೆ ಕತ್ತಲಾಗಲೂ ಇನ್ನೂ ಎರಡು ತಾಸು ಇದೆಯೆಂದಾಯಿತು ಎಂದುಕೊಂಡು ಸೋಮನು ಛಡಿಯ ಮೇಲಿಂದ ಎದ್ದು ಪಕ್ಕದಲ್ಲಿರುವ ಕೊಪ್ಪೆ ಕಪ್ಪಳಿಯನ್ನು ಮುಡಿಗೇರಿಸಿ ಪಕ್ಕದಲ್ಲಿರುವ ಮಚ್ಚನ್ನು ಹಿಡಿದು ಹಸುವಿನ ಅನ್ವೇಷಣೆಗಾಗಿ ಹೊರಡುತ್ತಾನೆ.

"ಸುಬ್ಬೀ... ನಾನು ಹಸೂನ ಹುಡುಕಿಕೊಂಡು ಬರ್ತೀನಿ", ಎಂದು ಹೇಳಿ ಸೋಮನು ಹೊರಟಾಗ "ಬೇಗ ಬನ್ರೀ, ಕತ್ತಲಾಗಿ ಬಿಡುತ್ತೆ" ಎಂದು ಒಳಗಿನಿಂದಲೇ ಕೂಗಿ ಹೇಳುತ್ತಾನೆ.

ಅಂಬಾ... ಅಂಬಾ ಎಂದು ತನ್ನ ಮುದ್ದಿನ ಹಸುವನ್ನು ಕರೆಯುತ್ತಾ ಸೋಮನು ಹುಲ್ಲುಗಾವಲಿನಲ್ಲಿ ಸಂಚರಿಸುತ್ತ ಬಹಳ ಕಾಲ ಹುಡುಕಿದರೂ ಹಸುವಿನ ಸುಳಿವೂ ಸಿಗದಾದಾಗ ನಿರಾಶನಾಗುತ್ತಾನೆ.

ಸೂರ್ಯನ ಬೆಳಕು ಸಮಯ ಕಳೆದಂತೆ ಕ್ಷೀಣಿಸುತ್ತಿದೆ. ಆದರೆ ಸೋಮನು ತನ್ನ ಪ್ರೀತಿಯ ಹಸುವಿಗಾಗಿ ಹುಡುಕಾಟ ಮುಂದುವರೆಸಿದ್ದಾನೆ.

ಹೀಗೆಯೇ ಹಲವು ಸಮಯಗಳ ಕಾಲ ಹುಡುಕಿದರೂ ಹಸುವು ಕಾಣಲಿಲ್ಲ. ಆದರೆ ತನ್ನ ಪ್ರಯತ್ನವನ್ನು ಸ್ಥಗಿತಗೊಳಿಸಲು ಆತನಿಗೆ ಮನಸ್ಸಿಲ್ಲ. ಯಾಕೆಂದರೆ ಆತನಿಗೆ ಹಸುವೆಂದರೆ ಜೀವ.

ಹೀಗೆಯೇ ಹಸುವನ್ನು ಹುಡುಕುತ್ತ ಆತನು ಬಹಳ ದೂರ ಕ್ರಮಿಸಿಬಿಟ್ಟಿದ್ದಾನೆ. ಆಗಸದಲ್ಲಿ ಸೂರ್ಯನ ಕುರುಹು ಕಾಣದಾಗಿದೆ. ನಕ್ಷತ್ರಗಳು ಮಬ್ಬಾಗಿ ಗೋಚರಿಸುತ್ತಿವೆ. ಚಂದ್ರನು ಆಗತಾನೆ ಆಗಮಿಸಿದ್ದಾನೆ. ಆತನ ಮಂದವಾದ ಬೆಳಕು ಭೂಮಿಯನ್ನು ಸ್ಪರ್ಶಿಸಲು ಪ್ರಾರಂಭಿಸಿದೆ.

ಸೋಮನು ಆ ಹುಲ್ಲುಗಾವಲಿನ ನಡುವೆ ಕಾಣುವ ಕುಟೀರದ ಕಡೆಗೆ ಹೆಜ್ಜೆ ಹಾಕುತ್ತಾನೆ. ಕತ್ತಲಾದ ಕಾರಣ ಅಲ್ಲಿ ಶಿ. ಶ. ಯೋಗಿಯ ಹೊರತಾಗಿ ಯಾರೂ ಇಲ್ಲ.

ಶಿ. ಶ. ಯೋಗಿಯು ಈಗಲೂ ಶಿಶುನಾಳಧೀಶರ ಚಿತ್ರಪಟದ ಮುಂದೆ ಕುಳಿತು ಆತನ ಹಾಡುಗಳನ್ನು ಹಾಡುವುದರಲ್ಲಿ ಮಗ್ನನಾಗಿದ್ದಾನೆ. ಆ ಹಾಡುಗಳು ಭಾವನೆಯೊಂದಿಗೆ ಹೊರಹೊಮ್ಮಿ ಬಲು ಇಂಪಾಗಿ ಕೇಳಿಸುತ್ತಿವೆ. ಶಿಶುನಾಳಧೀಶರ ಚಿತ್ರಪಟದ ಮುಂದೆ ಹಣತೆಯೊಂದು ಬೆಳಗುತ್ತಿದೆ.

ಸೋಮನು ಆ ಕುಟೀರವನ್ನು ಪ್ರವೇಶಿಸುತ್ತಾನೆ. ಶಿ.ಶ.ಯೋಗಿಯ ಇಂಪಾದ ಹಾಡುಗಳನ್ನು ಕೇಳುತ್ತಾ ಮೈಮರೆತು ತಲೆದೂಗಲು ಪ್ರಾರಂಭಿಸುತ್ತಾನೆ.

ಹೀಗೆಯೇ ಕೆಲವು ಹಾಡುಗಳನ್ನು ಹಾಡಿ ಮುಗಿಸಿದ ಶಿ.ಶ.ಯೋಗಿಯು ಎದ್ದಾಗ ಸೋಮನು ಯೋಗಿಯ ಕಾಲಿಗೆ ನಮಸ್ಕರಿಸಿ "ಇದೊಂದು ರಾತ್ರಿಯನ್ನು ತಮ್ಮ ಕುಟೀರದಲ್ಲಿ ಕಳೆಯಲು ಅವಕಾಶ ನೀಡಿ" ಎಂದು ಬೇಡಿಕೊಳ್ಳುತ್ತಾನೆ.



## ಭಾವಚಿತ್ರ

ಭಣಗುಟ್ಟುವ ಹೃದಯ ಖಾಲಿ ಖಾಲಿ
ಅವನ ಬೇಗಂ ಆದ ಬದುಕು ಖಾಲಿ
ಮದುವೆ ಆಲ್ಬಂನಲ್ಲಿ ಹರಿದಾಡುತ್ತಿದೆ ಭಾವಚಿತ್ರ
ಏಳುಸುತ್ತಿನ ಕೋಟೆಯೊಳಗೆ ಮುಸುಕಿನ ಮುಖದ
ಫೋಂಫಟ್ ಎಳೆದು ಸದಾ ಮುಚ್ಚಿರುತ್ತದೆ.
ಮದುವೆಯ ಆಲ್ಬಂ ಆಗಾಗ ತೆರೆದುಕೊಳ್ಳುತ್ತದೆ
ನವಿರಾಗಿ ಒಳ ಬಂದ ಸುಳಿಗಾಳಿ ಸವರುತ್ತದೆ.
ನನಗಲ್ಲದಿದ್ದರೂ ಹೋಗಲಿ ಭಾವಚಿತ್ರಗಳೇ ಮೇಲು
ನನ್ನ ಭಾವಚಿತ್ರಕ್ಕಾದರೂ ಕೊಂಚ
ತನಿಗಾಳಿ ತಗುಲಿ ಸ್ವಸ್ಥ ಉಸಿರಾಡಲಿ.
ಜೀವಪೋಷಕಳಾಗಿ ಜುಳುಜುಳು ಹರಿದವಳು ನಾನು
ಸದ್ದಿಲ್ಲದೆ ಬತ್ತಿ ಬೆಂಗಾಡಾಗುವುದೇಕೆ ?
ಕುಡಿದ ಅಮಲಿನಲಿ ಕೂಗಾಡುವ ಅವನ
ಕನಸಿನ ತುಂಬ ಅಪ್ಸರೆಯರದೇ ಹರಿದಾಟ
ಉಟ್ಟ ಜುಬ್ಬಾದ ಮೇಲೆ ಅತ್ತರಿನ ಘಮಘಮ
ಪೊಲೀಸ್ ನಾಯಿಯಂತೆ ಮೂಸಿನೋಡುತ್ತಾ
ಪರದಾ ಸರಿಸಿ ಒಳಬರುವ ಅವನು
ಅನುಮಾನದ ವಿಷಬೀಜ ಬಿತ್ತರಿಸುತ್ತಾನೆ.
ಭಯದಿಂದ ಬಿಳಿಚಿಕೊಳ್ಳುವ ನನಗೆ
ಮತ್ತಷ್ಟು ಗದರಿ ಮೂಲೆಗೆ ತಳ್ಳುತ್ತಾನೆ.
ವಾಲಾಡುತ್ತಲೇ ಹುಡುಕುತ್ತಾನೆ ನೆರಳುಗಳ
ಪರಪುರುಷ ಹಾದುಹೋದ ಶಂಕೆ ?
ಅವನ ಸಂಶಯಕೆ ಮದ್ದಿಲ್ಲ ಸುಳಿಯ ಹರಿದಾಟ
ಅಮಲಿಳಿದು ಸೋರುವ ತನಕ ಬೆತ್ತಪೂಜೆ
ವಿರೋಧದ ದನಿಯಿಲ್ಲದೆ ನಾನು ನರಳುವುದೇಕೆ ?
ಎಲುಬಿನ ಹಂದರದಲ್ಲಿ ಹೊಡೆದುಕೊಳ್ಳುವ ಹೃದಯ
ಅವನ ಭಾರದಡಿ ಉಸಿರುಗಟ್ಟಿ ಮಿಸುಕುವ ಜೀವ
ನಿರ್ಜೀವ ಸತ್ತ ಮರದ ಕೊರಡಿನಂತೆ
ಜೀವನದಿಯಾಗಿ ಭೋರ್ಗರೆಯಬೇಕಾದವಳು
ಕೆರೆಯಂಗಳಾಗಿ ಜಿನುಗಿದವಳು ಬರಿದಾಗುವುದೇಕೆ ?
ಒಮ್ಮೊಮ್ಮೆ ಅಂದುಕೊಳ್ಳುತ್ತೇನೆ ನಾನು
ನನಗಿಂತ ಆ ಭಾವಚಿತ್ರವೇ ಮೇಲು
ಆಗಾಗ ಶುದ್ಧ ಗಾಳಿ ಬೆಳಕು ಅದಕ್ಕಾದರೂ ಸಿಗುತ್ತದೆ
ಅಡುಗೆಮನೆಯಿಂದ ಪಡಸಾಲೆವರೆಗೆ
ನನ್ನ ಭಾವಚಿತ್ರವಾದರೂ ಹರಿದಾಡುತ್ತದೆ.




**ಡಾ॥ ಕೆ. ಷರೀಫಾ**
ನಂ. ೫, ೧ನೇ ಮಹಡಿ, ೧ನೇ ಬ್ಲಾಕ್, ೨ನೇ ಮುಖ್ಯರಸ್ತೆ
ಆರ್. ಟಿ. ನಗರ, ಬೆಂಗಳೂರು – ೫೬೦ ೦೩೨

ಸಂತೋಷದಿಂದ ಸೋಮನ ಮಾತಿಗೆ ಒಪ್ಪಿದ ಯೋಗಿಯು ಭಕ್ತರು ತನಗೆ ನೀಡಿದ ಹಣ್ಣುಗಳಲ್ಲಿ ಕೆಲವನ್ನು ನೀಡುತ್ತಾನೆ. ಆ ಹಣ್ಣುಗಳನ್ನು ತಿಂದು ಮುಗಿಸಿದ ಸೋಮನು ಹೂಜಿಯಲ್ಲಿರುವ ನೀರನ್ನು ಗಂಟಲಿಗೆ ಹೊಯ್ದುಕೊಂಡು ಅಲ್ಲಿಯೇ ವಿಶ್ರಮಿಸುತ್ತಾನೆ.

ಅದು ಬಾಳೂರು ಸಂತೆ. ಪ್ರಸಿದ್ಧವಾದ ದನಗಳ ಸಂತೆ. ಅಲ್ಲಿ ಎಲ್ಲಾ ತಳಿಯ, ಎಲ್ಲಾ ಗುಣಮಟ್ಟದ ಎತ್ತು, ಹಸು, ಎಮ್ಮೆ, ಕೋಣ ಎಲ್ಲವೂ ದೊರೆಯುತ್ತವೆ.

ಸೋಮನು ಹಸುವನ್ನು ಕೊಳ್ಳಲೆಂದು ಆ ಸಂತೆಗೆ ಬಂದಿದ್ದಾನೆ. ಆತನು ಬಾಳೂರು ಸಂತೆಗೆ ಬಂದದ್ದು ಇದೇ ಮೊದಲು. ಆದುದರಿಂದ ಆತನು ವಿವಿಧ ಹಸುಗಳನ್ನು ನೋಡಿ ಸಂತೋಷಪಡುತ್ತಿದ್ದಾನೆ.

ಜೆರ್ಸಿ ತಳಿಯ ಬೂದು ಬಣ್ಣದ ದೊಡ್ಡದಾದ ಹಸುವು ಸೋಮನ ಗಮನ ಸೆಳೆಯುತ್ತದೆ. ಅದನ್ನು ಕೊಳ್ಳಲು ಬಯಸಿ, ಅದರ ದರವನ್ನು ವಿಚಾರಿಸಿದಾಗ, ಸೋಮನ ಆಸೆಯು ಬಲೂನಿನಿಂದ ಗಾಳಿಯು ಇಳಿಯುವಂತೆ ಇಳಿಯುತ್ತದೆ.

ತನ್ನಲ್ಲಿರುವ ಹಣಕ್ಕೆ ತಕ್ಕ ಹಸುವನ್ನು ಕೊಳ್ಳಲು ಬಯಸಿದಾಗ, ಆತನಿಗೆ ಸಿಕ್ಕ ಹಸುವು ತನ್ನ ಜೀವವನ್ನು ಹಿಡಿದಿಟ್ಟುಕೊಂಡಿತ್ತು ಎಂದು ಹೇಳಬಹುದು. ಯಾಕೆಂದರೆ ಹಸು ಬಡಕಲಾಗಿತ್ತು. ಅದರ ಎಲುಬು ಹಂದರಗಳು ಕಾಣುವಂತಾಗಿದ್ದವು.

ಸೋಮನು ಪಾಲಿಗೆ ಬಂದದ್ದೇ ಪಂಚಾಮೃತ ಎಂದುಕೊಂಡು ಆ ಹಸುವನ್ನು ಖರೀದಿಸಿ ಮನೆಗೆ ತಂದಿದ್ದ. ಮನೆಗೆ ಬಂದಾಗ ಹಸುವನ್ನು ನೋಡಿದ ಸುಬ್ಬಿಯು "ಏನ್ರೀ... ಇದು ? ಈ ರೀತಿಯ ಹಸು ತಂದೀರಲ್ಲ ?" ಎಂದು ಕೇಳಿದಾಗ, "ನಮ್ಮಲ್ಲಿ ಇರೋ ದುಡ್ಡಿಗೆ ಈ ಹಸು ಸಿಕ್ಕಿದ್ದೂ ದೊಡ್ಡದು" ಎಂದು ಸೋಮ ಉತ್ತರಿಸಿದ.

ಅಂದಿನಿಂದ ಆ ಹಸುವನ್ನು ಮಗುವಿನಂತೆ ಆರೈಕೆ ಮಾಡಲು ಪ್ರಾರಂಭಿಸಿದರು. ಹೊತ್ತಿಗೆ ಸರಿಯಾಗಿ ಅದಕ್ಕೂ ಸ್ನಾನ, ಆಹಾರಗಳನ್ನು ನೀಡಿ ಉಪಚರಿಸಿದರು. ಅವರ ಆ ಪರಿಶ್ರಮದ ಫಲವಾಗಿ ಹಸುವು ಚೇತರಿಸಿಕೊಂಡು ದಷ್ಟ ಪುಷ್ಟವಾಗಿ ಬೆಳೆದು ಕರುವೊಂದಕ್ಕೂ ಜನ್ಮ ನೀಡಿತು.

ಸೋಮನಿಗೆ ದುಃಖದ ಸಂಗತಿಯೆಂದರೆ ಆ ಕರುವನ್ನು ಜೀವಂತವಾಗಿ ಉಳಿಸಿಕೊಳ್ಳಲು ಆಗದಿರುವುದು. ಆದರೆ ಆ ಹಸುವನ್ನು ನೋಡಿ ಆತನು ದುಃಖವನ್ನು ಮರೆಯುತ್ತಿದ್ದ.

ಈಗೀಗ ಹುಲ್ಲುಗಳು ಹುಲುಸಾಗಿ ಬೆಳೆದುದರಿಂದ ಹಸುವನ್ನು ಮೇಯಲು ಬಿಡಲು ಪ್ರಾರಂಭಿಸಿದ್ದ. ಅದು ಮುಂಜಾನೆ ಹೊರಟು ಸರಿಯಾಗಿ ಮಧ್ಯಾಹ್ನ ಹಟ್ಟಿ ಸೇರಿ ಬಿಡುತ್ತಿತ್ತು. ಆದರೆ ಇಂದು ಹಸುವು ಸಾಯಂಕಾಲವಾದರೂ ಹಟ್ಟಿಗೆ ಬರದೇ ಇದ್ದಾಗ ಸೋಮನು ಅದನ್ನು ಹುಡುಕಿಕೊಂಡು ಹೊರಟಿದ್ದ.

ರಾತ್ರಿ ಕುಟೀರದಲ್ಲಿ ತಂಗಿದ ಸೋಮುವಿಗೆ ಕಣ್ಣು ಮುಚ್ಚಿದರೂ ತನ್ನ ಮುದ್ದು ಹಸುವಿನ ಪ್ರತಿಬಿಂಬವೇ ಕಾಣಿಸುತ್ತಿದೆ. ಆತನ ಮನಸ್ಸು ಹಸುವಿನ ಕುರಿತಾಗಿಯೇ ಯೋಚಿಸುತ್ತಿದೆ. ನಿದ್ದೆ ಬರುತ್ತಿಲ್ಲ.

ಸೋಮನು ಬೆಳಗಾಗುವುದನ್ನೇ ಕಾಯುತ್ತಿದ್ದಾನೆ. ಆದರೂ ಸುಸ್ತಾಗಿರುವುದರಿಂದ ಆತನಿಗೆ ಮುಂಜಾನೆಯ ವೇಳೆ ಚಿಕ್ಕ ನಿದ್ದೆ ಬರುತ್ತದೆ. ಆ ನಿದ್ದೆಯಲ್ಲಿಯೂ ಹಸುವಿನ ಕನಸನ್ನೇ ಕಾಣುತ್ತಾನೆ. ಯಾಕೆಂದರೆ ಆತನ ತುಂಬಾ ಹಸುವಿನ ಆಲೋಚನೆಯೇ ತುಂಬಿಕೊಂಡಿದೆ.

ಮುಂಜಾನೆ ಹೊನ್ನಿನ ಬಣ್ಣದ ಎಳೆ ಬಿಸಿಲು ಮೃದುವಾಗಿ ಸೋಮನ ಮೈಗೆ ಸೋಕಿದಾಗ ಆತನು ಕಣ್ಣು ತೆರೆಯುತ್ತಾನೆ. ಎದ್ದು ಕುಳಿತು ದೃಷ್ಟಿ ಹಾಯಿಸಿದಾಗ, ಯೋಗಿಯು ಧ್ಯಾನ ಮಗ್ನನಾಗಿರುವುದು ಕಂಡುಬರುತ್ತದೆ.

ಯೋಗಿಯು ಧ್ಯಾನದಿಂದ ಎಚ್ಚೆತ್ತಾಗ, ಸೋಮನು ಯೋಗಿಯ ಕಾಲಿಗೆ ನಮಸ್ಕರಿಸಿ ತಾನು ಇನ್ನೊಮ್ಮೆ ಬರುವುದಾಗಿ ತಿಳಿಸಿ ಹೊರಡಲು ಅನುವಾಗುತ್ತಾನೆ. ಆಗ ಯೋಗಿಯು ಸೋಮನಿಗೆ ಹಣ್ಣುಗಳನ್ನು ನೀಡಿ ಆದರದಿಂದ ಬೀಳ್ಕೊಡುತ್ತಾನೆ.

ದಟ್ಟ ಕಾನನ, ಮುಗಿಲೆತ್ತರಕ್ಕೆ ಬೆಳೆದ ಮರಗಳಿಂದ ಉದುರಿದ ತರಗೆಲೆಗಳ ಮೇಲೆ ನಡೆಯುತ್ತಾ ತನ್ನ ಮುದ್ದು ಹಸುವಿಗೋಸ್ಕರ ಅತ್ತಿತ್ತ ದೃಷ್ಟಿ ಹಾಯಿಸುತ್ತಿದ್ದಾನೆ ಸೋಮ. ಮರದಿಂದ ಮರಕ್ಕೇ ಹಾರುತ್ತಿರುವ ಕೋತಿಗಳು, ಅತ್ತಿಂದಿತ್ತ ಓಡುವ ಕಾಡು ಕೋಳಿಗಳು ಕಾಣಿಸುತ್ತಿವೆಯೇ ಹೊರತು ಆತನ ಮುದ್ದು ಹಸು ಮಾತ್ರ ಕಾಣಿಸುತ್ತಿಲ್ಲ.

ಅಲ್ಲಲ್ಲಿ ಹರಿದಾಡುವ ಹಾವುಗಳು, ಚೇಳುಗಳನ್ನು ಕಂಡು ಭಯವುಂಟಾದರೂ ಸೋಮನು ಮುಂದೆ ಚಲಿಸುತ್ತಿದ್ದಾನೆ. ತಂಪಾದ ಹಿತವಾದ ಗಾಳಿಯು ಬೀಸುತ್ತಿದೆ. ಮುಳ್ಳು ಗಿಡ ಕಂಟಿಗಳು ಆತನ ಬಟ್ಟೆಯನ್ನು ಹಿಡಿದು ಎಳೆದರೂ ನಿಧಾನವಾಗಿ ತಪ್ಪಿಸಿಕೊಂಡು ಅಡಿಯಿಡುತ್ತಿದ್ದಾನೆ.

ದೂರದಲ್ಲಿ ಎಲ್ಲೋ ಹುಲಿಯ ಘರ್ಜನೆಯನ್ನು ಕೇಳಿ ಸೋಮನಿಗೆ ಭಯ ಉಂಟಾಗಿ ಎದೆಯ ಸದ್ದು ಜಾಸ್ತಿಯಾಗುತ್ತಿದೆ. ಗಂಟಲು ಒಣಗಿ ಬಾಯಾರಿಕೆ ಉಂಟಾಗುತ್ತಿದೆ. ಅತ್ತಿತ್ತ ದೃಷ್ಟಿ ಹಾಯಿಸಿದಾಗ ಒಂದು ಪುಟ್ಟ ಝರಿಯು ಗೋಚರಿಸುತ್ತದೆ. ಆ ಝರಿಯ ನೀರನ್ನು ಬೊಗಸೆಯಲ್ಲಿ ಹಿಡಿದು ಗಂಟಲಲ್ಲಿ ಇಳಿಸಿ, ಬಾಯಾರಿಕೆಯನ್ನು ಇಂಗಿಸಿಕೊಳ್ಳುತ್ತಾನೆ.

ಕೊನೆಯ ಪ್ರಯತ್ನವೆಂಬಂತೆ ಸೋಮನು ಸುತ್ತಲೂ ನೋಡಿದಾಗ ಆತನಿಗೆ ದೂರದಲ್ಲೊಂದು ಅಸ್ಥಿಪಂಜರ ಕಾಣಿಸುತ್ತದೆ. ಆತನು ಸಮೀಪ ಹೋಗಿ ಗಮನಿಸಿದಾಗ ಅದು ಯಾವುದೋ ಹಸುವಿನದೇ ಅಸ್ಥಿಪಂಜರವೆಂಬುದು ಗಮನಕ್ಕೆ ಬರುತ್ತದೆ.

ಮಾಂಸಾಹಾರಿ ಪ್ರಾಣಿಯು ಅದನ್ನು ತಿಂದು ಮುಗಿಸಿ ಕೇವಲ ಅಸ್ಥಿಪಂಜರವನ್ನು ಮಾತ್ರ ಉಳಿಸಿಹೋದಂತೆ ಭಾಸವಾಗುತ್ತಿದೆ. ಎರಡು ಕೊಂಬುಗಳು ಚದುರಿ ಬಿದ್ದಿವೆ.

ಆ ದೃಶ್ಯವನ್ನು ನೋಡಿದ ಸೋಮನಿಗೆ ಕರುಳು ಕಿತ್ತು ಬಂದಂತಾಗುತ್ತದೆ. ಕಣ್ಣಂಚಿನಲ್ಲಿ ನೀರು ಚಿಮ್ಮುತ್ತದೆ. ತಾನು ಪ್ರೀತಿಯಿಂದ ಸಾಕಿದ ಹಸು ಹೀಗೆ ಆಹಾರವಾಗುತ್ತದೆ ಎಂದು ಅರಿತಿರಲಿಲ್ಲ ಎಂದು ಮನಸ್ಸಿನಲ್ಲಿಯೇ ಚಿಂತಿಸುತ್ತಾನೆ.

ನಿಧಾನವಾಗಿ, ಭಾರವಾದ ಹೆಜ್ಜೆಗಳನ್ನು ಇರಿಸುತ್ತಾ ಸೋಮನು ತನ್ನ ಗುಡಿಸಲಿನ ದಾರಿಯನ್ನು ಕ್ರಮಿಸಲು ಪ್ರಾರಂಭಿಸುತ್ತಾನೆ.

ಸೂರ್ಯನು ಪಶ್ಚಿಮದ ಅಂಚನ್ನು ತಲುಪಿದ್ದಾನೆ. ಆಗಸವು ಹೊನ್ನಿನ ಬಣ್ಣದಿಂದ ಕೂಡಿ ರಾರಾಜಿಸುತ್ತಿದೆ. ಆದರೆ ಭಾರವಾದ ಹೆಜ್ಜೆಗಳನ್ನು ಇಡುತ್ತಾ ಗುಡಿಸಲ ದಾರಿಯನ್ನು ಕ್ರಮಿಸಿದ ಸೋಮನ ಮುಖದಲ್ಲಿ ಪ್ರೇತ ಕಳೆಯು ಕಾಣಿಸುತ್ತಿದೆ.

ಹಸುವಿಗೋಸ್ಕರ ಅಲೆದಾಡಿ ಆತನ ದೇಹಕ್ಕೆ ಸುಸ್ತಾಗಿದ್ದರೆ, ಹಸುವು ಸಿಗದೇ, ಹಸುವಿನ ಅಸ್ಥಿಪಂಜರ ಕಂಡದ್ದರಿಂದ ಸೋಮನ ಮನಸ್ಸಿಗೂ ವಿಪರೀತ ಸುಸ್ತಾಗಿದೆ. ಆತನು ತ್ರಾಣವಿಲ್ಲದೇ ತನ್ನ ಹಣೆಬರಹವನ್ನು ಹಳಿದುಕೊಳ್ಳುತ್ತಾ ತನ್ನ ಗುಡಿಸಲ ಮೊದಲ ಭಡಿಯ ಮೇಲೆ ಗೋಡೆಗೆ ಒರಗಿ ಕುಳಿತುಕೊಳ್ಳುತ್ತಾನೆ.

ಈಗ ಆತನ ಮನಸ್ಸು ಇನ್ನೊಂದು ವಿಧದಲ್ಲಿ ಯೋಚಿಸಲು ಪ್ರಾರಂಭಿಸಿದೆ. ಹಸುವನ್ನು ಕ್ರೂರ ಪ್ರಾಣಿ ತಿಂದ ವಿಷಯವನ್ನು ಸುಬ್ಬಿಗೆ ಹೇಗೆ ತಿಳಿಸುವುದು ಎಂಬುದಾಗಿ ಯೋಚಿಸುತ್ತಿದ್ದಾನೆ.

ಅಷ್ಟರಲ್ಲಿ ಒಳಗಿನಿಂದ ಸುಬ್ಬಿಯು ಹೊರ ಬಂದು ನೋಡಿದಾಗ, ಸೋಮನು ಆಯಾಸದಿಂದ ಕುಳಿತಿರುವುದು ಕಾಣಿಸುತ್ತದೆ. ಒಳಹೋಗಿ ಒಂದು ತಂಬಿಗೆ ನೀರನ್ನು ತಂದು ನೀಡಿದ ಅವಳ ಮುಖದಲ್ಲಿನ ಮಂದಹಾಸವನ್ನು ಗಮನಿಸಿದ ಸೋಮನು "ಅಲ್ವೇ... ಏನು ಇಷ್ಟು ಸಂತೋಷದಿಂದಿದ್ದೀ ?" ಎಂದು ಪ್ರಶ್ನಿಸುತ್ತಾನೆ.

"ಅಂಬಾ... ಅಂಬಾ..." ಎಂಬ ಮುದ್ದು ಹಸುವಿನ ಕೂಗು ತನ್ನ ಹಟ್ಟಿಯಿಂದ ಕೇಳಿದಾಗ ಆತನು ನೀರನ್ನು ಕುಡಿಯದೇ ಹಟ್ಟಿಗೆ ಹೋಗಿ ನೋಡುತ್ತಾನೆ. ಅಲ್ಲಿ ಆತನ ಮುದ್ದು ಹಸು ನಿಂತು ಆತನನ್ನೇ ನೋಡುತ್ತಿದೆ.

"ಅಲ್ರೀ, ನೀವು ಆಚೆ ಹಸುವನ್ನು ಹುಡುಕಲು ಹೋದ ಕೆಲ ಸಮಯದಲ್ಲೇ ನಮ್ಮ ಹಸು ಹಟ್ಟಿಗೆ ಬಂದಿದೆ" ಎಂದು ಸುಬ್ಬಿ ಹೇಳಿದಾಗ ಸೋಮನಿಗೆ ಭಾರವಾದ ಹೃದಯ ಹಗುರಾದಂತೆ ತೋರುತ್ತದೆ. ತನ್ನ ಮುದ್ದು ಹಸುವನ್ನು ತಬ್ಬಿ ನಿಂತಿರುವ ಆತನ ಕಣ್ಣಿನಿಂದ ಆನಂದಭಾಷ್ಪವು ಇಳಿಯುತ್ತದೆ.

ಮಾನಸ ಹೆಗಡೆ
ಉಂಚಳ್ಳಿ, ಅಂಚೆ-ಉಂಚಳ್ಳಿ, ಶಿರಸಿ ತಾಲೂಕು, ಉತ್ತರ ಕನ್ನಡ - ೫೮೧ ೩೧೮

## ಜೇಬಿಗೆ ಆಪತ್ತು !!

ಹೆಂಡತಿ

ನಕ್ಕರೆ

ಕನ್ನಡ

ಕಸ್ತೂರಿ !

ಅತ್ತರೆ

ಜೇಬಿಗೆ

ಬಿತ್ತು

ಕತ್ತರಿ !!

ಕಾ. ಗಿ. ಹತ್ತಳ್ಳಿ
ಸಿಂದಗಿ

# ನೆಲದಿಂದ ಜಲ ತೆಗೆಯುವ 'ಬೋರು' ಕೆಲಸ

ಮನೆ ಎತ್ತರಕ್ಕೆ ನಿಂತ ರಿಗ್

ತಮ್ಮ ಜಮೀನು ಅಥವಾ ತೋಟ ಸದಾ ಹಸಿರಿನಿಂದ ಕಂಗೊಳಿಸಬೇಕು, ಅದರಲ್ಲಿ ಸಮೃದ್ಧ ಬೆಳೆ ತೆಗೆಯಬೇಕು ಎಂಬುದು ಎಲ್ಲ ರೈತರ ಹಂಬಲ. ಹೆಚ್ಚು ಮಳೆ ಬೀಳದ ಅಥವಾ ನೀರಿನ ಸೌಲಭ್ಯವಿಲ್ಲದ ಕಡೆ ಜಮೀನು ಹೊಂದಿರುವ ರೈತರಲ್ಲಿ ಈ ಹಂಬಲ ಇನ್ನೂ ಹೆಚ್ಚಾಗಿರುತ್ತದೆ. ಆಗ ಅವರಿಗೆ ತಮ್ಮ ಜಮೀನಿನಲ್ಲಿ ಕೊಳವೆ ಬಾವಿ ತೆಗೆಸುವ ಕನಸು ಬೀಳತೊಡಗುತ್ತದೆ. ಅದನ್ನು ಅವರು 'ಬೋರ್ ಹಾಕಿಸುವುದು' ಎನ್ನುತ್ತಾರೆ.

ಮೊದಲು, ತಮ್ಮ ಜಮೀನಿನಲ್ಲಿ ನೀರಿನ ಸೆಲೆ ಇದೆಯೆ ಎಂಬುದನ್ನು ಖಚಿತಪಡಿಸಿಕೊಳ್ಳಬೇಕಾದ್ದು ಬಹಳ ಮುಖ್ಯ. ಅದಾದನಂತರ ಬೋರಿನ ಕೆಲಸ. ಅದಕ್ಕಾಗುವ ವೆಚ್ಚ ಹೇಗೆ ಭರಿಸುವುದು ಎಂಬ ಚಿಂತೆ. ಅದಕ್ಕೆಂದು ಸರಕಾರ ನೀಡುವ 'ಸಬ್ಸಿಡಿ'ಗಾಗಿ ಅಲೆದಾಟ – ಇವೆಲ್ಲ ರೈತರನ್ನು ಮತ್ತಷ್ಟು ಹತಾಶೆಗೊಳಿಸುವ ವಿಷಯಗಳು.

ನೆಲದಾಳದಲ್ಲಿರುವ ಜಲ ಶೋಧಿಸಿಕೊಡುವ ಪತ್ತೇದಾರರುಗಳಿರುತ್ತಾರೆ! ಇವರೇ ಅಂತರ್ಜಲ ಶೋಧಕರು. ಅವರು ತನ್ನ ತಾತ ಅಥವಾ ತಂದೆಯಿಂದ ಈ ವಿದ್ಯೆಯನ್ನು ರೂಢಿಸಿಕೊಂಡವರು ಅಥವಾ ಅನುಭವದಿಂದ ಕಲಿತವರು. ಹಸ್ತದಲ್ಲಿ ಜಲರೇಖೆ ಇರುವವರಿಗೆ ಈ ವಿದ್ಯೆ ಸಿದ್ಧಿಸುತ್ತದೆ ಎಂದು ಜನರು ನಂಬುತ್ತಾರೆ. ಒಂದೆರಡು ಕಡೆ ಅವರು ತೋರಿಸಿದ ಸ್ಥಳದಲ್ಲಿ ನೀರು ಸಿಕ್ಕಿಬಿಟ್ಟರೆ ಅಂಥ ಜಲಪರಿಣತರನ್ನು ರೈತರು ಗೌರವದಿಂದ ಕಾಣುತ್ತಾರೆ. ಅವರ ಜ್ಞಾನ ದೃಷ್ಟಿಯ ಬಗ್ಗೆ ಬಾಯಿಂದ ಬಾಯಿಗೆ ಸುದ್ದಿ ಹರಡುತ್ತದೆ. ಅಂಥವರಿಗೆ ಬೇಡಿಕೆಯೂ ಹೆಚ್ಚು.

ಜಲ ಶೋಧಕರು ಪತ್ತೆದಾರಿಕೆಗೆ ಎರಡು ಬಗೆಯ ಉಪಕರಣ ಬಳಸುತ್ತಾರೆ. ಒಂದು ರೀತಿಯಲ್ಲಿ ಅವು ಅವರ ಸ್ಟೆತಾಸ್ಕೋಪುಗಳು! ಒಂದು, ಮಂತ್ರದಂಡ. ಎರಡನೆಯದು ತೆಂಗಿನಕಾಯಿ! ಮೊದಲನೆಯದು ಇಂಗ್ಲಿಷಿನ Y ಅಕ್ಷರಾಕಾರದ ಒಂದು ಕವಲು ಕಡ್ಡಿ. ಅದು ಬೇವು, ಅರಳಿ ಅಥವಾ ಬನ್ನಿಮರದ ಕಡ್ಡಿಯಾಗಿರಬಹುದು. ಕೆಲವರು ಮಿಶ್ರಲೋಹದಿಂದ ಅಂಥ ಒಂದು ಕಡ್ಡಿ ತಯಾರಿಸಿ ಇಟ್ಟುಕೊಂಡಿರುತ್ತಾರೆ.

**ಪರಂಜ್ಯೋತಿ**

ಜಲಶೋಧನೆಗೆ ಸಾಧಾರಣವಾಗಿ ಬೆಳಗಿನ ವೇಳೆಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಜಲಶೋಧಕ ಕವಲು ಕಡ್ಡಿಯ ಎರಡು ತುದಿಗಳನ್ನು ತನ್ನ ಬೆರಳುಗಳಲ್ಲಿ ಹಿಡಿದುಕೊಂಡು ಜಮೀನಿನಲ್ಲಿ ನಡೆದಾಡುತ್ತಾನೆ. ಕೆಲವು ಕಡೆ ಕಡ್ಡಿ ಬರಿದೆ ಕಂಪಿಸುತ್ತದೆ. ನೆಲದಲ್ಲಿ ನೀರಿನ ಸೆಲೆ ಹೆಚ್ಚಾಗಿರುವ ಕಡೆ ಕವಲು ಕಡ್ಡಿಯ ಬುಡ ಮೇಲಕ್ಕೆ ನಿಲ್ಲುತ್ತದೆ. ಜಲ ಶೋಧಕ ಅಲ್ಲಿ ನಿಂತು ಗುರುತು ಮಾಡಲು ಹೇಳುತ್ತಾನೆ. ಹೀಗೆ ನಾಲ್ಕೈದು ಬಾರಿ ಪರೀಕ್ಷೆಯ ನಂತರ ಅಂತಿಮವಾಗಿ ಗುರುತು ಮಾಡುವ ಕಡೆ ನೀರು ಖಂಡಿತ ಉಕ್ಕುತ್ತದೆ ಎಂಬ ಭರವಸೆ ನೆಲದೊಡೆಯನ ಎದೆಯಲ್ಲಿ ಮೂಡುತ್ತದೆ.

ಅಂತರ್ಜಲ ಶೋಧಕ ತನ್ನ ಮಂತ್ರದ ಕಡ್ಡಿಯೊಂದಿಗೆ

ಎರಡನೆಯದು ತೆಂಗಿನಕಾಯಿ. ಇದು ಮಂತ್ರದ ಕಾಯಿಯಲ್ಲ. ನೀವು ಒದಗಿಸುವ ತೆಂಗಿನ ಕಾಯಿಯನ್ನೇ ಆತ ಬಳಸುತ್ತಾನೆ.

ಜಲಶೋಧನೆಗೆ ಸಾಧಾರಣವಾಗಿ ಬೆಳಗಿನ ವೇಳೆಯನ್ನು ಮಾತ್ರ ಆಯ್ಕೆಮಾಡಿಕೊಳ್ಳುತ್ತಾರೆ. ಜಲಶೋಧಕ ಕವಲು ಕಡ್ಡಿಯ ಎರಡು ತುದಿಗಳನ್ನು ತನ್ನ ಬೆರಳುಗಳಲ್ಲಿ ಹಿಡಿದುಕೊಂಡು ಜಮೀನಿನಲ್ಲಿ ನಡೆದಾಡುತ್ತಾನೆ. ಕೆಲವು ಕಡೆ ಕಡ್ಡಿ ಬರಿದೆ ಕಂಪಿಸುತ್ತದೆ. ನೆಲದಲ್ಲಿ ನೀರಿನ ಸೆಲೆ ಹೆಚ್ಚಾಗಿರುವ ಕಡೆ ಕವಲು ಕಡ್ಡಿಯ ಬುಡ ಮೇಲಕ್ಕೆ ನಿಲ್ಲುತ್ತದೆ. ಜಲ ಶೋಧಕ ಅಲ್ಲಿ ನಿಂತು ಗುರುತು ಮಾಡಲು ಹೇಳುತ್ತಾನೆ. ಹೀಗೆ ನಾಲ್ಕೈದು ಬಾರಿ ಪರೀಕ್ಷೆಯ ನಂತರ ಅಂತಿಮವಾಗಿ ಗುರುತು ಮಾಡುವ ಕಡೆ ನೀರು ಖಂಡಿತ ಉಕ್ಕುತ್ತದೆ ಎಂಬ ಭರವಸೆ ನೆಲದೊಡೆಯನ ಎದೆಯಲ್ಲಿ ಮೂಡುತ್ತದೆ.

ಎರಡನೆಯ ವಿಧಾನದಲ್ಲಿ ಜಲಶೋಧಕ ತೆಂಗಿನಕಾಯಿಯನ್ನು ಎರಡೂ ಕೈಗಳಲ್ಲಿ ಹಿಡಿದು ಕೊಂಡು ತಿರುಗಾಡುತ್ತಾನೆ. ಜಲದ ಸೆಲೆ ಇರುವ ಕಡೆ ತೆಂಗಿನಕಾಯಿಯೊಳಗಡೆ ಎಳನೀರು ತುಳುಕಿದಂತೆ ಪ್ರತಿಕ್ರಿಯಿಸುತ್ತದಂತೆ. ಆ ಸ್ಥಳದಲ್ಲಿ ತೆಂಗಿನಕಾಯಿ ಇರಿಸಿ, ಅದರ ಮೇಲೆ ಒಂದು ತುಂಡು ಹಲಗೆ ಇರಿಸಿ, ಜಲಶೋಧಕ ಅದರ ಮೇಲೆ ಕುಳಿತಾಗ ಅದು ಮೊದಲು ನಿಧಾನವಾಗಿ ತಿರುಗತೊಡಗುತ್ತದೆ. ಅನಂತರ ಬಿರುಸಾಗಿ ತಿರುಗುತ್ತದೆ. ಜಲಶೋಧಕನ ಮುಖ ಅರಳುತ್ತದೆ. ಆವರೆಗೆ ಮನಸ್ಸಿನಲ್ಲಿ ಗಂಗಾದೇವಿಯನ್ನು ಸ್ಮರಿಸುತ್ತ ಜಲಶೋಧಕನ ಹಿಂದೆ ಹಿಂದೆ ಅಲೆಯುತ್ತಿದ್ದ ಮಾಲಿಕನ ಮುಖವೂ ಅಷ್ಟಗಲವಾಗುತ್ತದೆ.



*ತೆಂಗಿನಕಾಯಿ ಮೂಲಕ ಅಂತರ್ಜಲ ಶೋಧನೆ*

ಮೇಲಿನದು ಖಾಸಗಿ ಜಲಶೋಧಕರ ವಿಷಯವಾಯಿತು. ವೈಜ್ಞಾನಿಕ ಆಧಾರ ಅಪೇಕ್ಷಿಸುವವರು ಈ ವಿಧಾನಗಳನ್ನು ನಂಬುವುದಿಲ್ಲ. ಅಂಥವರು ಗಣಿ ಮತ್ತು ಭೂವಿಜ್ಞಾನ ಇಲಾಖೆಯವರು ಒದಗಿಸುವ ಅಂತರ್ಜಲ ಶೋಧಕರ ಸಹಾಯ ಪಡೆಯುತ್ತಾರೆ. ಇವರು ತರಬೇತಾದ ಅಂತರ್ಜಲ ಶೋಧಕರು. 'ರೆಜಿಸ್ಟಿವಿಟಿ ಮೀಟರ್' ಸಹಾಯದಿಂದ ನೆಲದಾಳದಲ್ಲಿರುವ ಜಲದ ಸೆಲೆಯನ್ನು ಪತ್ತೆ ಹಚ್ಚಿಕೊಡುತ್ತಾರೆ.

ಅವರ ಸೇವೆಯನ್ನು ಪಡೆಯಲು, ನಿರ್ದಿಷ್ಟ ಸೇವಾ ಶುಲ್ಕ ತುಂಬಿಸಿ, ಗಣಿ ಮತ್ತು ಭೂವಿಜ್ಞಾನ ಇಲಾಖೆಗೆ ಅರ್ಜಿ ಹಾಕಬೇಕು. ಸರಕಾರದ ಇಲಾಖೆಯ ಸಹಾಯ ಕೂಡಲೇ ಒದಗಿಬರುವಂಥದ್ದಲ್ಲ. ನಿಮ್ಮ ಸರತಿ ಬರುವವರೆಗೆ ಕಾಯಬೇಕು. ಒಂದೆರಡು ವಾರಗಳಾಗಬಹುದು, ತಿಂಗಳೂ ಆಗಬಹುದು! ಶೋಧಕರು ಲಭ್ಯವಿರುವಾಗ ನಿಮಗೆ ಸೂಚನೆ ಬರುತ್ತದೆ. ಅವರನ್ನು ಕರೆತರುವ ಹಾಗೂ ಕಳಿಸಿಕೊಡುವ, ಜೊತೆಗೆ, ಊಟ ಉಪಚಾರ ಇತ್ಯಾದಿ ಎಲ್ಲ ವ್ಯವಸ್ಥೆ ನೀವು ನೋಡಿಕೊಳ್ಳಬೇಕು. ಇಂಥ ವಿಳಂಬದ ಕಾರಣ ಹೆಚ್ಚಿನವರು ಖಾಸಗಿ ಅಂತರ್ಜಲ ಶೋಧಕರ ಮೊರೆ ಹೋಗುತ್ತಾರೆ.

ಮುಂದಿನದು 'ಬೋರು' ಯಂತ್ರದ ಕೆಲಸ.

ನೀರಿನ ಅಭಾವ ರೈತರನ್ನು ಮಾತ್ರವಲ್ಲ, ನಗರಗಳಲ್ಲಿರುವ ಮನೆ ಮಾಲಿಕರನ್ನೂ ಕಾಡಿಸುತ್ತದೆ. ಮಹಡಿ ಮನೆ ಕಟ್ಟಿಸಿರುತ್ತಾರೆ. ಬಾಡಿಗೆಗೆ ಬರುವವರಿಗೆ ಗಾಳಿ-ಬೆಳಕಿನ ಜೊತೆಗೆ ೨೪ ಗಂಟೆ ನೀರು ಸರಬರಾಜಿನ ಭರವಸೆ ನೀಡಿರುತ್ತಾರೆ. ಏನಾದರೂ ಕಾರಣಕ್ಕೆ ನೀರು ಸರಬರಾಜು ನಿಂತಾಗ, ಮಹಡಿ ಮನೆಗಳವರು ಪ್ಲಾಸ್ಟಿಕ್ ಕೊಡಗಳೊಂದಿಗೆ ನೀರಿಗಾಗಿ ಬೀದಿಬೀದಿ ಅಲೆದಾಡಬೇಕಾಗುತ್ತದೆ. ಅನೇಕರು ಬೇರೆ ಕಡೆಗೆ ವಸತಿ ಬದಲಾಯಿಸುತ್ತಾರೆ. ಮನೆ ಮಾಲಿಕರ ಪಾಲಿಗಿರುವುದು ಕೊಳವೆ ಬಾವಿ ತೆಗೆಸುವ ದಾರಿಯೊಂದೇ. ಅವರಿಗೂ ಅಂತರ್ಜಲ ಶೋಧಕರ ಸಹಾಯ ಅಗತ್ಯವಾಗುತ್ತದೆ.

ಇನ್ನು ಬೋರು ಹೊಡೆಯುವ ದೈತ್ಯ ಭೈರಿಗೆಯ ಗಡಿಬಿಡಿ ಪ್ರಾರಂಭವಾಗುತ್ತದೆ. ಒಂದು ದೊಡ್ಡ ಲಾರಿಯ ಮೇಲೆ ಸ್ಥಾಪಿಸಲಾಗಿರುವ ದೈತ್ಯ ಭೈರಿಗೆ. ಆ ದೈತ್ಯ ಇಕ್ಕಟ್ಟಿನ ಸ್ಥಳಗಳಲ್ಲಿ ಹೇಗೋ ನುಸುಳಿ ನಾಲ್ಕು ಮಹಡಿ ಎತ್ತರಕ್ಕೆ ನಿಂತು ನಿರ್ದಿಷ್ಟ ಸ್ಥಳದಲ್ಲಿ ನೆಲ ಕೊರೆಯಲು ತಯಾರಾಗುತ್ತದೆ. ಅದರ ಜೊತೆಗೆ ಚಾಲಕ, ಸಹಾಯಕ, ಮೇಲ್ವಿಚಾರಕ – ಹೀಗೆ ಕನಿಷ್ಠ ಇಪ್ಪತ್ತು ಮಂದಿ ಕೆಲಸಗಾರರಿರುತ್ತಾರೆ. ಕೆಲಸಗಾರರ ಪೈಕಿ ಕನ್ನಡ, ತಮಿಳು ಮಾತಾಡುವವರ ಜೊತೆಗೆ ಬಿಹಾರಿನ, ಮಣಿಪುರದ, ಪಶ್ಚಿಮ ಬಂಗಾಳದ ಯುವಕರಿರುತ್ತಾರೆ. ಇವರೆಲ್ಲರೂ ದುಡಿಮೆಯ ಭಾಷೆ ಕಲಿತವರು!

ನೆಲ ಕೊರೆಯುವ ಭೈರಿಗೆ ತುದಿ ನೀರಿನ ಸೆಲೆಯನ್ನು ಗುರುತಿಸಿರುವ ಕಡೆ ಮುಖ ಮಾಡಿರುವಂತೆ ಸ್ಥಾಪಿಸುತ್ತಾರೆ. ಈ ತುದಿಗೆ ಬಿಟ್ ಎಂದು ಹೆಸರು. ಮಣ್ಣು ಮತ್ತು ಬಂಡೆಯನ್ನು ಕಡೆಯುವ ಕಡೆಗೋಲು. ಎಲ್ಲರೂ ಸೇರಿ ಚಕಚಕ ಆ ದೈತ್ಯನನ್ನು ಸ್ಥಾಪಿಸುತ್ತಾರೆ. ಕಿವಿ ಕೊರೆದು ಹೋಗುವಂತೆ ಗರಗರ ಸದ್ದುಮಾಡುವ ದೈತ್ಯ ಕಂಪ್ರೆಸರ್‌ನಿಂದ ಉತ್ಪತ್ತಿಯಾಗುವ ಗಾಳಿಯ ಸಹಾಯದಿಂದ ನಡೆಯುವ ಬಿಟ್‌ನ ಕೊರೆತದ ಒತ್ತಡ ಮತ್ತು ರಭಸಕ್ಕೆ ನೆಲ ಪುಡಿಪುಡಿಯಾಗಿ ಧೂಳು ಕವಿಯತೊಡಗುತ್ತದೆ. ಕೆಲಸಗಾರರೂ ಯಂತ್ರದ ಭಾಗವಾಗಿ ತಮ್ಮ ತಮ್ಮ ಕೆಲಸ ಮಾಡತೊಡಗುತ್ತಾರೆ. ಯಂತ್ರದ ಸದ್ದಿನಲ್ಲಿ ಯಾರ ಮಾತೂ ಯಾರ ಕಿವಿಗೂ ಬೀಳುವಂತಿರುವುದಿಲ್ಲ. ಆದರೆ ಸನ್ನೆಯ ಮೂಲಕ ಯಾವ ಕೆಲಸ ಆಗಬೇಕು ಎಂಬುದನ್ನು ಅವರು ಅರಿಯುತ್ತಾರೆ. ಸುಮಾರು ೩೦ ಅಡಿ ಉದ್ದದ ಪೈಪಿನ ತುದಿಯಲ್ಲಿರುವ ಬಿಟ್ ಗಮ್ಯ ಆಳ ತಲಪಿದನಂತರ ಚಾಲಕ ಅದನ್ನು ನಿಲ್ಲಿಸುತ್ತಾನೆ. ಕಂಪ್ರೆಸರ್ ನಿಟ್ಟುಸಿರುಬಿಟ್ಟು ನಿಂತಾಗ, ಮತ್ತೊಂದು ಪೈಪನ್ನು ಜೋಡಿಸುತ್ತಾರೆ. ಕೊರೆತ ಮುಂದುವರಿಯುತ್ತದೆ. ಕೊರೆತದ ಸದ್ದು ಮತ್ತು ಧೂಳಿನಿಂದ ತಪ್ಪಿಸಿಕೊಳ್ಳಲು




ನೀರು ಬಂತು




ಜಲ ಉಕ್ಕಿದ ಸಮಯ



*ಅಡಿಗೆ ಅಂಗಡಿ*

ನೆರೆದಿದ್ದ ಕುತೂಹಲಿಗಳು ಒಬ್ಬೊಬ್ಬರೇ ಅಲ್ಲಿಂದ ಕಾಲ್ತೆಗೆಯುತ್ತಾರೆ. ಕೆಲಸಗಾರರು ತಮ್ಮ ಕೆಲಸದಲ್ಲಿ ನಿರತರಾಗಿರುತ್ತಾರೆ.

ಒಂದು ಕಡೆ ಬೋರು ಯಂತ್ರ ಸ್ಥಾಪನೆಯಾಗುತ್ತಿದ್ದಂತೆ, ಒಬ್ಬಾತ ಅಡಿಗೆ ಅಂಗಡಿ ಬಿಚ್ಚಿರುತ್ತಾನೆ. ಮೊದಲಿಗೆ ಎಲ್ಲರಿಗೂ ಬಿಸಿಬಿಸಿ ಚಾ ಸರಬರಾಜಾಗುತ್ತದೆ. ಅನಂತರ ಅಕ್ಕಿ ಬೇಯಿಸಿ, ಒಂದೆರಡು ತರಕಾರಿ ಸೇರಿಸಿ ಕಿಚಿಡಿಯೋ ಮತ್ತೊಂದೋ ತಯಾರು ಮಾಡತೊಡಗುತ್ತಾನೆ.

ಯಂತ್ರ ತನ್ನ ಕೆಲಸ ಮುಂದುವರಿಸುತ್ತದೆ. ಪೈಪು ಹೊತ್ತು ತಂದು ಜೋಡಿಸುವ ಹುಡುಗರಿಗೆ ಬಿಡುವೇ ಇರುವುದಿಲ್ಲ. ಆಗಲೇ ಇನ್ನೂರು ಮುನ್ನೂರು ಅಡಿಗಳಷ್ಟು ಆಳಕ್ಕೆ ಬಿಟ್ ನುಗ್ಗಿ ಹೋಗಿದೆ. ರಂಧ್ರದಿಂದ ಸ್ವಲ್ಪ ತೇವದ ಮಣ್ಣು ಹೊರಬರುತ್ತದೆ. ಕೊರೆತ ಮುಂದುವರಿಯುತ್ತದೆ. ಬಿಟ್ ಮತ್ತಷ್ಟು ಆಳಕ್ಕೆ ಕೊರೆಯುತ್ತ ಹೋಗುತ್ತದೆ. ಯಂತ್ರ ಚಾಲಕ ಬೀಡಿ ಎಳೆಯುತ್ತ, ಹುಡುಗರನ್ನು ಜೋರು ದನಿಯಲ್ಲಿ ಬೆದರಿಸುತ್ತ ಕೆಲಸ ತೆಗೆಯುತ್ತಾನೆ. ಕೆಲಸಗಾರರ ಮುಖದಲ್ಲಿ ಸ್ಥಿತಪ್ರಜ್ಞ ಭಾವ. ಮಾಲಿಕನ ಮುಖದಲ್ಲಿ ಆತಂಕ ಮಡುಗಟ್ಟಿರುತ್ತದೆ. ಆಗ ರಂಧ್ರದಿಂದ ಕೆಸರು ಚಿಮ್ಮುತ್ತದೆ. ಹಿಂದಿನಿಂದ ನೀರು! ಎಲ್ಲರೂ ತೀರ್ಥೋದ್ಭವ ಕಾಣುವ ತವಕದಿಂದ ಅತ್ತ ಇಣುಕುತ್ತಾರೆ. ಮತ್ತೆ ಸ್ವಲ್ಪ ಹೊತ್ತಿಗೆಲ್ಲ ನೀರು ಹೆಚ್ಚು ರಭಸದಿಂದ ಮೇಲಕ್ಕೆ ಚಿಮ್ಮುತ್ತದೆ. ತಿಳಿಯಾದ ನೀರು. ಮಣ್ಣು ಕೆಸರು ಸಹಿತ ನೀರು ಬೀದಿಗುಂಟ ಹರಿಯತೊಡಗುತ್ತದೆ.

ಚಾಲಕ, ಮೇಲ್ವಿಚಾರಕ ಚಿಮ್ಮುವ ನೀರನ್ನು ಬೊಗಸೆಯಲ್ಲಿ ಹಿಡಿದು ಅದರ ಬಣ್ಣ, ವಾಸನೆ, ರುಚಿ ಪರೀಕ್ಷಿಸುತ್ತಾರೆ. ಉಕ್ಕಿಬರುವ ನೀರಿನ ರಭಸದ ಅಂದಾಜಿನ ಮೇಲೆ ಅದು ನಾಲ್ಕು ಇಂಚು ನೀರು, ಐದು ಇಂಚು ನೀರು ಎಂದು ಲೆಕ್ಕ ಹಾಕುತ್ತಾರೆ. ಮಾಲಿಕನಿಗೆ ನೀರಿನ ರುಚಿ ತೋರಿಸುತ್ತಾರೆ. ನೀರು ಸಿಹಿಯಾಗಿದೆ, ಆದರೆ ಇನ್ನಷ್ಟು ಆಳಕ್ಕೆ ಕೊರೆದರೆ ಆಗಬಹುದು ಎಂಬುದು ಮಾಲಿಕನ ಅಭಿಪ್ರಾಯ. ಬಿಟ್ ಮತ್ತಷ್ಟು ಆಳಕ್ಕೆ ಕೊರೆಯುತ್ತ ಇಳಿದಷ್ಟು ಬೋರಿನವರಿಗೆ ಲಾಭವಷ್ಟೆ! ಕೆಲಸ ಮುಂದುವರಿಯುತ್ತದೆ.

ಊಟದ ಹೊತ್ತು ಮೀರಿದೆ. ಕೆಲಸಗಾರರು ಇಬ್ಬರು ಮೂವರಾಗಿ ಬಂದು, ಕೈತೊಳೆದ ಶಾಸ್ತ್ರ ಮಾಡಿ ತಟ್ಟೆಯಲ್ಲಿರುವುದನ್ನು ಕಬಳಿಸುತ್ತಾರೆ. ಹಳ್ಳಿಗಳ ಕಡೆ ನೀರು ಉಕ್ಕಿದ ಸಂತೋಷಕ್ಕೆ ಹೊಲದೊಡೆಯ ಕೆಲವೊಮ್ಮೆ ಇವರಿಗೆ ಬಾಡೂಟದ ಔತಣ ಮಾಡಿಸುವುದುಂಟು!

ಕೊಳವೆ ಬಾವಿಯಿಂದ ಸರಿಯಾದ ಪ್ರಮಾಣದಲ್ಲಿ ನೀರು ಉಕ್ಕದಿರುವ ಸಂದರ್ಭದಲ್ಲಿ ಬೋರು ಯಂತ್ರ ಇಡೀ ಹಗಲು, ರಾತ್ರಿ ಸಹ ಕೊರೆಯುತ್ತಿರುತ್ತದೆ. ಸುತ್ತಲಿನ ಮನೆಗಳವರು ಸದ್ದಿನ ಕಿರಿಕಿರಿ ಸಹಿಸಿಕೊಂಡು, ಇದು ಯಾವಾಗ ಮುಗಿಯುತ್ತದೆ ಎಂಬ ನಿರೀಕ್ಷೆಯಲ್ಲಿರುತ್ತಾರೆ.

ಬೋರು ಯಂತ್ರ ತನ್ನ ಕೆಲಸ ನಿಲ್ಲಿಸಿದಾಗ ಎಲ್ಲರಿಗೂ ಸಂಭ್ರಮ! ಬೋರು ಕೊರೆತ ನಿರರ್ಥಕವಾಗಲಿಲ್ಲ ಎಂಬ ಹಿಗ್ಗು. ಹಿಂದಿನ ಕಾಲದಲ್ಲಿ ಒಂದು ಬಾವಿ ತೆಗೆಯುವುದೆಂದರೆ ತಿಂಗಳುಗಟ್ಟಲೆ ಕೆಲಸ ಹಿಡಿಯುತ್ತಿತ್ತು. ಈಗ ಒಂದೇ ದಿನದ ಕೆಲಸ. ಕೊಳವೆಗೆ ಸಬ್‌ಮರ್ಸಿಬಲ್ ಪಂಪ್ ಅಳವಡಿಸುವವರೆಗೆ ಅದರ ಮೇಲೊಂದು ಮುಚ್ಚಳ ಹಾಕಿ ಭದ್ರಪಡಿಸಬೇಕು. ತೆರೆದ ಕೊಳವೆ ಬಾವಿಗೆ ಜಾರಿಬಿದ್ದ ಮಕ್ಕಳು ಪ್ರಾಣ ಕಳೆದುಕೊಂಡಿರುವ ನಿದರ್ಶನಗಳಿವೆ.

ಕೆಲವು ಸಂದರ್ಭಗಳಲ್ಲಿ ಬೋರು ಯಂತ್ರದವರಿಗೆ ಬಿಡುವೇ ಇರುವುದಿಲ್ಲ. ಒಂದಾದನಂತರ ಮತ್ತೊಂದರಂತೆ ಅವರಿಗಾಗಿ ಅವಕಾಶಗಳು ಕಾಯುತ್ತಿರುತ್ತವೆ.

**ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ಶ್ರೀರಾಮ ದೇವಾಲಯ ರಸ್ತೆ
ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭




# ಯಾಕೆ ಬೇಕೊ ನಮಗೆ

ಯಾಕೆ ಬೇಕೊ ನಮಗೆ ಆ ದೇವರು
ಯಾಕೆ ಬೇಕೊ ನಮಗೆ ಆ ದೇವರು

ನೀಲಿ ಬಾನಲಿ ತೇಲಿ ತೇಲಿ
ಹಾರಾಡುವ ಆ ಹಕ್ಕಿಗೆ
ಯಾವ ದೇವರೂ ಇಲ್ಲ
ಸಾಗರದಾಳದಲಿ ಮುಳುಗಿ ಮುಳುಗಿ
ಈಜಾಡುವ ಆ ಮೀನಿಗೆ
ಯಾವ ದೇವರೂ ಇಲ್ಲ

ಯಾಕೆ ಬೇಕೊ ನಮಗೆ ಆ ದೇವರು

ಪೂಜೆಯೂ ಇಲ್ಲ ಪುರೋಹಿತರೂ ಇಲ್ಲ
ಮಂದಿರ ಮಸೀದಿ ಚರ್ಚುಗಳಿಲ್ಲ
ಬೇವು ಮಾವು ಮಲ್ಲಿಗೆಗೆ
ತೇಗ ತುಳಸಿ ಸಂಪಿಗೆಗೆ

ಯಾಕೆ ಬೇಕೊ ನಮಗೆ ಆ ದೇವರು

ಕೋಟಿ ಕೋಟಿ ವರುಷಗಳಿಂದ
ಅರಳಿ ನಿಂತಿಹ ಜೀವ ಸಂಕುಲ
ಬಾಳಿ ಬೆಳೆದಿದೆ ನೆಮ್ಮದಿಯಿಂದ
ದೇವರಿಲ್ಲದೆ ದೇವರ ಹಂಗೂ ಇಲ್ಲದೆ

ಯಾಕೆ ಬೇಕೊ ನಮಗೆ ಆ ದೇವರು

ಸುತ್ತ ಒಮ್ಮೆ ನೋಡಿದರೂ
ಸಾಕು ಒಳಗಿನ ಕಣ್ಣು ತೆರೆದು
ಎಷ್ಟು ನಿಚ್ಚಳ ಎಷ್ಟು ಸುಂದರ
ದೇವರಿಲ್ಲದ ಈ ಸತ್ಯ

ಯಾಕೆ ಬೇಕೊ ನಮಗೆ ಆ ದೇವರು

ಹೊಂಗೆ ತೆಂಗು ಮಂಗನಂತೆ
ಬಸಳೆ ಜಿರಳೆ ಮೊಸಳೆಯಂತೆ
ಸಹಜವಾಗಿ ಬದುಕಲು ಸರಳವಾಗಿ ಬದುಕಲು
ಸಂತಸದಿಂದ ಬಾಳಲು ಬಾಳಿ ಸಂತಸವಾಗಲು

ಯಾಕೆ ಬೇಕೊ ನಮಗೆ ಆ ದೇವರು
ಯಾಕೆ ಬೇಕೊ ನಮಗೆ ಆ ದೇವರು

**ಸಂಕುಲಜೀವ (ಸಂಜೀವ ಕುಲಕರ್ಣಿ)**
'ನಗೆ ಮಲ್ಲಿಗೆ', ನಂ. ೨೦/೧, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ – ೫೮೦ ೦೦೭

ನಾನು ಓದಿದ ಪುಸ್ತಕ

# ಕಾಫಿ ಹೌಸ್




ಲೇಖಕರು
**ಪ್ರತಿಭಾ ನಂದಕುಮಾರ್**
ಪುಟಗಳು : ೮೮ ಬೆಲೆ : ರೂ. ೮೦/-
ಪ್ರಕಾಶಕರು
**ಅಂಕಿತ ಪುಸ್ತಕ**
ನಂ. ೫೩, ಗಾಂಧಿಬಜಾರ್ ಮುಖ್ಯರಸ್ತೆ
ಬಸವನಗುಡಿ, ಬೆಂಗಳೂರು – ೫೬೦ ೦೦೪

ನಮ್ಮ ಜನಪ್ರಿಯ ಸಿನೆಮಾಗಳಿಗೆ ಯಾವುದೇ ಕಥೆ ಕೊಟ್ಟರೂ ಅದಕ್ಕೊಂದು ಸಾಂಗು, ಒಂಚೂರು ಪ್ರೀತಿ–ಪ್ರೇಮ, ಒಂದು ಕ್ಯಾಬರೆ, ಒಂದು ಫೈಟು, ಸ್ವಲ್ಪ ಸೆಂಟಿಮೆಂಟು, ಕೊನೆಕುಸುಕು (ಟೇಲ್‌ಟ್ವಿಸ್ಟಿಂಗ್) ಇತ್ಯಾದಿ ಮಸಾಲ ಬಂದು ಸೇರೋದು ಮಾಮೂಲಿ. ಇವೆಲ್ಲ ಸಿನೆಮಾದ ಕಾಮನ್ ಗ್ರಾಮರ್ ಅನ್ನುವಷ್ಟು ಜನಪ್ರಿಯ ಆಗಿದೆ. ಹಾಗೆಯೇ ಸಾಹಿತ್ಯಕ್ಕೂ ಅದರದೇ ಆದ ಕಾಮನ್ ಗ್ರಾಮರ್ ಇರುತ್ತದೆ. (ಇದು ಕಾಲಕಾಲಕ್ಕೆ ಬದಲಾಗುತ್ತ ಬಂದಿದೆ). ಕೆಲವೊಮ್ಮೆ ಈ ಗ್ರಾಮರ್‌ನಿಂದ ತಪ್ಪಿಸಿಕೊಳ್ಳುವ ಯತ್ನವನ್ನೂ ನಮ್ಮ ಸಾಹಿತ್ಯ ಮಾಡಿದೆ. ಆಧುನಿಕ ಕಾವ್ಯಕ್ಕಂತೂ ತನ್ನದೇ ಸ್ಥಾಪಿತ ವ್ಯಾಕರಣದಿಂದ ಹೊರಕ್ಕೆ ಬರಲು ಸಾಧ್ಯವೇ ಆಗುತ್ತಿಲ್ಲ. ಅಲ್ಲೊಂದು ಇಲ್ಲೊಂದು ಅಪವಾದ ಎಂಬಂತೆ ಆಗಾಗ ಇಂತಹ ಹೊರಕ್ಕೆ ಜಿಗಿಯುವ ಯತ್ನಗಳು ಆಗುತ್ತ ಬಂದಿವೆ. ಪ್ರತಿಭಾ ಅವರ 'ಕಾಫಿ ಹೌಸ್' ಅಂತಹ ಸ್ಥಾಪಿತ ವ್ಯಾಕರಣದಿಂದ ಹೊರಕ್ಕೆ ಬರಲು ಯತ್ನಿಸಿರುವ ಸಂಕಲನ. ಕವಿತೆಯ ಸ್ಥಾಪಿತ ಅಥವಾ ಪುರುಷನಿರ್ಮಿತ ಲಯವಿನ್ಯಾಸ, ಗಾಂಭೀರ್ಯ, ವೈಚಾರಿಕತೆ, ಭಾಷೆ ಹೀಗೆ ಎಲ್ಲದರಿಂದ ಬಿಡುಗಡೆಗೆ ಯತ್ನಿಸಿರುವ ಸಂಕಲನ (ಚೌಕಟ್ಟು ಮಾತ್ರ ಹಳೆಯದೆ). ಇದನ್ನು ಚಿಕ್ಕ ಚಿಕ್ಕ ನುಡಿ ಚಿತ್ರಗಳ, ಪ್ರಸಂಗಗಳ ನಿರೂಪಣೆ ಎನ್ನಬಹುದು. ಒಂದು ಮಟ್ಟಿಗೆ ಸೆಕ್ಸ್ ಬುಕ್ ಎಂತಲೂ ಕರೆಯಬಹುದು. ಕಟುವಾಸ್ತವದ ಡೇರಿಂಗ್ ಬರವಣಿಗೆ ಎನ್ನಲೂಬಹುದು. ನಮ್ಮ ಸಮಾಜ ಯಾವುದನ್ನು ಮುಚ್ಚಿಡಲು ಬಯಸುತ್ತದೋ ಅದನ್ನು ಬಿಚ್ಚಿ ಎಸೆಯುವ ಬರವಣಿಗೆ ಇದು. ಪೊಯೆಟಿಕ್ ಲೈಸನ್ಸನ್ನು ಹೆಣ್ಣೊಬ್ಬಳು ಬಳಸಬಹುದಾದ ಒಳ್ಳೆಯ ಮಾದರಿಗಳಂತೆ ಇಲ್ಲಿನ ಪದ್ಯಗಳು ಇವೆ. ಕವನವೆಂದರೆ ಕಲಾತ್ಮಕ ಅಭಿವ್ಯಕ್ತಿ ಎಂಬ ಮಾತೆಲ್ಲ ಇಲ್ಲಿ ಗಾಳಿಗೆ ತೂರಲ್ಪಟ್ಟಿದೆ. ಪುರುಷ ಕಟ್ಟಿರುವ, ಅಷ್ಟೇ ಏಕೆ, ಈವರೆಗೆ ಪ್ರತಿಭಾ ಅವರೇ ಕಟ್ಟಿರುವ, ಕಾವ್ಯದ ಬಂಧ, ಶಿಲ್ಪ, ಕಲಾತ್ಮಕತೆ ಎಲ್ಲವನ್ನೂ ಮುರಿದಿರುವ ಪದ್ಯಗಳು ಇಲ್ಲಿವೆ. ಮೇಲ್ನೋಟಕ್ಕೆ ಇವು ಕವನಗಳೇ ಅಲ್ಲ ಎಂದು ಯಾರಾದರೂ ಹೇಳಿಬಿಡಬಹುದು. ಹಾಗಿವೆ ಇಲ್ಲಿನ ಕವನಗಳು. ಪ್ರಾಚೀನ ಕಾವ್ಯ ಹಾಗಿರಲಿ, ಕುವೆಂಪು ಪದ್ಯಗಳನ್ನೇ ಇವತ್ತು ಅಯ್ಯೋ ಇದೆಲ್ಲ ಹಳಗನ್ನಡ, ಅರ್ಥ ಆಗಲ್ಲ ಅನ್ನುವ ಇಂಗ್ಲಿಷ್ ಮೀಡಿಯಮ್ಮಿನ ವಿದ್ಯಾರ್ಥಿಗಳು ಇರುವ ಕಾಲದಲ್ಲಿ ಪ್ರತಿಭಾ ಅವರು ಕಾವ್ಯ ಅಂದರೆ ಹೀಗೂ ಬರೆಯಬಹುದಾ ಅನ್ನುವ ರೀತಿಯಲ್ಲಿ ಕ್ಯಾಶುಯಲ್ಲಾಗಿ ಬರೆದಿದ್ದಾರೆ. ಪ್ರತಿಭಾ ಅವರು ಈ ಹಿಂದೆ ಬರೆದ ಪದ್ಯಗಳನ್ನು ಮರೆತು ಬರೆದಂತೆ ಈ ಸಂಕಲನ ಬರೆದಿದ್ದಾರೆ. ಮಾಸ್‌ಗೆ ರೀಚಾಗೋ ಥರ ಬರೆದಿದ್ದಾರೆ. 'ಮುದುಕಿಯರಿಗಿದು ಕಾಲವಲ್ಲ' ಎಂಬ ಸಂಕಲನವನ್ನು ಪ್ರಕಟಿಸಿದ (೨೦೧೨) ವರ್ಷದಲ್ಲೆ ೬೧ ಪದ್ಯಗಳ ಈ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ! ಇಲ್ಲಿನ ಯಾವ ಪದ್ಯಕ್ಕೂ ಹೆಸರಿಲ್ಲ. ಸ್ಯಾಂಪಲ್‌ಗಾಗಿ ಇಲ್ಲೊಂದು ಕವಿತೆ :

*ಯಾರೋ ಹೊಸಬನ ಜೊತೆ ಬಂದಿದ್ದಳು ಕುಸುಮ*
*ಸುಮಾರು ದಿನದಿಂದ ಪೀಡಿಸುತ್ತಿದ್ದ ಅಂತ*
*ಸಮಜಾಯಿಷಿ ಕೊಟ್ಟಳು*
*ಇಂಪ್ರೆಸ್ ಮಾಡಲು ಯತ್ನಿಸಿ ನುವ್ವಸ್ತಾವಂಟೆ*
*ನೇನೊದ್ದಂಟಾನಾ*
*ಅಂತ ಡಬಲ್ ಮೀನಿಂಗ್‌ನಲ್ಲಿ ಹೇಳಲು ಹೋಗಿ*
*ಚೀಪ್ ಆಗುತ್ತಿದ್ದ*
*ಎಲ್ಲಕ್ಕಿಂತ ಕಾಸ್ಟ್‌ಲೀದು ತರಿಸು ಅಂತ ಇಂಪ್ರೆಸ್*
*ಮಾಡಲು ನೋಡಿದ*
*ವಿನ್ಸೆಂಟ್ ಬಂದು ಕಣ್ಣು ಮಿಟುಕಿಸಿ ಜಾಕ್‌ಪಾಟಾ*
*ಎಂದು ರೇಗಿಸಿದ*
*ಅವಳು ಕಿರುಬೆರಳು ತೋರಿಸಿದಳು*
*ಅವನು ಛೇ ಪಾಪಾ ಅಂದ*

ಇನ್‌ಸ್ಟಂಟ್ ಕಾಫಿ ಇದ್ದ ಹಾಗೆ ಈ ಪ್ರತಿಕ್ರಿಯೆ ಕೂಡ ಇನ್‌ಸ್ಟಂಟ್. ಇಲ್ಲಿರುವ ಕವಿತೆಗಳು ಎಲ್ಲವೂ ನಗರದ ಕವಿತೆಗಳು ಎಂದು ಕವಿ ಪ್ರತಿಭಾ ಹೇಳುತ್ತಾರೆ. ಮನುಷ್ಯರ ಮೈಮನಸ್ಸನ್ನು ಹೊರತುಪಡಿಸಿದ ನಗರ ಎಲ್ಲಿರಲು ಸಾಧ್ಯ? ಖಂಡಿತಾ ಇವು ಅಂತಹ ನಗರದ ಕವಿತೆಗಳು. ಮೆಟ್ರೋಸೆಕ್ಸುಯಲ್ ಜನರ ಕವಿತೆಗಳು. ಜೀವನದಲ್ಲಿನ ಕಾಮ, ಪ್ರೇಮದ ಭಾಗವನ್ನೆ ಕತ್ತರಿಸಿ ಕತ್ತರಿಸಿ ಕಾವ್ಯರೂಪದಲ್ಲಿ ಹೇಳಿ 'ಕಾಮವೇ ಜೀವನ, ಜೀವನವೇ ಕಾಮ' ಎಂಬ ಅನಿಸಿಕೆ ಹುಟ್ಟಿಸುವ ಕವಿತೆಗಳಿವು. ಕೆಲವರಿಗೆ ಕಾಮ, ಪ್ರೇಮದ ಬಗ್ಗೆ ಲಜ್ಜೆಯಿಲ್ಲದೆ ನೇರ ಮತ್ತು ಸರಳವಾಗಿ ಬರೆದರೆ ಅದನ್ನು ಓದಿದಾಗ ಕೆಲವೊಮ್ಮೆ ಅಸಹ್ಯ ಅನ್ನಿಸಬಹುದು. ಅಯ್ಯೋ ಈ ಜೀವನ ಇಷ್ಟು ಅಸಹ್ಯವಾ ಅನ್ನಿಸಬಹುದು. ಜೀವನದಲ್ಲಿ ಕಾಮ ಪ್ರೇಮ ಎಲ್ಲ ಸಹಜ ಅಲ್ಲವೆ? ಸಹಜವಾದ ಸತ್ಯವಲ್ಲವೆ? ಸಹಜವಾದ ಸತ್ಯವನ್ನೆ ಸಜಹವಾಗಿ ಬರೆಯಲು, ಓದಲು ಅಸಹ್ಯ ಅಂದುಕೊಂಡರೆ! ಹಾಗೆ ಅಂದುಕೊಳ್ಳುವವರು ಅಂದುಕೊಳ್ಳಲಿ. ಸತ್ಯ ಅಸಹ್ಯವಾಗಿಯೂ ಇರಬಹುದಲ್ಲವೆ? ಅವರವರ ಭಾವಕ್ಕೆ ...

ಇಲ್ಲಿ ಹೆಣ್ಣು ಗಂಡು ಎರಡೆ ಸೇರಬೇಕೆಂದಿಲ್ಲ; ಗಂಡು ಗಂಡೂ, ಹೆಣ್ಣು ಹೆಣ್ಣೂ, ಹೆಣ್ಣು–ಗಂಡು–ಗಂಡೆಣ್ಣೂ... ಹೀಗೆ ಯಾವ ಕೂಟ ಬೇಕಾದರೂ ಕೂಡಬಹುದು. ಹಾಗೆಯೆ ಅಗಲಲೂಬಹುದು. ಹೆಣ್ತನದೊಳಗೆ ಗಂಡ್ತನವೂ ಗಂಡ್ತನದೊಳಗೆ ಹೆಣ್ತನವೂ ಬೆರೆಯಬಹುದು. ಮಾಡದೆಯೆ ಮಾಡಿದೆನೆಂದು ಹೇಳುವ, ಮಾಡಿಯೂ ಮಾಡಿಲ್ಲದಂತೆ ಇರುವ, ಮಾಡಿದೆನೆಂದು ರಾಜಾರೋಷ ಹೇಳುವ ಸ್ವಭಾವಗಳು ಇಲ್ಲಿ ಬಂದು ಹೋಗುತ್ತ ಇರುತ್ತವೆ. ಎಲ್ಲ ನಡೆದೂ ಏನೂ ನಡೆದಿಲ್ಲದ ಹಾಗೆ ನಟಿಸುವ, ಮಾಡಿದವನೆ ಎದುರು ಬಂದಾಗ ಅಪರಿಚಿತನಂತೆ ಪರಿಚಯಿಸಿಕೊಳ್ಳುವ ವ್ಯಕ್ತಿತ್ವಗಳೂ ಇಲ್ಲುಂಟು. ಅಂತಹ ಅನಿವಾರ್ಯತೆಗಳೂ ಜೀವನದಲ್ಲಿ ಎಷ್ಟೋ ವೇಳೆ ಏರ್ಪಡುತ್ತವೆ ಕೂಡ. ಈ ಲೋಕ ಇರುವುದೇ ಹೀಗೆ. ಇಂತಹ ಹತ್ತಾರು ಚಿಂತನೆಯ ನಿರೂಪಣೆಗಳು ಇಲ್ಲಿವೆ. 'ಅರೆ ಇದು ನನ್ನ ಜೀವನದಲ್ಲು ನಡೆದಿದೆ. ಇವಳು ಸತ್ಯ ಹೇಳ್ತಿದ್ದಾಳೆ' ಎಂದು ಇಲ್ಲಿನ ಕವನ ಓದಿದ ಅನೇಕ ಹೆಣ್ಣುಗಳಿಗೆ ಅನ್ನಿಸಬಹುದು. ಅದೇ ಇಲ್ಲಿನ ಸಾಮಾಜಿಕ ವಾಸ್ತವ. ಇಲ್ಲಿ ಪ್ರೀತಿ ಮತ್ತು ವ್ಯಭಿಚಾರಗಳ ನಡುವಿನ ಗೆರೆಗಳು ಅಳಿಸಿಹೋಗಿವೆ. ನೀತಿ ಮತ್ತು ಅನೀತಿ ನಡುವಿನ ಗೆರೆಗಳೂ ಅಳಿಸಿಹೋಗಿವೆ. ಅಯ್ಯೋ ಈ ಲೈಫು ಹೀಗೆ ಎಲ್ಲ ಟಚ್ ಅಂಡ್ ಗೋ ರಿಲೇಶನ್ ಅಷ್ಟೆ ಆಗಿಬಿಟ್ಟಿತಾ ಅಂತ

**ಡಾ॥ ರಾಮಲಿಂಗಪ್ಪ ಟಿ. ಬೇಗೂರು**

ಆತಂಕವನ್ನು ಇಲ್ಲಿನ ಕವನಗಳು ಹುಟ್ಟಿಸುತ್ತವೆ. ಪ್ರಾಚೀನ ಭಾರತ ಜೀವನ ಹೊರಟುಹೋಗುತ್ತ ಇದೆ; ಆಧುನಿಕತೆ ಕಾಲಿಡುತ್ತ ಇದೆ ಎಂಬ ಆತಂಕ, ಆನಂದ ಎರಡನ್ನೂ ಹುಟ್ಟಿಸುವ ಜೊತೆಗೆ ನಾವು ಕಲ್ಪಿಸಿಕೊಂಡ ಪ್ರಾಚೀನ ಪರಂಪರೆ ಇದ್ದದ್ದೇ ಹೀಗೆ, ಇದನ್ನೆಲ್ಲ ಹೇಳದೆ ಬಚ್ಚಿಡಲಾಗಿತ್ತು, ಅಷ್ಟೆ ಎಂಬ ಜ್ಞಾನೋದಯವನ್ನೂ ಇಲ್ಲಿನ ಕೆಲವು ಕವಿತೆಗಳು ನೀಡುತ್ತವೆ.

ಸಂಬಂಧಗಳು ಅತಿ ವೇಗವಾಗಿ ಏರ್ಪಡುತ್ತವೆ ಮತ್ತು ಹಾಗೆಯೇ ಕಡಿದುಹೋಗುತ್ತವೆ. ಪ್ರೀತಿ ಎಂಬುದು ಶಾಶ್ವತ ಅಲ್ಲ, ಸಂಬಂಧಗಳೂ ಶಾಶ್ವತ ಅಲ್ಲ. ಎಲ್ಲವೂ ನಿರಂತರ ಬದಲುಗೊಳ್ಳುತ್ತ ಇರುತ್ತವೆ ಎಂಬ ತತ್ವಜ್ಞಾನವನ್ನೂ ಇಲ್ಲಿನ ಕವಿತೆಗಳು ಮಂಡಿಸುತ್ತವೆ. ಇಲ್ಲಿ ರವಿ ಬೆಳಗೆರೆ, ವಿವೇಕ, ವಿನ್ಸೆಂಟ್, ಕುಸುಮ, ಚಲಪತಿ, ಸುಮತಿ, ಉಷಾ, ರಾಘು ಹೀಗೆ ಹಲವಾರು ಪಾತ್ರಗಳು ಬರುತ್ತವೆ. ಇವೆಲ್ಲ ವರ್ತಮಾನದ ಪಾತ್ರಗಳೂ ಹೌದು, ಭವಿಷ್ಯದ ಪಾತ್ರಗಳೂ ಹೌದು. ನಮ್ಮ ಚರಿತ್ರೆಯ ಪಾತ್ರಗಳೂ ಹೌದು. ಇಲ್ಲಿ ನಮ್ಮ ಸಾಮಾಜಿಕ ಚರಿತ್ರೆಯ ತುಣುಕೊಂದು ಅಕ್ಷರಗಳಲ್ಲಿ ಬಿದ್ದುಕೊಂಡಿದೆ. ಸಮಾಜ ಚರಿತ್ರೆಯನ್ನು ಕಾವ್ಯದಲ್ಲಿ ಬರೆಯುವ, ಆತ್ಮಚರಿತ್ರೆಯನ್ನು ಕಾವ್ಯದಲ್ಲಿ ಬರೆಯುವ ಒಂದು ಹೊಸ ಕ್ರಮವಿದು.

ಇನ್ನೊಂದು ವಿಷಯ; ಇಲ್ಲಿನ ಪದ್ಯಗಳನ್ನು ಖಾಸಗಿಯಾಗಿ ಓದಿಕೊಂಡರೆ ಮಜ ಕೊಡ್ತವೆ. ಇದು ಪಠಣ ಅಥವಾ ಪಾರಾಯಣ ಕಾವ್ಯ ಅಲ್ಲ. ಸಾರ್ವಜನಿಕ ವಾಚನ ಮತ್ತು ಖಾಸಗಿ ವಾಚನ ಎಂಬ ಎರಡು ತೆರನ ವಾಚನಗಳು ಕವನಕ್ಕೆ ಇರುತ್ತವೆ; ಅವು ಭಿನ್ನವಾಗಿಯೆ ಕೆಲಸ ಮಾಡುತ್ತವೆ ಎಂಬುದು ಇಲ್ಲಿನ ಕವನಗಳಿಂದ ತಿಳಿಯುತ್ತದೆ. "ಬ್ರಾಹ್ಮಣರ ಹುಡುಗಿ ಅಂತ ಕೃಷ್ಣ ನನ್ನ ಕಡೆ ನೋಡಿದ್ದ ಅಂದಿದ್ದಕ್ಕೆ ಅವನು ಮಾಡೇಬಿಟ್ಟಿದ್ದ ಅಂತ ಆಡಿಕೊಂಡಿದ್ದರು; ... ಶೂದ್ರರ ಹುಡುಗ ಅಂತ ಅವನನ್ನು ಹಚ್ಚಿಕೊಂಡಿದ್ದೆ ಅಂತ ಎಲ್ಲರೂ ಗುಸುಗುಸು ಮಾಡಿದಾಗ ಒಂದು ಕ್ಷಣ ಮಾಡೇಬಿಟ್ಟರೆ ಹೇಗೆ ಅಂತಲೂ ಅನ್ನಿಸಿತ್ತು..." (ಪು. ೧೮) ಹೀಗೆ ಕವನ ಬರೆಯುವ ಸ್ಥಾಪಿತ ಕ್ರಮ ಮಾತ್ರವಲ್ಲ, ವಸ್ತುವಿಚಾರ ಕೂಡ ಇಲ್ಲಿ ಉಲ್ಲಂಘನೆಯಾಗಿದೆ. ಹಾಗೆಯೆ ಕವನದ ಹೊಸ ಬಗೆಯೊಂದು ಇಲ್ಲಿ ರೂಪುಗೊಂಡಿದೆ. ಖಾಸಗಿ ಅನ್ನಿಸುವ ನಿರೂಪಣೆಗಳಿವು. ಕವಿತೆಗೆ ಇರುವ ಲಾಲಿತ್ಯ, ಸಂಕೀರ್ಣತೆ, ರೂಪಕ ಸಾಧ್ಯತೆ, ಅರ್ಥದ ಅಮೂರ್ತತೆ, ಎಲಿಟಿಸ್ಟ್‌ತನ ಇತ್ಯಾದಿಗಳನ್ನು ಇವು ಕಳೆದುಹಾಕಿವೆ. ದೈನಂದಿನ ಲಯಗಳನ್ನೆ ಹೇಗೆ ಕವಿತೆ ಮಾಡಬಹುದು ಎಂಬುದಕ್ಕೆ ಇವು ಉದಾಹರಣೆಯಂತೆ ಇವೆ. ಇಲ್ಲಿರೋ ಕವಿತೆಗತೆಗಳು ಯಾರ ಕತೆಗಳಾದ್ರೂ ಆಗಬಹುದು; ಹಾಗೆನೇ ಇಂಥ ಪದ್ಯಗಳನ್ನು ಯಾರು ಬೇಕಾದ್ರೂ ಬರೆಯಬಹುದು ಕೂಡ. ಅಯ್, ಹಿಂಗ್ ಕವನ ಬರೆಯೋಕು ಒಂದ್ ಧೈರ್ಯ ಬೇಕ್ ಬಿಡ್ರಿ.

**ಡಾ॥ ರಾಮಲಿಂಗಪ್ಪ ಟಿ. ಬೇಗೂರು**
'ಗುಣ', ನಂ. ೩೯, ೨ನೇ ಅಡ್ಡರಸ್ತೆ, ೧೦ನೇ ಮುಖ್ಯರಸ್ತೆ
ಉಲ್ಲಾಳ ಮುಖ್ಯರಸ್ತೆ, ಮುನೇಶ್ವರ ಲೇಔಟ್
ಬೆಂಗಳೂರು – ೫೬೦ ೦೫೬

## ಸಾದರ ಸ್ವೀಕಾರ

**ಮೌಢ್ಯ ವಿರೋಧಿ ಹೋರಾಟಗಾರ ಎಚ್ಚೆನ್**
*ಪ್ರೊ॥ ಬಿ. ಗಂಗಾಧರಮೂರ್ತಿ*
**ಪುಟ : ೧೨೮ ಬೆಲೆ : ರೂ. ೯೦**

**ಜ್ಯೋತಿಬಾ ಫುಲೆ ಮತ್ತು ರೈತ ಚಳುವಳಿ**
*ಮೂಲ : ಡಾ॥ ಅಶೋಕ ಚೌಸಾಳಕರ*
*ಕನ್ನಡಕ್ಕೆ : ಡಾ॥ ಜೆ. ಪಿ. ದೊಡಮನಿ*
**ಪುಟ : xxiv + ೭೨ = ೯೬ ಬೆಲೆ : ರೂ. ೬೦**

**ಒಳ ಮೀಸಲಾತಿ ಮುಟ್ಟಲಾರದವನ ಒಡಲಾಳ**
(ಮೀಸಲಾತಿ ವರ್ಗೀಕರಣದ ಲೇಖನಗಳು)
*ಸಂ. : ಶ್ರೀನಿವಾಸ ಮರಡ್ಡಿ, ವೆಂಕಟೇಶ ಬೇವಿನಬೆಂಚಿ, ನರಸಿಂಹ ಗುಂಜಳ್ಳಿ, ರಮೇಶ ಅರೋಲಿ*
**ಪುಟ : ೧೨೮ ಬೆಲೆ : ರೂ. ೧೦೦**

**ಛತ್ರಪತಿ ಶಾಹೂ–ಜನರ ನೋವಿಗೆ ಮಿಡಿದ ಪ್ರಾಣಮಿತ್ರ**
*ಡಾ॥ ಎಚ್. ಎಸ್. ಅನುಪಮಾ*
**ಪುಟ : ೧೫೨ ಬೆಲೆ : ರೂ. ೧೧೦**

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ–೫೮೨೧೦೧

**ಬೆತ್ತಲೆ** (ಕವನ ಸಂಕಲನ) ಮುನಿಯಪ್ಪ ಹುಬ್ಬಳ್ಳಿ
**ಪುಟ : xvi + ೫೦ = ೬೬ ಬೆಲೆ : ರೂ. ೬೫**
**'ಮಹಾಮನೆ' ಪ್ರಕಾಶನ,** ಯಲಬುರ್ಗಾ–೫೮೩೨೩೬, ಕೊಪ್ಪಳ ಜಿಲ್ಲೆ

**ಕರ್ನಾಟಕದಲ್ಲಿ ಕುಮಾರರಾಮನ ಹಬ್ಬ ಹಾಗೂ ಜಾತ್ರೆಗಳು**
*ಡಾ॥ ಆರ್. ಬಿ. ದಿವಾಕರ್, ಡಾ॥ ಆರ್. ಬಿ.* ಕುಮಾರ್
**ಪುಟ : xii + ೧೨೦ ಬೆಲೆ : ರೂ. ೧೦೦**
**ಗಂಗೋತ್ರಿ ಪ್ರಕಾಶನ,** ರಾಮ ಸಾಗರ ೫೮೩೧೩೨, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ

**ಬಾಳಿನ ರಾಗ** (ಕನ್ನಡ ಗಜಲ್ ಸಂಕಲನ)
*ಕವಿ – ಪ್ರಕಾಶಸಿಂಗ್ ರಜಪೂತ*
**ಪುಟ : vi + ೫೪=೬೦ ಬೆಲೆ : ರೂ. ೫೧**
**ಶಶಿ ಪ್ರಕಾಶನ,** ಶಶಿ ವಿಹಾರ ಕಾಂಪ್ಲೆಕ್ಸ್, ಡಾ॥ ಮುಳವಾಡ ದವಾಖಾನೆ ಎದುರಿಗೆ, ಇಂಡಿ ರಸ್ತೆ, ವಿಜಾಪುರ – ೫೮೬೧೦೧

**ಬೆತ್ತಲಾದ ಚಂದ್ರ** *ಪ್ರೊ॥ ಎಚ್. ಟಿ. ಪೋತೆ*
**ಪುಟ : xii + ೭೦ = ೮೨ ಬೆಲೆ : ರೂ. ೮೦**
**ಕನ್ನಡ ನಾಡು ಲೇಖಕರ ಮತ್ತು ಓದುಗರ ಸಹಕಾರ ಸಂಘ ನಿಯಮಿತ,** *ಜಿ–೨, ವಿ.ವಿ. ಹಾಸ್ಟೆಲ್ ಕಾಂಪ್ಲೆಕ್ಸ್, ಸೇಡಂ ರಸ್ತೆ, ಗುಲಬರ್ಗಾ–೫೮೫೧೦೫*

**ಇರುಳು ಹಗಲಾಗುವುದರೊಳಗೆ**
*ಹಿಂದಿ ಮೂಲ : ಶಂಕರ ಶೇಷ (ಆಧೀರಾತ ಕೆ. ಬಾದ)*
*ಕನ್ನಡಾನುವಾದ : ಪ್ರಭಾಕರ ಸಾತಖೇಡ*
**ಪುಟ : x + ೫೬=೬೬ ಬೆಲೆ : ರೂ. ೫೦**
**ಪ್ರಭಾಕರ ಸಾತಖೇಡ,** ರಂಗಪ್ರೇಮ, ಬನಶಂಕರಿ ಬಡಾವಣೆ, ಬ್ರಹ್ಮಪುರ, ಗುಲಬರ್ಗಾ – ೫೮೫೧೦೩

**ಮರವನಪ್ಪಿದ ಬಳ್ಳಿ** *ಜಿ. ಕೆ. ರವೀಂದ್ರಕುಮಾರ್*
**ಪುಟ : ೧೧೮ ಬೆಲೆ : ರೂ. ೭೫**
**ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ,** ಗೋಕುಲಂ ಮೂರನೇ ಹಂತ, ಮೈಸೂರು – ೫೭೦೦೦೨

**ನಡೆ ನೀ ಮುಂದೆ...** (ಕನ್ನಡ ಕವನ ಸಂಕಲನ)
*ಶಾರದಾ ಎ. ಅಂಚನ್*
**ಪುಟ : xiv + ೮೧ ಬೆಲೆ : ರೂ. ೧೨೫**
**ಪೂಜ ಪ್ರಕಾಶನ,** ಸಿ/೧, ಜಲಕೀರ್ತಿ ಸಿ.ಎಚ್.ಎಸ್.ಲಿ. ಎಲ್.ಟಿ.ರೋಡ್, ಜಯರಾಜ ನಗರ, ಬೊರಿವಿಲಿ(ಪ) ಮುಂಬಯಿ – ೪೦೦೦೯೧

**ಪಾರಿಜಾತ** (ಹನಿಗವನಗಳು) *ರವಿಶಂಕರ ಒಡ್ಡಂಬೆಟ್ಟು*
**ಪುಟ : ೧೨೦ ಬೆಲೆ : ರೂ. ೭೫**
**ಆಕೃತಿ ಆಶಯ ಪಬ್ಲಿಕೇಷನ್ಸ್,** ಲೈಟ್ ಹೌಸ್ ಹಿಲ್ ರೋಡ್, ಮಂಗಳೂರು – ೫೭೫೦೦೧

**ನೆನಪು ನೆನಕೆಗಳ ಯಾನ**(ವ್ಯಕ್ತಿ ಚಿತ್ರಗಳು)
*ಚಂದ್ರಕಲಾ ನಂದಾವರ*
**ಪುಟ : xii + ೧೧೬ ಬೆಲೆ : ರೂ. ೮೦**
**ಹೇಮಾಂಶು ಪ್ರಕಾಶನ,** ದೃಶ್ಯ, ಗೊಲ್ಲಚ್ಚಿಲ್, ದೇರೆಬೈಲ್, ಮಂಗಳೂರು.

**ಎದೆಯ ಒಕ್ಕಲಿಗ**
(ಅನುಭಾವ ಉಪನ್ಯಾಸ ಮಾಲಿಕೆ–೨೮)
*ಚನ್ನಪ್ಪ ಅಂಗಡಿ*
**ಪುಟ : xviii + ೧೦೬ ಬೆಲೆ : ರೂ. ೧೦೦**
**ಶ್ರೀ ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ,** ಸುಕ್ಷೇತ್ರ ಹಾರಕೂಡ – ೫೮೫೪೩೭, ಬಸವಕಲ್ಯಾಣ ತಾಲೂಕು, ಬೀದರ ಜಿಲ್ಲೆ

**ಕೃಷ್ಣಚಂದರ ಕಥೆಗಳು**
*ಕನ್ನಡಕ್ಕೆ : ಡಾ॥ ಪಂಚಾಕ್ಷರಿ ಹಿರೇಮಠ*
**ಪುಟ : ೯೬ ಬೆಲೆ : ರೂ. ೬೦**

**ದೇವರಿದ್ದಾನೆ ! ಎಚ್ಚರಿಕೆ !!** (ಕಥಾಸಂಕಲನ)
*ಪೂರ್ಣೇಶ್ ಮತ್ತಾವರ*
**ಪುಟ : ೮೪ ಬೆಲೆ : ರೂ. ೬೦**

**ಚೌತಿಯ ಗುಗ್ಗರಿ** ಎಸ್. ಸಾಯಿಲಕ್ಷ್ಮಿ
**ಪುಟ : ೮೦ ಬೆಲೆ : ರೂ. ೫೫**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು–೫೬೦ ೦೦೧.

**ಬಿರುಗಾಳಿಗಳೇ ಶಾಂತರಾಗಿರಿ**
*ಸಂ. ಹಾಗೂ ಅನುವಾದ ಪ್ರೊ॥ ಕಾಶೀನಾಥ ಅಂಬಲಗೆ ಹಿಂದಿ : ಕುಂವರ್ ಬೇಚೈನ್*
**ಪುಟ : ೬೪ ಬೆಲೆ : ರೂ. ೫೦**

**ರಂಗು ರಂಗಿನ ಗಜ಼ಲ್‌ಗಳು**
*ಸಂ. ಹಾಗೂ ಅನುವಾದ ಪ್ರೊ॥ ಕಾಶೀನಾಥ ಅಂಬಲಗೆ*
**ಪುಟ : xii + ೫೬=೬೮ ಬೆಲೆ : ರೂ. ೫೦**

**ಸುಮಿತ್ರಾನಂದನ ಪಂತ ಅವರ ಕವಿತೆಗಳು**
*ಸಂ. ಹಾಗೂ ಅನುವಾದ ಪ್ರೊ॥ ಕಾಶೀನಾಥ ಅಂಬಲಗೆ*
**ಪುಟ : ೮೮ ಬೆಲೆ : ರೂ. ೭೦**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಪ್ರಗತಿ ಪ್ರಕಾಶನ,** ಜಯನಗರ, ವಿಶ್ವವಿದ್ಯಾಲಯ ರಸ್ತೆ, ಕಲಬುರಗಿ–೫೮೫೧೦೫. ಕರ್ನಾಟಕ

# ಅನುಭವವೆಂಬುದು
# ತತ್ವಪದಕಾರರ ಅನುಭಾವದ ನುಡಿ

**ಅಂತರಂಗದ ಅನುಭವ ತತ್ವಪದದ ಅನುಭಾವವನ್ನು ಬಹಿರಂಗದ ಕೈಯಲ್ಲಿ ಹಿಡಿದು ನೋಡಿ, ತಿಳಿದು ನೋಡಿ.**

**ಪ್ರೊ॥ ಅಪ್ಪಗೆರೆ ತಿಮ್ಮರಾಜು**

**ಟಿ.** ಎಸ್. ಎಲಿಯಟ್ ಹೇಳುವಂತೆ, ಜನಭಾಷೆಯಲ್ಲಿ ಉಸಿರಾಡುವಂತೆ ಪ್ರತಿಯಾಗಿ ತತ್ವಪದಗಳು ಜೀವಶಕ್ತಿಯನ್ನೊದಗಿಸುತ್ತವೆ. ಅವು ಪ್ರಜ್ಞೆಯ ಪರಾಕಾಷ್ಠೆಯನ್ನು, ಸಂವೇದನೆಯನ್ನು ಹೇಳುತ್ತವೆ. ಹಾಗೆಯೇ ಈ ತತ್ವಪದಗಳು ಅರಿವಿನ ಪಯಣದ ಕಡೆ ತಮ್ಮ ದಾಪುಗಾಲುಗಳನ್ನಿಟ್ಟು 'ನೆಮ್ಮದಿ ಎನ್ನುವುದು ಬಹಿರ್ಭೂತ ವಸ್ತುವಲ್ಲ' ಎನ್ನುವ ಮಾತನ್ನು ತತ್ವಪದಕಾರರ ತತ್ವಪದದ ತಾತ್ವಿಕತೆಯನ್ನು ಅಭಿವ್ಯಕ್ತಿಸುತ್ತದೆ. ತತ್ವಪದಕಾರರು ಕಾಣಿಸಿಕೊಂಡಿದ್ದೆ ಅಥವಾ ಇವರ ಪ್ರಾರಂಭವೆ ೧೮ನೇ ಶತಮಾನದ ಆರಂಭದಲ್ಲಿ. ರಾಜರ ವಿರುದ್ಧ ಮತ್ತು ಸಮಾನತೆಯ ಸಂಕೇತವಾಗಿ ಬಂದ ಸಾಧು, ಸಂತ, ಸೂಫಿಗಳು ಇದರ ರೂವಾರಿಗಳು.

ತತ್ವಪದಗಳು ಮಾನವ ಸುಖ–ದುಃಖಗಳ ಜೊತೆಗೆ ಮಾನವ ಸಂಬಂಧಗಳ ಮನಸ್ಸನ್ನು ಕಟ್ಟುವ ಬದುಕಿನೊಡನೆ ಬೆಸೆದುಕೊಂಡಿರುವ ಅಂತರಾತ್ಮದ ಅಂತರಂಗವನ್ನು ಶುದ್ಧಿಗೊಳಿಸುವ ದಾರಿದೀಪವಾಗಿವೆ. ಈ ತತ್ವಪದಗಳು ನಮ್ಮನ್ನು ಗಂಭೀರ ಆಲೋಚನೆಗೆ ತೊಡಗಿಸುತ್ತವೆ. ಇವುಗಳಲ್ಲಿ ಮನರಂಜನೆ ಗೌಣ, ತಾತ್ವಿಕತೆ ಹೆಚ್ಚು. ಇವುಗಳ ಆದರ್ಶ 'ನಾನು' ಎಂಬುದನ್ನು ಅಳಿಸಿ 'ನಾವು' ಎಂಬುವ ಚಿಹ್ನೆಯನ್ನು ಮುದ್ರಿಸುವಂಥದ್ದು. ಇವು ಏಕನಾದ ಮತ್ತು ಏಕಾಂತತೆಯನ್ನು ಹೇಳುತ್ತವೆ. ಕಣ್ಣೊಳಗೆ ಕಣ್ಣಿಟ್ಟು ಕಾಣುವಂತಹ ಸಮರ್ಥ ಸಂತರು ಅನುಭಾವಿ ಕವಿಗಳು. ಅವರ ಭವಿಷ್ಯದ ನಡೆನುಡಿಯ ನುಡಿಗಳು ಅನಂತಕಾಲಕ್ಕೂ ಸಲ್ಲುವಂಥವು.

'ಆಡಬಾರದು ಬಯಲು, ನೋಡಬಾರದು ಬಯಲು, ನುಡಿಯಬಾರದ ಬಯಲು, ಹಿಡಿಯ ಬಾರದ ಬಯಲು. ಒಡಲಿಲ್ಲದ ಬಯಲೊಳಗಡಿಗಿಪ್ಪ ಭೇದವ ಅರಿಯುತ ತ್ರಾಣ ಪಡೆಯುವಂತಾಗಬೇಕು' ಎನ್ನುತ್ತಾರೆ ತತ್ವಪದಕಾರರು. 'ಅನುಭಾವವೆಂಬುದು ನೆಲದ ಮರೆಯ ವಿಧಾನ ಕಾಣಿಭೋ' ಎಂದಿದ್ದಾರೆ. 'ಬೊಮ್ಮವನು ಅರಿದಿಹರೇ ಸುಮ್ಮನಿರಬೇಕು' ಎನ್ನುತ್ತಾನೆ ಸರ್ವಜ್ಞ. 'ಅನುಭಾವವೆಂಬುದು ಮೂಕ ಮೆದ್ದ ಬೆಲ್ಲ', 'ಅನುಭಾವವೆಂಬುವುದು ನಿಜನಿವಾಸದಲ್ಲಿರುವುದು, ಅನುಭಾವವೆಂಬುವುದು ತಾನಾರೆಂದರಿಯುವುದು – ಹೀಗೆ ಅನುಭಾವದ ನುಡಿಗೆ ಅನಂತತೆಯ ಅನೇಕ ಅರ್ಥಗಳನ್ನು ಕೊಟ್ಟಿದ್ದಾರೆ.'

ತತ್ವಪದಗಳು ದೂರದೃಷ್ಟಿಯ ಮೌನಾರ್ಥದಲ್ಲಿ ಅನೇಕಾರ್ಥಗಳನ್ನು ಹೇಳುತ್ತವೆ. ಅನುಭಾವಿತರಲ್ಲಿ ಒಂದೇ ನಾಣ್ಯದ ಎರಡು ಮುಖಗಳಂತೆ ಕಾಣುವುದು ದೂರದೃಷ್ಟಿ ಮತ್ತು ಮೌನ. ಇವೆರಡೂ ಒಂದು ಪಕ್ಷಿಯ ಎರಡು ರೆಕ್ಕೆಗಳಿದ್ದಂತೆ. ಒಬ್ಬೊಬ್ಬ ಅನುಭಾವದ ವ್ಯಕ್ತಿಯೂ ತನ್ನ ಬದುಕಿಗೆ ನೆರವು ನೀಡಿಕೊಂಡು ಬೆಳೆದಿದ್ದಾನೆ. ಕೆಲವು ಸಂತರಲ್ಲಿ ಮೌನ ಜಾಸ್ತಿ, ಕೆಲವರಲ್ಲಿ ಮಾತು ಜಾಸ್ತಿ. ಸಂತರ ಮನೋಭಾವನೆಗಳು 'ಮೌನ'. ಆ ಮೌನವೇ ಹೆಚ್ಚು ಮಾತನಾಡುತ್ತಿರುತ್ತದೆ. ಮೌನವೇ ಮಾತುಗಳನ್ನು ಚೆಲ್ಲುತ್ತಿರುತ್ತದೆ.

ತತ್ವಪದಕಾರನಲ್ಲಿ ಅನುಭಾವಿಯ ನಾಣ್ಣುಡಿಗಳ ಬಳಕೆ ಒಡಪು, ಮಾತಿನ ಸೊಗಸು, ದೇಶಿ ನುಡಿಗಳ ಜಾಣ್ಮೆ ಎಲ್ಲವೂ ಕಾಣಿಸುತ್ತಿರುತ್ತವೆ. ತನ್ನ ಅನುಭವಕ್ಕೆ ಬಾರದ ಯಾವ ಒಂದು ಮಾತನ್ನೂ ಹೇಳದ ಪ್ರಾಮಾಣಿಕ ನುಡಿತತ್ವಗಳೂ ಈತನ ಮೂಸೆಯಲ್ಲಿ ಕರಗಬೇಕು. ಬದುಕಿನೊಂದಿಗಿನ ಅನುಸಂಧಾನಗಳು, ಈತನಿಗೆ ಆಧ್ಯಾತ್ಮಿಕ ಎತ್ತರವನ್ನು ನೀಡಿರುವಂತೆ ಈತನ ಲೋಕಸಂಚಾರವೂ ಜನಜೀವನದ ಗಾಢವಾದ ಅರಿವನ್ನು ಕೊಡಮಾಡಿದೆ. ತನ್ನ ಸಂಚಾರ ಕಾಲದಲ್ಲಿ ಒಳ್ಳೆಯದನ್ನು ಕಂಡಿದ್ದಾನೆ. ಕೆಟ್ಟದ್ದನ್ನು ಕಂಡಿದ್ದಾನೆ. ಅವರವರ ಗುಣ ದೋಷಗಳನ್ನು ಕಾಣಿಸಿ ಅವನ್ನು ಅವರ ಮುಖದ ಮೇಲೆಯೇ ಎಸೆದು ಮುಂದೆ ಸಾಗಿದ್ದಕ್ಕೆ ಅನೇಕ ನಿದರ್ಶನಗಳಿವೆ. ಅನುಭವವನ್ನು ಹೇಳುವಲ್ಲಿ ಸಂತ ಉಪಮೆ ನೀಡುವ ದೃಷ್ಟಾಂತಗಳು ಜನಪದ ಬದುಕಿನಿಂದ ಎತ್ತಿಕೊಂಡವುಗಳಾಗಿರುವುದರಿಂದ ಅವು ತುಂಬ ತತ್ವ ಆಧಾರಿತ ಕೌಶಲತೆಯನ್ನು ಸೂಚಿಸಿವೆ. 'ಕಾಲು ಇಲ್ಲದ ಹೆಳವನೊಬ್ಬ ಮೇಲು ಪರ್ವತಗಿರಿಯನೇರಿ ಬಾಲೆಯೋರ್ವಳ ಲಗ್ನವಾದನೋ ಮೂಲಭವದ ಬೇರ ಕಿತ್ಯಾನೋ' ಎಂಬ ಈ ತತ್ವಪದದ ಅರ್ಥ ಮತ್ತು ಭಾವ ಕಾಲಿಲ್ಲದ ಹೆಳವನು ಮೇಲು ಪರ್ವತ ಏರಿದ ಎನ್ನುವುದು ಮುಕ್ತ ಭಕ್ತಿಯಿಂದ ಬಾಗಿ ಜ್ಞಾನದ ಐಕ್ಯ ಶಿಖರವನ್ನು ಹತ್ತುವುದು ಎಂದರ್ಥ. ಲಗ್ನವಾದನು ಎಂಬುವುದರ ಒಳಮರ್ಮದ ಅರ್ಥ ಹೇಳುವುದೇ ಆದರೆ ಮುಕ್ತಿ ಎಂಬ ಕನ್ಯೆ. ಹೀಗೆ ದೂರದೃಷ್ಟಿಯ ಮೌನಾರ್ಥದಲ್ಲಿ ಅನೇಕಾರ್ಥಗಳನ್ನು ಹೇಳುತ್ತವೆ ತತ್ವಪದಗಳು. ಮಹಾನ್ ಶಕ್ತಿ ಹೊಂದಿದ್ದವರು ನಮ್ಮ ಸಂತರು, ತತ್ವಪದಕಾರರು. ಜ್ಞಾನಿ ಮತ್ತು ಅಜ್ಞಾನವನ್ನು ಒಂದು ತಾತ್ವಿಕತೆಯ ಹಿನ್ನೆಲೆಯಲ್ಲಿ ಜ್ಞಾನವನ್ನು ಬಣ್ಣಿಸಬಲ್ಲ, ಅಹಂಕಾರ,

'ಮಾತೆಂಬುದು ಜ್ಯೋತಿರ್ಲಿಂಗ' ಎಂದರು ಶರಣರು. ಇಂದು ಮಾತುಗಳು ಬರೀ ಶಬ್ದದ ಸೂತಕವಷ್ಟೆ. 'ಮನುಷ್ಯ ಜಾತಿ ತಾನೊಂದೆ ವಲಂ' ಎಂದನು ಕವಿ ಪಂಪ. ಗೊತ್ತು ಗುರಿಯಿಲ್ಲದ ಕ್ಷಣಿಕ ಸುಖ ಲಾಭಗಳ ಬೆನ್ನ ಹತ್ತಿ ಸಾಗಿದೆ ಜನಾಂಗ. ಏನು ? ಎತ್ತ ? ಎನ್ನುವುದರ ಜ್ಞಾನ ಶೂನ್ಯ, ನೆನ್ನೆಗಳ ನಾಳೆಗಳ ಚರಿತ್ರೆಗೆ ದಾರಿ ಎಂಬ ಅರಿವು ನಮಗಿರುವುದಾದರೆ ಕ್ಷಣಿಕ ಬದುಕಿಗೆ ಇಷ್ಟೆಲ್ಲ ಕಷ್ಟವೇಕೆ ? ಎಂಬ ಅರಿವಿನ ದಾರಿ ತೋರುವ ತತ್ವಪದಗಳ ಜ್ಞಾನದ ಬೆಳಕು ಎಲ್ಲ ಜ್ಞಾನಕ್ಕಿಂತ ಬಹಳ ಮುಖ್ಯವೆನಿಸುತ್ತದೆ.

ಅಸೂಯೆಯನ್ನು ದೂರವಿಡಬಲ್ಲ, ಸುಖದ ಬದುಕು ಕ್ಷಣಿಕ, ಅದು ಶಾಶ್ವತವಲ್ಲ ಎಂಬುದನ್ನು ನಮ್ಮ ತತ್ವಪದಕಾರರು ಬಹಳ ಚೆನ್ನಾಗಿಯೇ ಕಂಡು ಕೊಂಡಿದ್ದರು. ಆದ್ದರಿಂದ ಈ ಜಗತ್ತು ಏನಾಗ ಬಹುದು ? ಹೇಗಾಗುತ್ತದೆ ? ಹೀಗಾಗುವುದಕ್ಕೆ ಕಾರಣವೇನು ? ಇವೆಲ್ಲವನ್ನು ತಮ್ಮ ಮೌನದೊಳಗೆ ಚಿಂತನಾಲೋಕ ಆವರಿಸಿ, ಅದು ಸಮಾಜದ ಬದುಕು ಮುಂದೆ ಹೀಗಾಗುತ್ತದೆ ಎಂಬುವುದನ್ನು ತರ್ಕಿಸಿ ಹೇಳುವ ಶಕ್ತಿ ಪಡೆದಿದ್ದರು. ಅವರ ಅಗಾಧ ಶಾಂತಿ, ನೆಮ್ಮದಿ ಹಾಗೂ ಮೌನ ಇವೆಲ್ಲವನ್ನು ವಿವರಿಸುತ್ತಿತ್ತು.

ತತ್ವಪದಕಾರರು ಕೆಲವು ಪ್ರಶ್ನೆಗಳನ್ನು ಮುಂದಿಡುತ್ತಾರೆ. ಇವು ತತ್ವದ ಒಡಪು, ರೀತಿ ಎಂದೇ ಹೇಳಬಹುದು. ಅದೇನೆಂದರೆ ಜ್ಞಾನ ಯಾವುದು ? ಎಂಬ ಪ್ರಶ್ನೆ. ಅದನ್ನು ಹೀಗೆ ವಿವರಿಸುತ್ತಾರೆ.

ದಿಟದಿಂದ ತನ್ನ ತಾ ಕಾಣಬೇಕು, ದಿಟದಿಂದ ತನ್ನ ತಾ ಕೇಳಬೇಕು, ದಿಟದಿಂದ ತನ್ನ ತಾ ಮಾತಾಡಬೇಕು, ಇದೇ ತನ್ನ ನೆಲೆ, ಇದೇ ಸ್ವಭೂಮಿ, ಇದೇ ಸ್ವಸ್ವರೂಪ, ಇದೇ ತತ್ವದ ಜ್ಞಾನ. ಸಾಧು ಸಂತರ ಮನಸ್ಸು ಸಹಜವಾಗಿಯೇ ಮೃದುವಾಗಿರುತ್ತದೆ. ಆದರೆ ಆಪತ್ಕಾಲದಲ್ಲಿ ಅಥವಾ ಧರ್ಮ ಅಧರ್ಮವಾಗುವ ಕಾಲದಲ್ಲಿ ಅವರ ಯಾವುದೇ ಮಾತಾಗಲೀ, ತತ್ವಪದವಾಗಲೀ, ಅದನ್ನು ನ್ಯಾಯಕ್ಕೆ ಅನುಸಾರವಾಗಿ ಕಠಿಣವಾಗಿಯೇ ಹೇಳುವುದುಂಟು. ಸಮಾಜದಲ್ಲಿ ನಡೆಯುವ ಅನಾಚಾರ, ಅಪಚಾರ, ಭ್ರಷ್ಟಾಚಾರ ಮತ್ತು ಅನೀತಿಗಳನ್ನು ತಡೆಯುವಲ್ಲಿ ಮನುಷ್ಯನಿಗೆ ನೀತಿ, ನಿಯಮ ಸತ್ಯ ಅಗತ್ಯ. ತತ್ವ ಎಂಬುವುದು ಕೇವಲ ಕೇಳುವುದಕ್ಕಲ್ಲ. ಅದೊಂದು ಆಚರಣೆಯ ಮಾರ್ಗ. 'ಎಲವೊ ಮಾನವ ಒಡವೆಯೆಂಬುದು ಜ್ಞಾನರತ್ನ ನೋಡಾ, ತತ್ವರತ್ನ ನೋಡಾ, ಆದರ್ಶರತ್ನ ನೋಡಾ' ಎಂದಿದ್ದಾನೆ ಅಲ್ಲಮಪ್ರಭು. ಡಯೋಜೀನ್ಸ್ ಎಂಬುವವನು ಗ್ರೀಸ್ ದೇಶದ ಬಹಳ ದೊಡ್ಡ ಸಂತ, ನಮ್ಮ ಅಲ್ಲಮನಂತೆ. ಮಗ್ಗುಲಲ್ಲಿ ನಾಯಿ ಬಿಟ್ಟರೆ, ಅವನ ತಂಪಿಗೆ ಒಂದು ಮರ. ಒಂದು ಸಲ ಒಬ್ಬ ಅಧಿಕಾರಿ ಅವನನ್ನು ಕಾಣಲಿಕ್ಕೆ ಬಂದನಂತೆ. ಡಯೋಜೀನ್ಸ್‌ನ ಮಾತು ಕೇಳಿ ಪ್ರಭಾವಿತನಾದನಂತೆ. ಅಥೆನ್ಸ್ ಪಟ್ಟಣದಲ್ಲೆಲ್ಲಾ ಡಯೊಜೀನ್ಸ್‌ನ ಪ್ರಭಾವ ಆ




ಕಾಲಕ್ಕೆ ಇತ್ತು. ಆತ, "ಗುರುಗಳೇ ತಾವು ದೊಡ್ಡ ಜ್ಞಾನಿಗಳು ತಮ್ಮ ಮಾತುಗಳನ್ನು ಕೇಳಿ ಸಾವಿರ ಸಾವಿರ ಜನ ತೃಪ್ತಿಪಟ್ಟು ಆನಂದಮಯವಾಗಿದ್ದಾರೆ. ತಮ್ಮ ಸೇವೆಗಾಗಿ ಒಂದು ವಿಶಾಲವಾದ ಮನೆ ಕೊಡುವ ಇಚ್ಛೆ ಇದೆ, ಅದನ್ನು ತಮಗರ್ಪಿಸುವೆ" ಎನ್ನುತ್ತಾನೆ. ಅದಕ್ಕೆ ಡಯೋಜೀನ್ಸ್ ಹೇಳುತ್ತಾನೆ : "ನೋಡು ಗೆಳೆಯ, ನಾನು ಈ ಮರದ ಕೆಳಗೆ ಕುಳಿತೇ ಜ್ಞಾನ ಪಡೆದವನು. ನನಗೆ ಈ ಮರದ ನೆರಳು ಪ್ರಿಯ, ಪ್ರಶಾಂತವಾದದ್ದು. ಆದ್ದರಿಂದ ನನಗೆ ಅರಮನೆ ಅವಶ್ಯಕತೆಯಿಲ್ಲ." ಮತ್ತೆ ಮುಂದುವರಿದು, "ನಿನಗೆ ನನ್ನ ಮಾತು ಕೇಳುವ ಆಸಕ್ತಿಯಿದ್ದರೆ, ಅರಮನೆ ಬಿಟ್ಟು ಹೊರಗೆ ಬರಬೇಕು. ನಾನು ಅರಮನೆಯೊಳಗೆ ಬರುವುದಿಲ್ಲ. ನನ್ನ ಮಾತುಗಳು ಅರ್ಥವಾಗಬೇಕಿದ್ದರೆ ನೀನು ನಿನ್ನ ಪರಿಸರ ತ್ಯಜಿಸು. ಇಷ್ಟು ದೂರ ಬಂದರೆ ನಿನ್ನ ನೀನು ಮರೆಯಬಹುದು. ಇಲ್ಲಿ ಮೇಲು ಕೀಳಿಲ್ಲ, ಎಲ್ಲಾ ಸಮ. ಎಲ್ಲರೂ ಸಮ" ಎನ್ನುತ್ತಾನೆ.

"ನನ್ನ ಮೈಮೇಲೆ ಬಟ್ಟೆ ಇಲ್ಲ, ನನಗೆ ಮನೆ ಬೇಕಿಲ್ಲ, ಮನ ಬೇಕು. ನಮ್ಮಂತೆಯೇ, ಹಿಂದೆ ಅನೇಕ ಸಂತರು, ತತ್ವಜ್ಞಾನಿಗಳಿದ್ದರು. ಇದೊಂದು ಆಂತರಿಕ ಶಕ್ತಿನೀಡುವ ತೃಪ್ತಿಯ ಭಾವ, ಬಾಹ್ಯ ತೃಪ್ತಿಗಳಿಗೆ ಬಲಿಯಾಗುತ್ತಿರುವ ಜನ ತಮ್ಮ ಗತಿಗಳನ್ನು ಗೌಣವಾಗಿಸಿ ಈ ಗತಿಗಳನ್ನು ಸ್ವೀಕರಿಸಬೇಕು. ಆಗ ಮಾತ್ರ ನಾವು ಮಾನವ ಕುಲದ ಸಂತಕನಾಗಿ ಇರಲು ಸಾಧ್ಯ ಎಂದು ಡಯೋಜೀನ್ಸ್ ಸಂತ ಸರ್ವಜ್ಞ ಮೂರ್ತಿಯಂತೆ ನುಡಿಯುತ್ತಾನೆ. ಇವೆಲ್ಲವೂ ಮನುಷ್ಯನ ಸತ್ಯಗರ್ಭಿತವಾದ ನಡೆ ನುಡಿಗೆ ಅರ್ಥ ಬರುತ್ತದೆ" ಎನ್ನುತ್ತಾನೆ.

೧೮೮೦ರ ಈಚೆಗೆ ನಮ್ಮ ನಾಡಿನ ಕೆಳವರ್ಗ, ಕೆಳಸಮುದಾಯದ ಕಲೆಗಳಾದ ಜಾನಪದವನ್ನು ಪಾಶ್ಚಿಮಾತ್ಯರು ಗುರ್ತಿಸಿದ ನಂತರ ನಮ್ಮ ದೇಶ, ನಾಡಿನ ಸಂಶೋಧನೆಯನ್ನು ಗುರುತಿಸಿದರು. ಆ ರೀತಿ ನಮ್ಮ ೧೮ನೇ ಶತಮಾನದಲ್ಲಿ ಬೆಳೆದು ಬಂದು ತತ್ವಪದಕಾರರ, ಸಂತರ, ಸೂಫಿಗಳ ಜೀವನ ಚರಿತ್ರೆ, ಅವರು ನಾಲಿಗೆಯಿಂದಲೆ ನಾಡಿನ ಉದ್ದಗಲಕ್ಕೆ ನಾದದಿಂದ ಏಕಾಂಗಿಯಾಗಿ ಬದುಕಿನ ನಾದ ಹಾಡಿದ ಹಲವು ಅನುಭವಗಳು, ಸಂತರ ಗೀತೆಗಳು. ಇವು ಎಲ್ಲೂ ಸರಿಯಾಗಿ ದಾಖಲಾಗಿಲ್ಲ. 'ತತ್ವಪದಗಳು ಇತ್ತ ದಾಸರಗೀತೆಗಳಿಗೂ ಸೇರುವುದಿಲ್ಲ, ಜಾನಪದ ಗೀತೆಗಳಿಗೂ ಸೇರುವುದಿಲ್ಲ' ಎಂಬ ಮಾತೂ ಇದೆ. ಇವು ವಚನ ಸಂದರ್ಭದ ನಂತರ ಹುಟ್ಟಿ ಕೊಂಡಿದ್ದರಿಂದ ವಚನಗಳಿಗಿಂತ ಪ್ರಭಾವಯುತವಾಗಿ ಬೆಳೆಯಲು ಸಾಧ್ಯವಾಗಲಿಲ್ಲ. ಕಾರಣ ವಚನತನದ ಗಟ್ಟಿತನವೊ ಅಥವಾ ಜನಪರ ಹಾದಿ ಹಿಡಿದು, ಅಂದಿನ ಸಾಮ್ರಾಜ್ಯಶಾಹಿಗಳ ವಿರುದ್ಧ ಸಮಾನತೆ ಸಾರಿದ, ಹೇಳಿದ ತತ್ವಗಳು ಕೆಲವರಿಗೆ ಇಷ್ಟವಾಗದ ಕಾರಣ ದಾಖಲು ಮಾಡಿಲ್ಲವೊ ಅಥವಾ ಈ ಪದಗಳ ಗೂಢಾರ್ಥಗಳು ಸರಿಯಾಗಿ ಕೇಳಿ ಅರ್ಥೈಸಿಕೊಳ್ಳದ ಕಾರಣ ದಾಖಲಾಗಲಿಲ್ಲವೊ, ಇದನ್ನು ಹೇಳುವುದು ಕಷ್ಟಸಾಧ್ಯ.

'ಮಾತೆಂಬುದು ಜ್ಯೋತಿರ್ಲಿಂಗ' ಎಂದರು ಶರಣರು. ಇಂದು ಮಾತುಗಳು ಬರೀ ಶಬ್ದದ ಸೂತಕ ವಷ್ಟೆ. 'ಮನುಷ್ಯ ಜಾತಿ ತಾನೊಂದೆ ವಲಂ' ಎಂದನು ಕವಿ ಪಂಪ. ಗೊತ್ತು ಗುರಿಯಿಲ್ಲದ ಕ್ಷಣಿಕ ಸುಖ ಲಾಭಗಳ ಬೆನ್ನ ಹತ್ತಿ ಸಾಗಿದೆ ಜನಾಂಗ. ಏನು ? ಎತ್ತ ? ಎನ್ನುವುದರ ಜ್ಞಾನ ಶೂನ್ಯ, ನೆನ್ನೆಗಳ ನಾಳೆಗಳ ಚರಿತ್ರೆಗೆ ದಾರಿ ಎಂಬ ಅರಿವು ನಮಗಿರುವುದಾದರೆ ಕ್ಷಣಿಕ ಬದುಕಿಗೆ ಇಷ್ಟೆಲ್ಲ ಕಷ್ಟವೇಕೆ ? ಎಂಬ ಅರಿವಿನ ದಾರಿ ತೋರುವ ತತ್ವಪದಗಳ ಜ್ಞಾನದ ಬೆಳಕು ಎಲ್ಲ ಜ್ಞಾನಕ್ಕಿಂತ ಬಹಳ ಮುಖ್ಯವೆನಿಸುತ್ತದೆ.

**ಪ್ರೊ॥ ಅಪ್ಪಗೆರೆ ತಿಮ್ಮರಾಜು**
ತತ್ವಪದ ಮತ್ತು ಜನಪದ ಚಿಂತಕರು
ನಂ. ೨೮, ೧೦ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ,
ಹಂಪಿನಗರ ವಿಜಯನಗರ, ಬೆಂಗಳೂರು – ೫೬೦ ೧೦೪





## ಲ್ಯಾಟಿನ್ ಅಮೆರಿಕದ ಐಕ್ಯತೆ – ಅಮೆರಿಕ ಏಕಾಂಗಿ

**ಉ**ತ್ತರ ಅಮೆರಿಕ ಖಂಡದ ದಕ್ಷಿಣದ ತುದಿಯಲ್ಲಿರುವ, ಖಂಡದ ಎರಡೂ ಭಾಗಗಳಿಗೆ ಭೂಸಂಧಿಯಂತಿರುವ ಪನಾಮಾ ದೇಶದ ರಾಜಧಾನಿ ಪನಾಮಾ ನಗರದಲ್ಲಿ ೨೦೧೫ರ ಏಪ್ರಿಲ್ ತಿಂಗಳಲ್ಲಿ ಜರುಗಿದ ಅಮೆರಿಕ ಖಂಡದ ದೇಶಗಳ ಶೃಂಗಸಭೆ ಎಲ್ಲ ರೀತಿಯಲ್ಲೂ ಐತಿಹಾಸಿಕವಾಗಿತ್ತು. ಅದಕ್ಕೆ ಮುಖ್ಯವಾದ ಕಾರಣ ಅರ್ಧ ಶತಮಾನಕ್ಕೂ ಹೆಚ್ಚು ಕಾಲದ ನಂತರ ಕೆರಿಬ್ಬಿಯನ್ ಸಮುದ್ರದ ದ್ವೀಪವಾದ ಕ್ಯೂಬಾ ಮೊದಲ ಬಾರಿಗೆ ಕ್ರಾಂತಿಯ ನಂತರ ಈ ಶೃಂಗಸಭೆಯಲ್ಲಿ ಭಾಗವಹಿಸಿದ್ದುದು ಮತ್ತು ಕೆರಿಬ್ಬಿಯನ್ ಹಾಗೂ ಲ್ಯಾಟಿನ್ ಅಮೆರಿಕದ ದೇಶಗಳು ತೋರಿದ ಐಕ್ಯತೆ. ವೆನಿಜುವೇಲ ರಾಷ್ಟ್ರದ ಮೇಲೆ ಅಮೆರಿಕ ಹೇರಿರುವ ಆರ್ಥಿಕ ದಿಗ್ಬಂಧನವನ್ನು ತೆರವುಗೊಳಿಸಲು ಒಮ್ಮತದಿಂದ ದಕ್ಷಿಣ ಅಮೆರಿಕದ ದೇಶಗಳು ಒತ್ತಾಯ ತಂದವು. ಈ ವಿಷಯದಲ್ಲಿ ಅಮೆರಿಕ ಏಕಾಂಗಿಯಾಗಿತ್ತು.

ಕ್ಯೂಬಾದ ಅಧ್ಯಕ್ಷ ರಾವುಲ್ ಕ್ಯಾಸ್ಟ್ರೊ ಮತ್ತು ಅಮೆರಿಕ ಅಧ್ಯಕ್ಷ ಬರಾಕ್ ಒಬಾಮಾ ಪರಸ್ಪರ ಭೇಟಿಯಾಗಿ ಕೈಕುಲುಕಿದ್ದು ಸಾಕಷ್ಟು ಪ್ರಚಾರ ಗಿಟ್ಟಿಸಿದರೂ ಶೃಂಗಸಭೆ ಅಂತಿಮ ಘೋಷಣೆ ನೀಡಲಾಗದೇ ಹೋಯಿತು. ಸದಸ್ಯ ರಾಷ್ಟ್ರಗಳ ಪೈಕಿ ೩೩ ದೇಶಗಳು ಅಂಗೀಕರಿಸಿದ್ದ ದಸ್ತಾವೇಜಿಗೆ ಉತ್ತರ ಅಮೆರಿಕ ಮತ್ತು ಕೆನಡಾದಿಂದ ವಿರೋಧ ಬಂದದ್ದರಿಂದ ಪ್ರಕಟಗೊಳ್ಳಲಿಲ್ಲ. ಶೃಂಗಸಭೆಯಲ್ಲಿ ವೆನಿಜುವೇಲ ರಾಷ್ಟ್ರದ ಮೇಲೆ ಸೇಡು ತೀರಿಸಿಕೊಳ್ಳುವ ಗುರಿಯಿಂದ ಅಮೆರಿಕ ಈಚೆಗೆ ವಿಧಿಸಿರುವ ದಿಗ್ಬಂಧನವನ್ನು ತೆರವುಗೊಳಿಸುವಂತೆ ಒತ್ತಾಯ ತಂದ ಲ್ಯಾಟಿನ್ ಅಮೆರಿಕದ ದೇಶಗಳು ವೆನಿಜುವೇಲ ಎಂದಿಗೂ ಅಮೆರಿಕದಂಥ ಶಕ್ತರಾಷ್ಟ್ರಕ್ಕೆ ಭೀತಿ ಒಡ್ಡಲಾರದು ಎಂಬುದನ್ನು ಸ್ಪಷ್ಟಪಡಿಸಿದವು. ವೆನಿಜುವೇಲದ ರಾಷ್ಟ್ರಪತಿ ನಿಕೊಲಾಸ್ ಮಡುರೋ ವೆನಿಜುವೇಲ ಅಮೆರಿಕದ ವಿರೋಧಿಯಲ್ಲ, ಸಾಮ್ರಾಜ್ಯಶಾಹಿ ವಿರೋಧಿ ಅಷ್ಟೆ ಎಂದು ಸ್ಪಷ್ಟಪಡಿಸಿದರು. 'ನಿಮ್ಮನ್ನು ಗೌರವಿಸುತ್ತೇನೆ. ಆದರೆ ನಿಮ್ಮನ್ನು ನಂಬುವುದಿಲ್ಲ' ಎಂದು ನೇರವಾಗಿ ಅಮೆರಿಕದ ಅಧ್ಯಕ್ಷರನ್ನು ಕುರಿತು ಹೇಳಿದರು.

ಹತ್ತೊಂಬತ್ತನೇ ಶತಮಾನದ ಕೊನೆಯಿಂದ ಇಲ್ಲಿಯವರೆಗೆ ದಕ್ಷಿಣ ಅಮೆರಿಕದ ದೇಶಗಳ ಮೇಲೆ ಅಮೆರಿಕ ನಡೆಸಿರುವ ಅಕ್ರಮಗಳನ್ನೂ, ಅನ್ಯಾಯಗಳನ್ನೂ ಸ್ಮರಿಸಿದ ರಾವುಲ್ ಕ್ಯಾಸ್ಟ್ರೋ "ಅಮೆರಿಕದ ಹಸ್ತಕ್ಷೇಪಗಳಿಂದ ಲ್ಯಾಟಿನ್ ಅಮೆರಿಕದ ಇಪ್ಪತ್ತು ದೇಶಗಳಲ್ಲಿ ಸರ್ವಾಧಿಕಾರಿ ಆಡಳಿತಗಳು ಸ್ಥಾಪನೆಗೊಂಡಿದ್ದುವು. ನೂರಾರು ಸಹಸ್ರ ಮಂದಿ ಈ ಸಂಘರ್ಷದಲ್ಲಿ ಸಾವಿಗೀಡಾಗಿದ್ದರು" ಎಂಬುದನ್ನು ನೆನಪು ಮಾಡಿದರು. ಅಮೆರಿಕ ವಿಧಿಸಿದ ಆರ್ಥಿಕ ದಿಗ್ಬಂಧನದಿಂದ ಕ್ಯೂಬಾದ ಜನಸಾಮಾನ್ಯರು ಸಂಕಷ್ಟಕ್ಕೀಡಾದರು. ಕ್ಯೂಬಾದ ಶೇ. ೭೭ ಭಾಗ ಜನ ಈ ಸಂಕಷ್ಟದಲ್ಲೇ ಬೆಳೆದರು. ಅವರು ರಾಷ್ಟ್ರಾಭಿಮಾನ, ಸ್ವಾಭಿಮಾನ ಎತ್ತಿಹಿಡಿದರು ಎಂಬುದನ್ನು ಹೇಳಿ 'ದುರಾಕ್ರಮಣ ನಮ್ಮ ಪ್ರತಿರೋಧವನ್ನು ವರ್ಧಿಸಿತು ಮತ್ತು ಕ್ರಾಂತಿಕಾರಿ ಪ್ರಕ್ರಿಯೆಯನ್ನು ತ್ವರೆಗೊಳಿಸಿತು' ಎಂದು ತಮ್ಮ ಭಾಷಣದಲ್ಲಿ ಹೇಳಿದ್ದು ಗಮನಾರ್ಹ.

೨೦೧೨ರಲ್ಲಿ ಕೊಲಂಬೋದಲ್ಲಿ ನಡೆದ ಅಮೆರಿಕ ದೇಶಗಳ ಶೃಂಗಸಭೆಯಲ್ಲಿ ಕ್ಯೂಬಾ ಭಾಗವಹಿಸಿರಲಿಲ್ಲ. ಆಗಲೂ ಕ್ಯೂಬಾದ ಮೇಲಿನ ದಿಗ್ಬಂಧನ ತೆರವುಗೊಳಿಸಲು ಒತ್ತಾಯವಿತ್ತು. ಅಮೆರಿಕ ಕ್ಯೂಬಾಗಳ ಮಧ್ಯೆ ಸಂಬಂಧಗಳು ಸುಧಾರಿಸತೊಡಗಿದ್ದು ಅನಂತರವೇ. ಈಗ ವೆನಿಜುವೇಲದ ಮೇಲೆ ಪ್ರತೀಕಾರ ತೀರಿಸಿಕೊಳ್ಳಲು ಅಮೆರಿಕ ನೋಡುತ್ತಿದೆ. ಕಳೆದ ಒಂದು ದಶಕಕ್ಕೂ ಹೆಚ್ಚು ಕಾಲದಿಂದ ದಕ್ಷಿಣ ಅಮೆರಿಕದ ದೇಶಗಳು ತೋರುತ್ತಿರುವ ಸೌಹಾರ್ದತೆ ಮತ್ತು ಐಕ್ಯತೆಯ ಮುಂದೆ ಅಮೆರಿಕದ ಕಿತಾಪತಿ ಏನೂ ನಡೆಯದು ಎಂಬುದು ಸ್ಪಷ್ಟ. ತನ್ನ ಧೋರಣೆಯನ್ನು ಒಪ್ಪದ ದೇಶಗಳ ಮೇಲೆ ದಿಢೀರ್ ಎಂದು ದಿಗ್ಬಂಧನ ಹೇರುವ ಅಮೆರಿಕದ ನೀತಿ ಇದುವರೆಗೆ ಯಾವ ನಿರೀಕ್ಷಿತ ಫಲವನ್ನೂ ನೀಡಿಲ್ಲ ಜನಸಾಮಾನ್ಯರನ್ನು ತೊಂದರೆಗೀಡುಮಾಡುವುದನ್ನು ಬಿಟ್ಟರೆ. ದುರಾಕ್ರಮಣಕ್ಕೆ ಪೂರ್ವಭಾವಿಯಾಗಿ ಅಮೆರಿಕ ಖಂಡನೀಯವಾದ ಈ ದಿಗ್ಬಂಧನ ಹೊರಿಸುತ್ತ ಬಂದಿದೆ. ಈ ಪರಿಪಾಠ ಪ್ರಾರಂಭವಾದ್ದು ಶೀತಯುದ್ಧದ ಕಾಲದಲ್ಲಿ. ಇನ್ನಾದರೂ ಅಮೆರಿಕ ಅದರ ವೈಫಲ್ಯವನ್ನು ಅರಿಯಲಿ, ವೆನಿಜುವೇಲದ ಮೇಲೆ ವಿಧಿಸಿರುವ ದಿಗ್ಬಂಧನವನ್ನು ಶೀಘ್ರವಾಗಿ ತೆರವುಗೊಳಿಸಲಿ.

ಈ ಸಂದರ್ಭದಲ್ಲಿ ಲ್ಯಾಟಿನ್ ಅಮೆರಿಕದ ದೇಶಗಳು ಪ್ರದರ್ಶಿಸಿರುವ ಐಕ್ಯತೆ ಶ್ಲಾಘನೀಯ. ಪರ್ಯಾಯ ವ್ಯವಸ್ಥೆ ರೂಪಿಸಲು ಅವು ನಡೆಸಿರುವ ಪ್ರಯತ್ನ ಯಶಸ್ವಿಯಾಗಲಿ ಎಂದು ಹಾರೈಸೋಣ. ಲ್ಯಾಟಿನ್ ಅಮೆರಿಕದ ಮಾದರಿ ಇತರ ಖಂಡಗಳ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಅನುಕರಣೀಯ. ಅಮೆರಿಕದ ಉದ್ಧಟತನಕ್ಕೆ ಅದೇ ಸರಿಯಾದ ಉತ್ತರ.

## ಬ್ರಿಟನ್‌ನಲ್ಲಿ ಬಲಪಂಥೀಯರ ಮೇಲುಗೈ

**ಬ್ರಿ**ಟನ್ನಿನಲ್ಲಿ ಈಚೆಗೆ ನಡೆದ ಮಹಾ ಚುನಾವಣೆಗಳಲ್ಲಿ ಬಲಪಂಥೀಯ ಕನ್ಸರ್‌ವೇಟಿವ್ ಪಕ್ಷ ಮತ್ತೆ ಅಧಿಕಾರಕ್ಕೆ ಬಂದು ಡೇವಿಡ್ ಕ್ಯಾಮೆರೂನ್ ಪ್ರಧಾನಿಯಾಗಿ ಮುಂದುವರಿದಿದ್ದಾರೆ. ಒಂದು ಕಾಲದಲ್ಲಿ ಜನಪರ ಧೋರಣೆ ಅನುಸರಿಸುತ್ತಿದ್ದು, ಎಡಪಂಥೀಯ ಎಂಬ ಹಣೆಪಟ್ಟಿಗೂ ಹೆಸರಾಗಿದ್ದ ಲೇಬರ್ ಪಕ್ಷ ಹೀನಾಯ ಸೋಲನ್ನು ಅನುಭವಿಸಿದೆ. ಹಾಗೆ ನೋಡಿದರೆ ಬ್ರಿಟನ್ನಿನಲ್ಲಿ ಬೇರೂರಿರುವ ದ್ವಿಪಕ್ಷೀಯ ವ್ಯವಸ್ಥೆಯಲ್ಲಿ ಲೇಬರ್ ಹಾಗೂ ಕನ್ಸರ್‌ವೇಟಿವ್‌ಗಳು ಅನುಸರಿಸುವ ನೀತಿಗಳಲ್ಲಿ ಹೆಚ್ಚಿನ ವ್ಯತ್ಯಾಸವೇನಿಲ್ಲ. ಪರ್ಯಾಯ ಎನಿಸಿರುವ ಪಕ್ಷಗಳು ತಲೆ ಎತ್ತುವ ಲಕ್ಷಣಗಳೇನೂ ಕಾಣಿಸುತ್ತಿಲ್ಲ.


**ಡೇವಿಡ್ ಕ್ಯಾಮೆರೂನ್**

ಈ ಬಾರಿ ನಡೆದ ಚುನಾವಣೆಗಳ ವಿಶೇಷ ಎಂದರೆ ಚುನಾವಣಾ ಪೂರ್ವದ ಎಲ್ಲ ಸಮೀಕ್ಷೆಗಳೂ ನೆಲಕಚ್ಚಿದ್ದು. ಚುನಾವಣೆಯಲ್ಲಿ ಯಾವ ಪಕ್ಷಕ್ಕೂ ಬಹುಮತ ದೊರಕದೆ ಸಮ್ಮಿಶ್ರ ಸರಕಾರವೇ ಬ್ರಿಟನ್ನಿಗೆ ಗತಿ ಎಂದು ನಿರೀಕ್ಷಿಸಲಾಗಿತ್ತು. ಆದರೆ ಅದೆಲ್ಲ ತಲೆಕೆಳಗಾಗಿ ಟೋರಿ ಪಕ್ಷ ಬಹುಮತ ಗಳಿಸಿದೆ. ಒಂದು ವಿಶೇಷ ಎಂದರೆ ಸ್ಕಾಟ್ಲೆಂಡ್‌ನಲ್ಲಿ ಸ್ಕಾಟಿಷ್ ನ್ಯಾಷನಲ್ ಪಾರ್ಟಿ ೫೬ ಸ್ಥಾನಗಳನ್ನು ಪಡೆದಿರುವುದು. ಈ ಪಕ್ಷ ಮೊದಲಿನಿಂದ ಸ್ಕಾಟ್ಲೆಂಡ್ ಪ್ರತ್ಯೇಕ ರಾಷ್ಟ್ರವಾಗಬೇಕೆಂದು ಬಯಸಿದೆ. ಸ್ಕಾಟ್ಲೆಂಡ್ ಪ್ರತ್ಯೇಕ ರಾಜ್ಯವಾಗಬೇಕೆ ಬೇಡವೆ ಎಂಬುದನ್ನು ಕುರಿತು ಕೆಲ ಸಮಯದ ಹಿಂದೆ ಜನಮತ ಗಣನೆ ನಡೆದಿತ್ತು. ಅದರ ಪ್ರಕಾರ ಬಹಳ ಕಡಿಮೆ ಅಂತರದಿಂದ ಬ್ರಿಟನ್ನಿನಲ್ಲೇ ಉಳಿಯುವುದಕ್ಕೆ ಮನ್ನಣೆ ದೊರೆತಿದ್ದುದನ್ನು ಗಮನಿಸಬಹುದು. ಹಾಗಾಗಿ ಮುಂದೆ ಈ ಭಾಗದ ಪ್ರತ್ಯೇಕತೆಯ ಪ್ರಶ್ನೆ ಮತ್ತೆ ಉದ್ಭವಿಸಲಿದೆ. ಹಾಗೆಯೇ ಕನ್ಸರ್‌ವೇಟಿವ್ ಪಕ್ಷಕ್ಕೆ ಯೂರೋಪಿಯನ್ ಒಕ್ಕೂಟದ ಕುರಿತು ಹೆಚ್ಚಿನ ಒಲವೇನಿಲ್ಲ. ಈ ಪ್ರಶ್ನೆ ಇನ್ನೆರಡು ವರ್ಷಗಳವರೆಗೆ ಇತ್ಯರ್ಥವಾಗದು. ಏಕೆಂದರೆ ಕನ್ಸರ್‌ವೇಟಿವ್ ಪಕ್ಷ ೨೦೧೭ರಲ್ಲಿ ಯೂರೋಪಿಯನ್ ಸದಸ್ಯತ್ವದ ಮುಂದುವರಿಕೆ ಬಗ್ಗೆ ಜನಮತ ಗಣನೆ ನಡೆಸಲಿದೆ. ಬ್ರಿಟನ್ನಿನ ಆರ್ಥಿಕ ಪರಿಸ್ಥಿತಿ ಅಷ್ಟೇನೂ ಸುಸ್ಥಿರವಾಗಿಲ್ಲ. ನಿರುದ್ಯೋಗದ ಬವಣೆ ತೀವ್ರಗೊಳ್ಳುತ್ತಿದೆ. ಮುಂದಿನ ಐದು ವರ್ಷಗಳು ಟೋರಿ ಪಕ್ಷಕ್ಕೆ ಸತ್ವಪರೀಕ್ಷೆ ಕಾಲವಾಗಲಿದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




# ವಚನಗಳ ವಿಸ್ಮಯ

**ಹಳಕಟ್ಟಿಯವರು ೧೯೨೧ರಲ್ಲಿ ಪ್ರಥಮ ಸಂಪುಟದ ಹಸ್ತಪ್ರತಿಯನ್ನು ಜೊತೆಗೆ ಐದುನೂರು ರೂಪಾಯಿಗಳ ಹಣವನ್ನು ಮಂಗಳೂರಿನ ಬ್ಯಾಸೆಲ್ ಮಿಷನ್ ಪ್ರೆಸ್ಸಿಗೆ ಕಳುಹಿಸಿದರು. ಶ್ರೇಷ್ಠ ರೀತಿಯ ಮುದ್ರಣಕ್ಕೆ ಹೆಸರಾಗಿತ್ತು ಅದು. ಆದರೆ ಕೆಲವು ವಾರಗಳಲ್ಲಿ ಹಸ್ತಪ್ರತಿಯ ಕಟ್ಟು ಮುಂಗಡ ಕಳುಹಿಸಿದ ಹಣದೊಂದಿಗೆ ಹಿಂದಕ್ಕೆ ಬಂದಿತು. ಜೊತೆಗೆ ಒಂದು ಪತ್ರವೂ ಇತ್ತು. ಅದರಲ್ಲಿ ಈ ವಚನಗಳನ್ನು ಮುದ್ರಿಸಲು ಒಪ್ಪದುದಕ್ಕೆ ಅವರು ಕಾರಣ ನೀಡಿದ್ದರು. ಈ ಗ್ರಂಥವು ನಮ್ಮ ಧರ್ಮದ ಅನೇಕ ಉತ್ತಮಾಂಶಗಳನ್ನು ಹೊಂದಿದೆ. ಇದನ್ನು ಪ್ರಕಟಿಸುವುದರಿಂದ ನಮ್ಮ ಧರ್ಮಪ್ರಸಾರಕ್ಕೆ ಅಡಚಣೆಯಾಗುತ್ತದೆ ಎಂದು ಬರೆದಿದ್ದರು.**

ಹನ್ನೆರಡನೆಯ ಶತಮಾನ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಅವಿಸ್ಮರಣೀಯವಾದುದು. ಅದಕ್ಕೆ ಕಾರಣ ವಚನ ಚಳುವಳಿ; ಹೀಗೆನ್ನುತ್ತಿದ್ದಂತೆ ವಚನಗಳ ಚಳುವಳಿಯ ಹಿಂದಿದ್ದ ವಚನಕಾರರನ್ನಂತು ಮರೆಯುವಂತೆಯೆ ಇಲ್ಲ.

ಇಂದೇನೊ ವಚನಗಳ ಬಗೆಗೆ ನಮ್ಮಲ್ಲಿ ವಿಶೇಷ ಆಸಕ್ತಿ ಮೂಡುತ್ತಿವೆ. ಆದರೆ ಇತಿಹಾಸವನ್ನು ನೋಡಿದರೆ ಕಳೆದ ಶತಮಾನದ ಆದಿಭಾಗದಲ್ಲಿ ವಚನಗಳೂ ಅಷ್ಟೊಂದು ಲಭ್ಯವಿರಲಿಲ್ಲ. ಬಸವಣ್ಣ ಕಲ್ಯಾಣವನ್ನು ಬಿಟ್ಟು ಹೋಗಬೇಕಾಗಿ ಬಂದ ಸಂದರ್ಭದಲ್ಲಿ ವಚನಕಾರರೆಲ್ಲ ಚೆಲ್ಲಾಪಿಲ್ಲಿಯಾಗಿ ಹೋದರು. ವಚನಗಳೂ ಎಲ್ಲೆಲ್ಲೊ ಚೆದುರಿಹೋದವು.

ಪ್ರಥಮಬಾರಿಗೆ ಭಿನ್ನಭಿನ್ನ ಕ್ಷೇತ್ರಗಳಲ್ಲಿ ಚೆಲ್ಲಾಪಿಲ್ಲಿ ಯಾಗಿದ್ದ ವಚನಗಳನ್ನು ಸಾಕಷ್ಟು ಶ್ರಮಪಟ್ಟು ಬಹಳಷ್ಟು ಸಂಗ್ರಹಿಸಿದವರು ಫ. ಗು. ಹಳಕಟ್ಟಿ ಅವರು. ಈ ವಚನಗಳ ಮಹತ್ತು ಅವರಿಗೆ ಅರಿವಾಗಿತ್ತು. ಅವರಿಂದಾಗಿ ಅಂದು ವೀರಶೈವ ಮಹಾಸಭೆಯ ಅಧ್ಯಕ್ಷರಾಗಿದ್ದ ಹಾನಗಲ್ಲು ಕುಮಾರಸ್ವಾಮಿಗಳಿಗೂ ವಚನಗಳ ಹಿರಿಮೆ ಮನದಟ್ಟಾಯಿತು. ಹಳಕಟ್ಟಿಯವರು ಮೂರು ಸಂಪುಟಗಳಲ್ಲಿ ಶಿಸ್ತುಬದ್ಧವಾಗಿ ಸಂಪಾದಿಸಿದ್ದ ವಚನಗಳ ಪ್ರಕಟಣೆಗೆಂದು ಐನೂರು ರೂಪಾಯಿಗಳ ದೇಣಿಗೆ ಕೊಡಿಸಿದರು, ದಾನಿಯೊಬ್ಬರಿಂದ. ಹಳಕಟ್ಟಿ ಅವರು ೧೯೨೧ರಲ್ಲಿ ಪ್ರಥಮ ಸಂಪುಟದ ಹಸ್ತಪ್ರತಿಯನ್ನು ಜೊತೆಗೆ ಐದುನೂರು ರೂಪಾಯಿಗಳ ಹಣವನ್ನು ಮಂಗಳೂರಿನ ಬ್ಯಾಸೆಲ್ ಮಿಷನ್ ಪ್ರೆಸ್ಸಿಗೆ ಕಳುಹಿಸಿದರು. ಶ್ರೇಷ್ಠ ರೀತಿಯ ಮುದ್ರಣಕ್ಕೆ ಹೆಸರಾಗಿತ್ತು ಅದು. ಆದರೆ ಕೆಲವು ವಾರಗಳಲ್ಲಿ ಹಸ್ತಪ್ರತಿಯ ಕಟ್ಟು ಮುಂಗಡ ಕಳುಹಿಸಿದ ಹಣದೊಂದಿಗೆ ಹಿಂದಕ್ಕೆ ಬಂದಿತು. ಜೊತೆಗೆ ಒಂದು ಪತ್ರವೂ ಇತ್ತು. ಅದರಲ್ಲಿ ಈ ವಚನಗಳನ್ನು ಮುದ್ರಿಸಲು ಒಪ್ಪದುದಕ್ಕೆ ಅವರು ಕಾರಣ ನೀಡಿದ್ದರು. ಈ ಗ್ರಂಥವು ನಮ್ಮ ಧರ್ಮದ ಅನೇಕ ಉತ್ತಮಾಂಶಗಳನ್ನು ಹೊಂದಿದೆ. ಇದನ್ನು ಪ್ರಕಟಿಸುವುದರಿಂದ ನಮ್ಮ ಧರ್ಮಪ್ರಸಾರಕ್ಕೆ ಅಡಚಣೆ ಯಾಗುತ್ತದೆ ಎಂದು ಬರೆದಿದ್ದರು.

ಅನ್ಯಧರ್ಮೀಯರಾದ ಕ್ರೈಸ್ತ ಮಿಷನರಿಗಳಿಗೆ ವಚನಗಳ ಮಹತ್ವದ ಅರಿವಾಗಿದ್ದುದು ಇದರಿಂದ ತಿಳಿಯುತ್ತದೆ. ಅನಂತರ ಈ ವಚನಗಳನ್ನು ಕುರಿತು ಕನ್ನಡದ ಶ್ರೇಷ್ಠ ವಿದ್ವಾಂಸರಲ್ಲೊಬ್ಬರಾದ ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿಗಳು ವಚನಸಾಹಿತ್ಯವನ್ನು – ಸಾಹಿತ್ಯ ವಿಶೇಷವೆಂದೂ ಹಿಂದೆ ಇಂಥದ್ದು ಇರಲಿಲ್ಲವೆಂದೂ ಹೇಳಿದರು. ಹಾಗಾದರೆ ವಚನಸಾಹಿತ್ಯದ ವಿಶೇಷವೇನು ಎಂದು ಪ್ರಶ್ನಿಸಿದರೆ ಬರುವ ಉತ್ತರ ನಮ್ಮನ್ನು ಬೆರಗು ಗೊಳಿಸುತ್ತದೆ.

ರಾಮಾಯಣದಂಥ ಕೃತಿ ಮೌಲ್ಯಗಳ ಪ್ರಶಂಸೆ ಮಾಡಿದರೆ ಮಹಾಭಾರತದಂಥ ಕೃತಿ ಮೌಲ್ಯಗಳ ಅನ್ವೇಷಣೆ ಮಾಡುತ್ತದೆ, ಆದರೆ ವಚನಸಾಹಿತ್ಯ ಎರಡು ರೀತಿಯ ವಿಶೇಷಗಳನ್ನು ಪಡೆದಿದೆ. ಒಂದು, ಇದು ಅಂದಿನ ಸಮಾಜದ ಅಪಮೌಲ್ಯಗಳನ್ನು ವಿಶ್ಲೇಷಿಸುತ್ತದೆ; ಜೊತೆಗೆ ಮೌಲ್ಯಗಳನ್ನು ರೂಪಿಸಿ ಅವುಗಳನ್ನು ಪ್ರಶಂಸಿಸುತ್ತದೆ, ಎರಡನೆಯದು ವಚನ ಸಾಹಿತ್ಯವು ತನ್ನ ಕಾಲದ ಬದುಕಿನೊಂದಿಗೆ ಪಡೆದ ತಾದಾತ್ಮ್ಯ. ಅಂದಿನ ಜನರ ಭಾಷೆ; ಸಾಹಿತ್ಯ ಹಾಗೂ ಜೀವನಗಳೊಂದಿಗೆ ಪಡೆದ ಸಂಕೀರ್ಣ ಸಂಬಂಧ ಅನ್ಯಾದೃಶವಾದುದು. ಜೊತೆಗೆ ವಚನಕಾರರಿಗಿದ್ದ ಸಾಹಿತ್ಯ ಪರಂಪರೆಯ ಪ್ರಜ್ಞೆ ಹಾಗೂ ಸೃಜನಶೀಲತೆ ಗಳು ವಚನಗಳನ್ನು ಬಹು ವಿಶಿಷ್ಟವಾಗುವಂತೆ ಮಾಡಿದವು.

ಅವುಗಳಲ್ಲಿರುವ ಸಾಹಿತ್ಯಿಕ ಮೌಲ್ಯಗಳು, ಭಾಷೆಗೆ ಸಂಬಂಧಿಸಿದ ಕ್ರಾಂತಿಕಾರಕ ಅಭಿವ್ಯಕ್ತಿಗಳು ಆವರೆಗೆ ಬೆಳೆದುಬಂದಿದ್ದ ಕಥನ ಪರಂಪರೆಯನ್ನು ಮುರಿದು ಹೊಸರೀತಿಯ ಮುಕ್ತಕಗಳ ಅಭಿವ್ಯಕ್ತಿಯ ಬಾಗಿಲನ್ನು ತೆರೆದವು. (ವಚನವಾಙ್ಮಯ ಮತ್ತು ಭಾಷೆ – ಜಿ. ಎಸ್. ಸಿದ್ಧಲಿಂಗಯ್ಯ – ವಿವರಗಳಿಗೆ ಈ ಗ್ರಂಥ ನೋಡಿ.) ವಿಶ್ವದಲ್ಲೆಲ್ಲೂ ಕಾಣಲಾಗದಷ್ಟು ಸಮಾಜದ ಕೆಳಸ್ತರದ ವ್ಯಕ್ತಿಗಳೂ ಅಸಾಧಾರಣವಾದ ವಚನಗಳನ್ನು ರಚಿಸಿದರು.

ವಚನಗಳಿಗೂ ಬದುಕಿಗೂ ಇದ್ದ ನಿಕಟ ಬಾಂಧವ್ಯದ ಕಾರಣವಾಗಿಯೆ ವಚನಗಳು ಹೊಸ ಧರ್ಮವೊಂದರ ಬೆಳಕನ್ನು ಕಂಡವು. ಅದನ್ನು ಶರಣಧರ್ಮ ಎಂದು ಹೇಳಬಹುದು. ಶರಣಧರ್ಮದ ಮೂರು ಮುಖ್ಯ ಶಿಖರಗಳು, ಅಷ್ಟಾವರಣಗಳು, ಪಂಚಾಚಾರ ಹಾಗೂ ಷಟ್ಸ್ಥಲಗಳು. ಗುರುಲಿಂಗ ಜಂಗಮ ಪ್ರಸಾದ ಪಾದೋದಕ ರುದ್ರಾಕ್ಷಿ, ವಿಭೂತಿ ಮಂತ್ರ ಇವು ಶರಣನ ಬದುಕಿಗೆ ರಕ್ಷಣೆ ನೀಡುವ ಕೋಟೆಗಳು – ಎಂಟು ಸುತ್ತಿನಕೋಟೆಗಳು; ಪಂಚಾಚಾರಗಳು – ಈ ಶರಣನಾದವನು ಸಮಾಜದೊಂದಿಗೆ ಪಡೆದುಕೊಳ್ಳ ಬೇಕಾದ ಸಂಬಂಧವನ್ನು ಕುರಿತು ಹೇಳುತ್ತವೆ. ಇನ್ನು ಷಟ್ಸ್ಥಲ ವ್ಯಕ್ತಿ – ಶರಣನಾದವನು ಶಿವನಾಗುವ ಹಾದಿಯನ್ನು ಸೂಚಿಸುತ್ತವೆ. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬುವುಗಳೇ ಆ ಆರು ಮೆಟ್ಟಿಲುಗಳು. ಇಷ್ಟೆಲ್ಲ ಧಾರ್ಮಿಕ ವಿಧಿಗಳನ್ನು ಹೇಳಿದರೂ ವಚನಸಾಹಿತ್ಯ ಕ್ರಾಂತಿಕಾರಕವಾಗುವುದು ಮಾತ್ರ ತನ್ನ ಆಚಾರದ ವಿಶೇಷ ಸತ್ವದಿಂದ.

ಅಷ್ಟಾವರಣಗಳಲ್ಲಿ ಬಹುಪ್ರಧಾನವಾದುವು ಗುರುಲಿಂಗ ಜಂಗಮಗಳು. ಇವುಗಳ ಮಹತ್ತು ಅರಿವಾದರೆ ಸಾಕು ಮಿಕ್ಕ ಐದೂ ಆವರಣಗಳು ಸುಲಭವಾಗಿ ಲಭ್ಯವಾಗುವಂಥವು.

ಇಲ್ಲಿ ವಚನಕಾರರು ಮತ್ತೊಂದು ಪರಿಕಲ್ಪನೆಯನ್ನು ಕಂಡುಕೊಂಡರು. ಅದೇ ಕಾಯಕವೆಂಬ ತತ್ವ. ಈ ಕಾಯಕತತ್ವ ನಾಣ್ಯದ ಇನ್ನೊಂದು ಮುಖ ದಾಸೋಹ. ಇಲ್ಲಿಯೇ ವಚನಕಾರರ ಕ್ರಾಂತಿಕಾರಕ ದೃಷ್ಟಿ ಇರುವುದು.

ಕಾಯಕದ ಮಹತ್ವ ಎಷ್ಟು ಎಂದರೆ ಕಾಯಕ ಶರಣನನ್ನು ಅಷ್ಟಾವರಣಗಳ ಅಗತ್ಯವಿಲ್ಲದಂತೆ ಕಾಪಾಡುತ್ತದೆ ಎಂಬ ಮಾತಿನ ಹಿಂದೆ ಇರುವ ಕ್ರಾಂತಿಕಾರಕ ದೃಷ್ಟಿಯನ್ನು ಗಮನಿಸಬೇಕು. ಅಂಥ ಕಾಯಕದಲ್ಲಿ ಮಗ್ನನಾದ ಶರಣನ ಅಂಗೇಂದ್ರಿಯಗಳು ಲಿಂಗೇಂದ್ರಿಯಗಳಾಗಿಬಿಡುತ್ತವೆ. ಶರಣನೇ ಶಿವನಾಗಿ ಬಿಡುತ್ತಾನೆ.

ಅಂಥ ಶರಣನಿಗೆ ಷಟ್ಸ್ಥಲಗಳೆಂಬ ಮೆಟ್ಟಿಲುಗಳ ಅಗತ್ಯವಿಲ್ಲ. ಕಾಯಕದಲ್ಲಿ ಮಗ್ನನಾಗುತ್ತಿದ್ದರೆ ಶರಣ ಐಕ್ಯಸ್ಥಲದವರೆಗೂ ಏರುತ್ತಾನೆ – ಎಂಬ ಕಲ್ಪನೆ ಆಧ್ಯಾತ್ಮಿಕ ಲೋಕದ ಪ್ರವೇಶದ ಹಾದಿಯನ್ನು ಸುಲಭವಾಗಿ ತೆರೆದಿಡುತ್ತದೆ, ಇಂಥ ಶರಣ–ಸುಗಂಧ ವಾಗಲು ತೆರೆಯುವುದಕ್ಕಾಗಿ ಉತ್ತರಾಯಣದ ವರೆಗೂ ಕಾಯಬೇಕಾಗುವುದಿಲ್ಲ, ಶಿವನಿದ್ದ ಕಡೆಯೇ ಕೈಲಾಸ ವಾಗುತ್ತದೆ – ಕಾಯಕವೇ ಕೈಲಾಸ ಎಂದದ್ದು ಇದೇ ಅರ್ಥದಲ್ಲಿಯೇ.

ಹೀಗೆ ಜೀವಂತವಾಗಿದ್ದಾಗಲೆ ಕಾಯಕ ದಾಸೋಹ ಗಳನ್ನು ಮಾಡುವ ಶರಣ ಬದುಕಿದ್ದಂತೆಯೆ ಕೈಲಾಸ ವನ್ನು ಕಾಣಬಲ್ಲ – ಕೈಲಾಸ ಭಾಗ್ಯವನ್ನು ಪಡೆಯಬಲ್ಲ ಎಂಬುದು ಶರಣರ ವಚನಗಳ ಮೂಲ ಉದ್ದೇಶ ಎಂಬುದು ಮನವರಿಕೆಯಾದಾಗ ವಚನಗಳು ಬದುಕಿನ ಭಾಗ್ಯ ಎನ್ನಿಸದೆ ಇರುತ್ತದೆಯೆ ?

**ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯ**
ನಂ. ೨೦೩, 'ಲಲಿತ ಕೃಪ', ೭ನೇ 'ಎ' ಮುಖ್ಯರಸ್ತೆ
ಆರ್.ಪಿ.ಸಿ. ಲೇಔಟ್, ವಿಜಯನಗರ (ಪೂರ್ವ)
ಬೆಂಗಳೂರು – ೫೬೦ ೦೪೦








# ಬಹುಮುಖ ಪ್ರತಿಭೆಯ ಕಲಾವಿದ ಪರ್ವತಗೌಡರ

ಗದಗಿನ ವಿಜಯ ಕಲಾಮಂದಿರದಲ್ಲಿ ಚಿತ್ರಕಲಾ ಶಿಕ್ಷಣವನ್ನು ಪಡೆದಿರುವ ಇವರು ಬೆಂಗಳೂರಿನ ಕೆನ್ ಕಲಾಶಾಲೆಯ ಆರ್.ಎಂ. ಹಡಪದ ಅವರಲ್ಲಿ ಶಿಷ್ಯರಾಗಿ ಡಿಪ್ಲೋಮ ಪದವಿ ಪಡೆದಿದ್ದಾರೆ. ಇವರ ರಚನಾತ್ಮಕ ಸ್ಥಾಪನಾ ಚಿತ್ರ, ಜೋಡನಾ ಚಿತ್ರ ಮತ್ತು ವಿಡಿಯೋ ಕಲೆಗಳ ಪ್ರದರ್ಶನವು ರಾಜ್ಯದ ಹಲವೆಡೆ ಪ್ರದರ್ಶನ ಗೊಂಡಿದೆ. ಗದಗಿನ ಹುಲಕೋಟಿಯಲ್ಲಿ ಟೆರಾಕಾಟ ಚಿತ್ರಕಲೆ, ಶಿಲ್ಪಕಲೆಗಳ ಶಿಬಿರವು ಆ ಭಾಗದ ಜನರಿಗೆ ಹೊಸ ಅನುಭವಗಳನ್ನು ನೀಡಿದೆ. ಇವರ ಪ್ರಯೋಗಾತ್ಮಕ ಕಲೆಯೆಂದರೆ ಚಿಕ್ಕ ಕಟ್ಟಿಗೆ ತುಂಡುಗಳನ್ನು ಸಂಗ್ರಹಿಸಿ ಪ್ಲಾಯ್‌ವುಡ್ ಮೇಲೆ ಕೃತಿಗಳನ್ನು ರಚನೆ ಮಾಡುವುದು. ಪ್ರಸ್ತುತ ಸರಕಾರಿ ಪ್ರಾಥಮಿಕ ಶಾಲೆಯ ಕನ್ನಡ ಸಾಮಾನ್ಯ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿರುವ ಇವರು ಮಕ್ಕಳಿಗೆ ಹಲವು ರೀತಿಯ ಚಿತ್ರಕಲೆ ಹಾಗೂ ಶಿಲ್ಪಕಲೆಗಳನ್ನು ಪರಿಚಯಿಸುತ್ತಿದ್ದಾರೆ.

– ಶ್ರೀಮತಿ ಆರ್. ಎಂ. ಗುಂಜಳ, ಶಿಕ್ಷಕಿ, ಗದಗ







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

